ಪ್ರತಿಯೊಂದು ಮನೆಯ, ಶಾಲೆಯ ಗ್ರಂಥ ಭಂಡಾರದಲ್ಲಿ ಇರಲೇಬೇಕಾದ ಕೃತಿಗಳು

# ನವಕರ್ನಾಟಕ ಸಾಹಿತ್ಯ ಸಂಪದ

ಸಂಪಾದಕರು : ಡಾ|| ಪ್ರಧಾನ್ ಗುರುದತ್ತ

ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಕನ್ನಡ ಲೇಖಕರ ಬದುಕು–ಬರೆಹಗಳ ಪರಿಚಯ – ಖ್ಯಾತ ಲೇಖಕ, ವಿಮರ್ಶಕರಿಂದ.

ಈವರೆಗೆ ಪ್ರಕಟವಾಗಿರುವ 36 ಸಂಪುಟಗಳ ಶೀರ್ಷಿಕೆ ಮತ್ತು ಲೇಖಕರು :

| | |
|---|---|
| ಕುವೆಂಪು | ಡಾ|| ಪ್ರಧಾನ್ ಗುರುದತ್ತ |
| ರಂ. ಶ್ರೀ. ಮುಗಳಿ | ಡಾ|| ತಾಳ್ತಜೆ ವಸಂತಕುಮಾರ |
| ದ. ರಾ. ಬೇಂದ್ರೆ | ಎನ್ಕೆ. ಕುಲಕರ್ಣಿ |
| ಶಿವರಾಮ ಕಾರಂತ | ಮಾಲಿನಿ ಮಲ್ಯ |
| ವಿ. ಕೃ. ಗೋಕಾಕ | ಡಾ|| 'ಜೀವಿ' ಕುಲಕರ್ಣಿ |
| ದೇವುಡು | ಡಾ|| ಸಿ. ಎಸ್. ಶಿವಕುಮಾರಸ್ವಾಮಿ |
| ಬಿ. ಪುಟ್ಟಸ್ವಾಮಯ್ಯ | ಡಾ|| ಕೃಷ್ಣಮೂರ್ತಿ ಹನೂರು |
| ಡಿ. ವಿ. ಗುಂಡಪ್ಪ | ಡಿ. ಆರ್. ವೆಂಕಟರಮಣನ್ |
| ಎ. ಎನ್. ಮೂರ್ತಿರಾವ್ | ಡಾ|| ಪಿ. ಶಾಂತಾರಾಮ ಪ್ರಭು |
| ಚದುರಂಗ | ಡಾ|| ಎಂ. ಎಸ್. ವೇದಾ |
| ವ್ಯಾಸರಾಯ ಬಲ್ಲಾಳ | ಡಾ|| ಡಿ. ವಿಜಯಲಕ್ಷ್ಮಿ |
| ಚಂದ್ರಶೇಖರ ಕಂಬಾರ | ಡಾ|| ಬಸವರಾಜ ಮಲಶೆಟ್ಟಿ |
| ಬಿ. ಜಿ. ಎಲ್. ಸ್ವಾಮಿ | ಡಾ|| ಮುಳುಕುಂಟೆ ರಮೇಶ್ |
| ರಾ.ಶಿ. | ಡಾ|| ಎಚ್. ಎಸ್. ಗೋಪಾಲ ರಾವ್ |
| ದೇವನೂರ ಮಹಾದೇವ | ಎನ್. ಪಿ. ಶಂಕರನಾರಾಯಣ ರಾವ್ |
| ಪು.ತಿ.ನ. | ಡಾ|| ಪ್ರಭುಶಂಕರ |
| ಶ್ರೀನಿವಾಸ (ಮಾಸ್ತಿ ವೆಂಕಟೇಶ ಅಯ್ಯಂಗಾರ್) | ಪ್ರೊ|| ಜಿ. ಎಸ್. ಸಿದ್ದಲಿಂಗಯ್ಯ |
| ತ.ರಾ.ಸು. | ನಾ. ಪ್ರಭಾಕರ |
| ಪೂರ್ಣಚಂದ್ರ ತೇಜಸ್ವಿ | ಡಾ|| ಎಚ್. ಎಂ. ಮಹೇಶ್ವರಯ್ಯ |
| ಹಾ. ಮಾ. ನಾಯಕ | ಡಾ|| ಪ್ರಧಾನ್ ಗುರುದತ್ತ |
| ಚಿದಾನಂದಮೂರ್ತಿ | ಡಾ|| ಸಂಗಮೇಶ ಸವದತ್ತಿಮಠ |
| ಗಿರೀಶ್ ಕಾರ್ನಾಡ್ | ಡಾ|| ಮೀರಾ ಮೂರ್ತಿ |
| ಯಶವಂತ ಚಿತ್ತಾಲ | ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ |
| ಕೆ. ಎಸ್. ನರಸಿಂಹಸ್ವಾಮಿ | ಡಾ|| ರಾಮೇಗೌಡ |
| ಶಾಂತಿನಾಥ ದೇಸಾಯಿ | ಡಾ|| ಪ್ರೀತಿ ಶುಭಚಂದ್ರ |
| ಎಸ್. ಎಲ್. ಭೈರಪ್ಪ | ದೇಶ ಕುಲಕರ್ಣಿ |
| ಪಿ. ಲಂಕೇಶ್ | ಡಾ|| ಹಾಲತಿ ಸೋಮಶೇಖರ್ |
| ಎ. ಆರ್. ಕೃಷ್ಣಶಾಸ್ತ್ರಿ | ಬಿ. ವಿ. ಶ್ರೀಧರ |
| ಕೀರ್ತಿನಾಥ ಕುರ್ತಕೋಟಿ | ಡಾ|| ಕೃಷ್ಣಮೂರ್ತಿ ಚಂದರ್ |
| ಗೋಪಾಲಕೃಷ್ಣ ಅಡಿಗ | ಬಾಲಸುಬ್ರಹ್ಮಣ್ಯ ಕಂಜರ್ಪಣೆ |
| ವಿ. ಸೀತಾರಾಮಯ್ಯ | ಪ್ರೊ|| ಎಂ. ರಾಮಚಂದ್ರ |
| ಎಲ್. ಎಸ್. ಶೇಷಗಿರಿ ರಾವ್ | ಡಾ|| ಪಿ. ವಿ. ನಾರಾಯಣ |
| ಎಚ್. ತಿಪ್ಪೇರುದ್ರಸ್ವಾಮಿ | ಡಾ|| ಎನ್. ಎಸ್. ತಾರಾನಾಥ |
| ಎಸ್. ವಿ. ರಂಗಣ್ಣ | ಡಾ|| ಸಿ. ಪಿ. ಕೃಷ್ಣಕುಮಾರ್ |
| ಗೊರೂರು ರಾಮಸ್ವಾಮಿ ಅಯ್ಯಂಗಾರ್ | ಡಾ|| ಪ್ರಧಾನ್ ಗುರುದತ್ತ |
| ಬಿ. ಸಿ. ರಾಮಚಂದ್ರ ಶರ್ಮ | ಲಿಂಗದೇವರು ಹಳೆಮನೆ |

ಪ್ರತಿ ಸಂಪುಟದ ಬೆಲೆ ರೂ. 60. ಅಂಚೆವೆಚ್ಚ ರೂ. 20 ಪ್ರತ್ಯೇಕ.
ಒಮ್ಮೆಗೆ 12 ಅಥವಾ ಹೆಚ್ಚು ಸಂಪುಟಗಳನ್ನು ತರಿಸಿಕೊಳ್ಳುವವರಿಗೆ ಅಂಚೆವೆಚ್ಚ ಉಚಿತ.
'ಹೊಸತು' ಪತ್ರಿಕೆಗೆ ಮೂರು ವರ್ಷಗಳ ಚಂದಾ ನೀಡಿದವರಿಗೆ ಈ ಸಂಪುಟಗಳ ಬೆಲೆಯ ಮೇಲೆ ಶೇ. 20ರ ರಿಯಾಯಿತಿ. ಇಂದೇ ಎಂ. ಓ. ಅಥವಾ ಡಿ. ಡಿ. ಕಳಿಸಿ :

## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಬೆಂಗಳೂರು - 560 001
✆ 22203580, 30578022 ಫ್ಯಾಕ್ಸ್: 30578023 E-mail : navakarnataka@vsnl.com

ಶಾಖೆಗಳು : ಬೆಂಗಳೂರು ✆ 22251382 :: ಮಂಗಳೂರು ✆ 2441016 :: ಮೈಸೂರು ✆ 2424094 :: ಗುಲ್ಬರ್ಗಾ ✆ 224302




# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಮೋನಪ್ಪ, ಎನ್. ಆರ್. ಬೊಮ್ಮಳ್ಳಿ, ರವೀಂದ್ರ, ಶ್ರೀಕೃಷ್ಣ ಕೆದಿಲಾಯ, ಆದರ್ಶ ಪೈ, ಶ್ರೀಹರಿ, ಜಿ. ಎಂ. ಬೊಮ್ಮಳ್ಳಿ

ಮುಖಚಿತ್ರ : ತನ್ವಿ, ಚಿತ್ರಕೃಪೆ : ಕೆ. ಪಿ. ಸ್ವಾಮಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

೨೦೦೬ ಭಯಂಕರವಾದ ರೀತಿಯಲ್ಲಿ ಅಂತ್ಯಗೊಂಡಿದೆ. ಇರಾಕಿನ ಅಧ್ಯಕ್ಷ ಸದ್ದಾಂ ಹುಸೇನರನ್ನು ನೇಣು ಹಾಕುವ ಖಳನಾಯಕನಾಗಿ ಅಮೆರಿಕಾದ ಅಧ್ಯಕ್ಷ ವಿಶ್ವದ ಎಲ್ಲ ರಾಷ್ಟ್ರಗಳಿಗೂ ತನ್ನ ವಿಧ್ವಂಸಕ ಶಕ್ತಿ ಮತ್ತು ಅಂತರರಾಷ್ಟ್ರೀಯ ನಡೆವಳಿಕೆಗೆ ವಿರೋಧವಾದ ಪ್ರತಾಪವನ್ನು ಪ್ರದರ್ಶಿಸಿ ಕಿರಾತನಾಗಿ ಕಾಣಿಸಿಕೊಂಡಿದ್ದಾನೆ. ತನ್ನೊಡನೆ ಅತೀವ ಸಖ್ಯ ಬೆಳೆಸಿದ ಮಿತ್ರರಾಷ್ಟ್ರಗಳ ರಾಜಕೀಯ ಧುರೀಣರು ಎಂದಾದರೊಂದು ದಿನ ಗಲ್ಲಿಗೇರಿಸಲ್ಪಡುತ್ತಾರೆಂಬ ಎಚ್ಚರಿಕೆಯನ್ನು ಬುಷ್ ನೀಡಿರುವುದು ಗಮನಾರ್ಹ. ಅಂತಹ ಮಿತ್ರರಾಷ್ಟ್ರಗಳು ಸ್ವಾತಂತ್ರ್ಯ-ಸಾರ್ವಭೌಮತ್ವಗಳನ್ನು ಬಯಸಿ ತಮ್ಮ ಸಂಪತ್ತನ್ನು ತಮ್ಮದಾಗಿಸಿಕೊಳ್ಳಲು ಹೊರಟರೆ ಅವಕ್ಕೆ ಬಾಳುವ ಹಕ್ಕಿಲ್ಲವೆಂಬುದು ಬುಷ್ ಸಿದ್ಧಾಂತ. ಇರಾನಿನ ವಿರುದ್ಧ ಇರಾಕನ್ನು ಅಮೆರಿಕಾ ಹೇಗೆ ಬೆಂಬಲಿಸಿತ್ತೆಂಬುದನ್ನು ಇರಾನಿನ ನೊಬೆಲ್ ಪಾರಿತೋಷಕ ವಿಜೇತೆ ಶಿರೀನ್ ಎಬಾದಿ ತನ್ನ ಆತ್ಮಕತೆಯಲ್ಲಿ ಬರೆದಿದ್ದಾಳೆ. ತನ್ನ ಸೈನ್ಯದ ತುಕಡಿಗಳನ್ನು ಇರಾನ್ ಎಲ್ಲೆಲ್ಲಿ ನೆಲೆಗೊಳಿಸಿತ್ತೆಂಬುದನ್ನು ಸೆಟಲೈಟ್ ಚಿತ್ರಗಳನ್ನೊದಗಿಸುವ ಮೂಲಕ ರೀಗನ್ ಸದ್ದಾಂಗೆ ತಿಳಿಸಿದ್ದನಂತೆ. ವಿಷಾನಿಲಗಳನ್ನು ಉಪಯೋಗಿಸಲು ಈ ಮಾಹಿತಿ ಅತ್ಯಗತ್ಯವಾಗಿದ್ದಿತೆಂದು ಆಕೆ ವಿವರಿಸಿದ್ದಾಳೆ. ನಮ್ಮ ಮಾಧ್ಯಮಗಳು ಅಮೆರಿಕಾ-ಬ್ರಿಟನ್ ಮಾಧ್ಯಮಗಳ ಬಾಲಂಗೋಚಿಗಳಂತೆ ವರ್ತಿಸುವುದರಿಂದ ಸದ್ದಾಂ ಎಂದರೆ ಕೊಲೆಗಡುಕ, ಬುಷ್ ಎಂದರೆ ಮಾನವತಾವಾದಿ ಎಂಬ ಭ್ರಮೆ ಬಂದುಬಿಡಬಹುದು. ತನ್ನ ಮೇಲೆ ಆಕ್ರಮಣ ನಡೆಸುವವರನ್ನು ಬುಷ್ ಹೇಗೆ ನಡೆಸಿಕೊಳ್ಳುತ್ತಾನೆ? ಗ್ವಾಂಟನಾಮೊ ಕಾರಾಗೃಹ ಅದಕ್ಕೆ ಉತ್ತರ ಕೊಡುತ್ತದೆ. ಆರೂವರೆ ಲಕ್ಷ ಜನರನ್ನು ಹತ್ಯೆಗೈದು, ಬುಷ್ ನೂರಿಪ್ಪತ್ತು ಜನಗಳನ್ನು ಕೊಂದ ಸದ್ದಾಮನನ್ನು ಗಲ್ಲಿಗೇರಿಸುತ್ತಾನೆ, ಅದು ಪ್ರಜಾಪ್ರಭುತ್ವ! ಹೀಗೆ ಗಲ್ಲಿಗೇರಿಸಿದವನನ್ನು ಗಲ್ಲಿಗೇರಿಸುವವರು ಯಾರು? ೨೦೦೭ ಅದಕ್ಕೆ ಉತ್ತರ ನೀಡಬೇಕು.

ಬುಷ್ ಆದೇಶದಂತೆ ನಡೆದುಕೊಳ್ಳುತ್ತಿರುವ ಇಂದಿನ ಇರಾಕಿನ ಕೈಗೊಂಬೆ ಸರ್ಕಾರದ ನೇತಾರರು ನೇಣಿನ ಹಗ್ಗ ನೆನೆಸಿಕೊಂಡು ಈಗಾಗಲೆ ಕಂಪಿಸುತ್ತಿರಬೇಕು. ಅಮೆರಿಕಾದಿಂದಾಗಿ ಇರಾಕ್, ಆಫ್ಘಾನಿಸ್ತಾನಗಳಲ್ಲಿ ಆದಂತೆ ಈಗ ಪಾಕಿಸ್ತಾನ, ಸೋಮಾಲಿಯಾಗಳಲ್ಲೂ ನಾಗರಿಕರು ಹತರಾಗುತ್ತಿದ್ದಾರೆ. ಇದನ್ನೆಲ್ಲಾ ನೋಡಿದರೆ ಭಯೋತ್ಪಾದಕರು ಯಾರೆಂಬುದೇ ಜಿಜ್ಞಾಸೆಗೆ ವಿಷಯವಾಗುತ್ತದೆ : ಅಮೆರಿಕಾ ಸರ್ಕಾರವೋ ಅಥವಾ ಕೆಲವು ಸಾವಿರಗಳಷ್ಟಿರುವ ಅಮೆರಿಕಾ ವಿರೋಧಿ ಬಣಗಳವರೋ? ಇರಾಕಿನ ದುರಂತವು ಬದಲಾವಣೆ ಕಾಣುತ್ತಿರುವ ಎಲ್ಲ ದೇಶಗಳಿಗೂ ಒಂದು ಎಚ್ಚರ. ನೇಪಾಳ, ಇರಾನ್, ಕ್ಯೂಬಾ, ಚಿಲಿ, ವೆನಿಝುಯೇಲ, ಬೊಲಿವಿಯ, ಕೊಲಂಬಿಯ, ನಿಕರಾಗುವ ಎಲ್ಲಾ ಇದರಲ್ಲಿ ಸೇರಿವೆ. ಪ್ರಧಾನಿ ಮನಮೋಹನ ಸಿಂಗರು ನಮ್ಮ ದೇಶವನ್ನು ಅಮೆರಿಕಾದ ಕುಣಿಕೆಗೆ ಸೇರಿಸಲು ತವಕಿಸುವುದನ್ನು ಇನ್ನಾದರೂ ನಿಲ್ಲಿಸಿಯಾರೆ? ಆ ಬೋನಿಗೆ ನಮ್ಮ ದೇಶವು ಬಿದ್ದರೆ ಮುಂದಿನ ಪೀಳಿಗೆಯವರು ನಮ್ಮನ್ನೆಂದೂ ಕ್ಷಮಿಸುವುದಿಲ್ಲ. ಎಷ್ಟು ಭವ್ಯವಾದ ಪ್ರಾಚೀನ ಇತಿಹಾಸವನ್ನುಳ್ಳ ಇರಾಕ್ ಏನಾಗಿಹೋಯಿತೆಂಬುದನ್ನು ನೋಡಿದರೆ ಆಧುನಿಕ ಬರ್ಬರತೆಯ ಪರಿಚಯವಾಗುತ್ತದೆ. ಅಲ್ಲಿಯ ವಸ್ತುಸಂಗ್ರಹಾಲಯಗಳನ್ನು ಸಹ ಅಮೆರಿಕಾ ಪುಡಿಪುಡಿ ಮಾಡಿಹಾಕಿತು. ಇದು ನಾಗರಿಕತೆಯ ಚಿಹ್ನೆಯಲ್ಲ, ದರ್ಪದ ಮೃಗೀಯ ಅಭಿವ್ಯಕ್ತಿ. ಅಷ್ಟೆಲ್ಲಾ ಮಾಡಿ ಈಗ ಇಡೀ ಇರಾಕಿನ ಪ್ರಶ್ನೆಯು ಸುನ್ನಿ-ಷಿಯಾ ಪಂಗಡಗಳ ನಡುವಿನ ಘರ್ಷಣೆ ಎಂಬಂತೆ ಚಿತ್ರಿಸಲಾಗುತ್ತಿದೆ. ಬ್ರಿಟಿಷರು ಭಾರತದಲ್ಲಿ ಮಾಡಿದ್ದೂ ಅದನ್ನೇ: ಸ್ವಾತಂತ್ರ್ಯ ಸಂಗ್ರಾಮವು ಹಿಂದು-ಮುಸಲ್ಮಾನರ ಘರ್ಷಣೆ ಎಂಬಂತೆ ನಡೆದುಕೊಂಡದ್ದು, ದೇಶ ವಿಭಜನೆ ಮಾಡಿದ್ದು. ಜಡ್ಡು ಮತಧರ್ಮದ ಅಪ್ಪುಗೆಯಿಂದ ಬಿಡಿಸಿಕೊಂಡು ಇರಾಕ್ ಶಿಕ್ಷಣ, ಆರೋಗ್ಯ, ಸಾರಿಗೆ, ತಂತ್ರಜ್ಞಾನ ಹೀಗೆ ಎಲ್ಲ ಕ್ಷೇತ್ರಗಳಲ್ಲೂ ಬೇರೆ ಅರಬ್ ದೇಶಗಳಿಗಿಂತಲೂ ಭಿನ್ನವಾಗಿ ಅಭಿವೃದ್ಧಿ ಹೊಂದಿತ್ತು. ಒಂದು ಆಧುನಿಕ ಧರ್ಮನಿರಪೇಕ್ಷ ಹಾದಿಯಲ್ಲಿ ಮುನ್ನಡೆಯುತ್ತಿದ್ದ ಇರಾಕನ್ನು ಅಮೆರಿಕಾ ಮಧ್ಯಯುಗದ ಕತ್ತಲೆಗೆ ನೂಕಿದೆ. ಇದನ್ನರಿಯದೆ ಅರಬ್ ರಾಷ್ಟ್ರಗಳ ಮುಲ್ಲಾಗಳು ತಮ್ಮ ದೇಶಗಳ ಜನತೆಯನ್ನು ತಪ್ಪು ದಾರಿಗೆಳೆಯುತ್ತಿದ್ದಾರೆ. ಇರಾಕಿನ ತೈಲವನ್ನು ಖಾಸಗೀಕರಿಸಿ ಲೂಟಿಗೆ ಏರ್ಪಾಟು ಮಾಡಿಕೊಳ್ಳುತ್ತಿರುವ ಬುಷ್ ಈ ಮುಲ್ಲಾಗಳಿಗೆ ಕಾಣುವುದಿಲ್ಲ; ಅಮೆರಿಕಾ ಪರವಾದ ಅರಬ್ ದೇಶಗಳ ನಾಯಕರು ಅದನ್ನು ಕಂಡೂ ಕಣ್ಣು ಮುಚ್ಚಿಕೊಂಡಿದ್ದಾರೆ. ಪ್ರಪಂಚಕ್ಕೆ ಕೊಳ್ಳಿ ಇಡಲು ಬುಷ್ ನಾಳೆ ಇರಾಕಿನ ತೈಲವನ್ನು ಇಂಧನವನ್ನಾಗಿ ಮಾಡಿಕೊಳ್ಳದೆ ಬಿಡನು. ಅದರಿಂದ ಮತ್ತಷ್ಟು ಭಯೋತ್ಪಾದನೆಗೆ ಪ್ರಚೋದನೆ ಕೊಟ್ಟಂತಾಗುತ್ತದೆ.

ಅಮೆರಿಕಾದ ಜನರು ಪ್ರಜಾಪ್ರಭುತ್ವದಡಿ ಜೀವಿಸುತ್ತಿದ್ದಾರೆ, ಚಿಂತಿಸುತ್ತಿದ್ದಾರೆ ಎಂಬುದೇ ಸುಳ್ಳೇನೋ ಎನ್ನುವಷ್ಟು ಪರಿಸ್ಥಿತಿ ಹದಗೆಟ್ಟಿದೆ. ಒಂದು ತಿಂಗಳ ಹಿಂದಿನ ಚುನಾವಣೆಯಲ್ಲಿ ಅಮೆರಿಕಾದ ನಾಗರಿಕರು ಇರಾಕ್ ಯುದ್ಧವನ್ನು ನಿರಾಕರಿಸಿದರು, ಆದರೆ ಈ ತಿಂಗಳು ಅಮೆರಿಕಾದ ಅಧ್ಯಕ್ಷ ಇನ್ನೂ ಮೂವತ್ತು ಸಾವಿರ ಸೈನಿಕರನ್ನು ಇರಾಕಿಗೆ ಕಳಿಸಲಿದ್ದಾನೆ! ಪ್ರಜಾಪ್ರಭುತ್ವದ ಹೆಸರಿನಲ್ಲಿ ಜರುಗುತ್ತಿರುವ ಈ ವ್ಯಂಗ್ಯಕ್ಕೆ ಅಮೆರಿಕಾದ ಪ್ರಜೆಗಳ ಪ್ರತಿಕ್ರಿಯೆ ಏನು? ಬರುವ


೮ನೇ ಪುಟಕ್ಕೆ




ಸಂಪುಟ-೮ ಸಂಚಿಕೆ-೭ ಫೆಬ್ರವರಿ ೨೦೦೭

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೧ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೯೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
e-mail : navakarnataka@vsnl.com
website : www.navakarnatakabooks.com

**ಸಂಪಾದಕೀಯ**

# ಭೂಮಿ ವಶಪಡಿಸಿಕೊಳ್ಳುವಿಕೆಯ ವ್ಯವಹಾರ

ರೈತನನ್ನು ಒಬ್ಬ ನಿಷ್ಪ್ರಯೋಜಕ ವ್ಯಕ್ತಿ, ಸಮಾಜದ ಮೇಲೆ ಹೊರೆ ಎಂಬಂತೆ ಇಂದಿನ ಆರ್ಥಿಕ ಚಿಂತನೆ ವರ್ಣಿಸುತ್ತದೆ. "ಕೈಗಾರಿಕಾ ಅಭಿವೃದ್ಧಿ ದರ ತೀರಾ ಹೆಚ್ಚಿದೆ. ಆದರೆ, ಕೃಷಿಯ ದರ ಕುಂಟುತ್ತಿದ್ದು ರಾಷ್ಟ್ರೀಯ ಅಭಿವೃದ್ಧಿ ದರವನ್ನು ಕೆಳಕ್ಕೆ ಇಳಿಸಿದೆ. ರೈತನಿಗೆ ಕೃಷಿಯನ್ನು ಲಾಭದಾಯಕವಾಗಿ ನಡೆಸಲು ಬರುವುದಿಲ್ಲ. ಕೃಷಿಭೂಮಿಯ ಆರ್ಥಿಕ ಮೌಲ್ಯ ಅದನ್ನು ಉಪಯೋಗಿಸಿ ಉತ್ಪಾದಿಸುವ ಕೃಷಿ ಉತ್ಪನ್ನಗಳ ಮೌಲ್ಯಕ್ಕಿಂತ ತೀರಾ ಹೆಚ್ಚಿದೆ. ಕೃಷಿಯನ್ನು ಕೈಗಾರಿಕೆಯಂತೆ ನಡೆಸುವುದು ಅಗತ್ಯ. ಅವನಿಗೆ ಅದು ಬರುವುದಿಲ್ಲ. ವ್ಯವಸಾಯ ದಂಧೆಯಿಂದ ರೈತರನ್ನು ಬಿಡಿಸಬೇಕು. ಕೈಗಾರಿಕೆಯಲ್ಲಿ ಕಾಲಕ್ರಮೇಣ ಅವರಿಗೆ ಉದ್ಯೋಗ ಸಿಕ್ಕುತ್ತದೆ. ಆಹಾರ ಪದಾರ್ಥಗಳೂ ಸೇರಿದಂತೆ ಕೃಷಿ ಉತ್ಪನ್ನಗಳನ್ನು ನಾವು ಸ್ಥಳೀಯವಾಗಿ ಉತ್ಪಾದಿಸುವ ಬೆಲೆಗಿಂತ ಕಡಿಮೆ ದರದಲ್ಲಿ, ಉತ್ತಮ ಗುಣಮಟ್ಟದವನ್ನು ಆಮದು ಮಾಡಿಕೊಳ್ಳುವುದು ಸರಿಯಾದ ವ್ಯವಹಾರ. ದೇಶದ ಕೈಗಾರಿಕೆಗೆ ಇಂಥ ಆಮದಿಗೆ ಬೇಕಾದಷ್ಟು ವಿದೇಶೀ ವಿನಿಮಯವನ್ನು ಸಂಪಾದಿಸುವುದು ಸಾಧ್ಯ; ನಾವು ಐಟಿ ಬಿಟಿ ಸೇವೆ, ಕೈಗಾರಿಕಾ ಉತ್ಪನ್ನಗಳನ್ನು ಮಾಡಿಕೊಂಡರೆ ಸಾಕು." ಹೀಗೆಲ್ಲಾ ವಾದಿಸುವುದರ ಹಿಂದೆ ರೈತರನ್ನು ಅಣಕಿಸುವುದು ಸ್ಪಷ್ಟ. ಈ ವಿಚಾರಸರಣಿ ವಿಪತ್ಕಾರಿ ಎಂಬುದನ್ನು ಪ್ರತ್ಯೇಕವಾಗಿ ಸ್ಪಷ್ಟಪಡಿಸುವ ಅಗತ್ಯವಿಲ್ಲ. ಆಹಾರದ ಕೊರತೆ ಇಲ್ಲದಂತೆ ಮಾಡಿರುವುದು ನಮ್ಮ ರೈತರ ಮಹತ್ವದ ಸಾಧನೆಯಾಗಿದೆ. ಆದರೆ ಈ ಹಿನ್ನೆಲೆಯಲ್ಲಿ ಕೈಗಾರಿಕೆಗಳಿಗಾಗಿ ಕೃಷಿಭೂಮಿಯನ್ನು ವಶಪಡಿಸಿಕೊಳ್ಳುವ ನೀತಿಯಿಂದ ಒದಗಿರುವ ಬಿಕ್ಕಟ್ಟನ್ನು ಚರ್ಚಿಸುವುದು ತುರ್ತಾದ ವಿಷಯ. ಕೈಗಾರಿಕೆಗೆ ಭೂಮಿ ಒದಗಿಸುವುದು ಸಾಧುವಾದ ನೀತಿ ಎಂದೇ ಇಟ್ಟುಕೊಳ್ಳೋಣ. ಅದನ್ನು ಹೇಗೆ ಮಾಡಬೇಕು ಎಂಬುದನ್ನು ಕುರಿತು ಕೆಲವು ಸಲಹೆಗಳನ್ನು ನೀಡುವುದು ಅವಶ್ಯಕವಾಗಿದೆ.

ಕೈಗಾರಿಕೆಗಾಗಿ ಭೂಮಿ ಎಂದಾಗ ನಗರ ಸಮೀಪದ ಭೂಮಿಯನ್ನು ಬಯಸುವುದು ಲಾಭದ ದೃಷ್ಟಿಯಿಂದ, ಮೂಲಭೂತ ಸೌಕರ್ಯಗಳ ಲಭ್ಯತೆಯ ದೃಷ್ಟಿಯಿಂದ, ಸಮಂಜಸ. ಎಲ್ಲಾ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲೂ ಆಗಿರುವುದು ಹೀಗೆಯೇ. ನಗರಗಳ ಸಂಖ್ಯೆಯೂ ಹೆಚ್ಚುತ್ತಿದ್ದು ಕೈಗಾರಿಕೆಯ ವಿಕೇಂದ್ರೀಕರಣವೂ ಜತೆಜತೆಗೇ ಸಾಗುತ್ತಿರುವುದು ಸ್ಪಷ್ಟ ಹಾಗೂ ನೀರಾವರಿಯಿರುವ ಉತ್ತಮ ಫಸಲು ಬರುವ ಭೂಮಿಯನ್ನು ಕೈಗಾರಿಕೆಗೆ ಬಳಸಲೇಬಾರದು ಎಂಬ ಮಾತಿನ ಅರ್ಥ, ಅಲ್ಲಿಯ ಉತ್ಪಾದನೆ ಮೌಲಿಕವಾದುದು, ಅಗತ್ಯವಾದುದು ಎಂಬುದು. ಆದರೆ, ಕೈಗಾರಿಕೆಗಳ ಧುರೀಣರು, ಎಷ್ಟೇ ಆದರೂ ಅದು ಕೈಗಾರಿಕೆಗಳ ಉತ್ಪಾದನೆಗೆ ಸಮಾನವಾದುದಲ್ಲ ಅಥವಾ ಅಂಥ ಉತ್ಪನ್ನವನ್ನು ಸುಲಭ ದರದಲ್ಲಿ ಆಮದು ಮಾಡಿಕೊಳ್ಳುತ್ತೇವೆ ಎಂದು ಸಮಾಧಾನಪಡಿಸುತ್ತಾರೆ. ರೈತನೆಂಬ, ಕೃಷಿಯೆಂಬ, ಜೀವನಪದ್ಧತಿ, ಅದರ ಸಂಸ್ಕೃತಿಯ ನಾಶವಾಗುವುದಲ್ಲಾ ಎಂದು ಹೇಳಿದರೆ ಪ್ರಪಂಚದಲ್ಲೆಲ್ಲಾ ಆಧುನಿಕೀಕರಣವಾಗುತ್ತಿರುವಾಗ ಈ ರೈತ ಜೀವನಪದ್ಧತಿ ಪ್ರತಿಗಾಮಿಯಾಗಿದ್ದು, ಅದರ ನಾಶವನ್ನು ಪ್ರಗತಿಪರ ಹೆಜ್ಜೆಯೆಂದೇ ಪರಿಗಣಿಸಬೇಕು ಅಂದಾರು. ಹೀಗಿರುವಾಗ ರೈತನ ಭೂಮಿಗೆ ಸೂಕ್ತ ಪರಿಹಾರ ಕೊಡಬೇಕು ಎಂಬ ವಾದಕ್ಕೆ ಮಾತ್ರ ಸ್ವಲ್ಪ ಮನ್ನಣೆ ದೊರೆಯುತ್ತಿದೆ.

ಭೂಮಿಯನ್ನು ಸಾರ್ವಜನಿಕ ಹಿತಾಸಕ್ತಿಯನ್ನು ಮುಂದೊಡ್ಡಿ ಕಾನೂನಿನನ್ವಯ ವಶಪಡಿಸಿಕೊಳ್ಳಲು ಅಧಿಕಾರವಿದೆ. ಸರ್ಕಾರಕ್ಕೆ ಕೃಷಿ ಕೃಷಿಯೇತರ ಆಸ್ತಿಪಾಸ್ತಿಗಳನ್ನು ವಶಪಡಿಸಿಕೊಂಡಾಗಲೂ ಇದೇ ಕಾರಣವನ್ನು ಮುಂದೊಡ್ಡಲಾಗುತ್ತದೆ. ಕೃಷಿಭೂಮಿಗೆ ಪರಿಹಾರ ಧನವನ್ನು ನಿರ್ಧರಿಸಲೂ ಸೂತ್ರಗಳಿವೆ. ಅವು ಮಾರುಕಟ್ಟೆಯ ಬೆಲೆಯನ್ನು ಸಂಪೂರ್ಣವಾಗಿ ಆಧರಿಸಿರುವುದಿಲ್ಲ. ಕೃಷಿಯೇತರ ಬಂಡವಾಳದ ರೂಪದ ಬ್ಯಾಂಕಿನಂಥ ಆಸ್ತಿಯನ್ನು ವಶಪಡಿಸಿಕೊಂಡಾಗ ಪರಿಹಾರವಿಲ್ಲದೆ ವಶಪಡಿಸಿಕೊಳ್ಳಬೇಕೆಂದು ಸಮಾಜವಾದದ ಸಮರ್ಥಕರು ವಾದ ಹೂಡಿದ್ದರು. ಆ ನಿಲುವನ್ನು ನ್ಯಾಯಾಲಯಗಳು ರಾಜ್ಯಾಂಗ ಬಾಹಿರವೆಂದು ಅಸಿಂಧುಗೊಳಿಸಿದ್ದವು. ಗೃಹನಿರ್ಮಾಣ ಸಹಕಾರ ಸಂಘಗಳ ಹೆಸರಿನಲ್ಲಿ ಅದನ್ನು ಸಾರ್ವಜನಿಕ ಹಿತಾಸಕ್ತಿಯೆಂದು ಸಾರಿ, ಸರ್ಕಾರವೇ ಭೂಮಿಯನ್ನು ವಶಪಡಿಸಿಕೊಡುವ ದಂಧೆ ಹಿಂದಿನ ಮುಖ್ಯಮಂತ್ರಿ ಗುಂಡೂರಾಯರ ಕಾಲದಲ್ಲಿ ಆರಂಭವಾಗಿ, ಹೆಗಡೆಯವರ ಕಾಲದಲ್ಲಿ ಭ್ರಷ್ಟಾಚಾರದ ಪರಮಾವಧಿಯನ್ನು ತಲುಪಿತು. ಇಲ್ಲಿಯ ಒಂದು ಅನುಭವವನ್ನು ನೋಡಬಹುದು. ನಗರಾಭಿವೃದ್ಧಿ ಪ್ರಾಧಿಕಾರ ವಶಪಡಿಸಿಕೊಂಡ ಭೂಮಿಗೆ ೮೦ರ ದಶಕದಲ್ಲಿ ಎಕರೆಗೆ ೧೧,೦೦೦ ರೂ. ಎಂದು ನಿಗದಿಮಾಡಿದಾಗ, ನಗರದ ಹೊರವಲಯದ ಮಳೆಯಾಧಾರಿತ ಭೂಮಿಗಳು ಉತ್ಪನ್ನವೂ ಇಲ್ಲದೆ ಹಾಳುಬಿದ್ದಿದ್ದು ಈ ಭೂಮಿಗಳಿಗೆ ಈ ಬೆಲೆ ತುಂಬಾ ಧಾರಾಳವಾಗಿ ಕಂಡುಬಂದಿತು. ಕೃಷಿಭೂಮಿಯನ್ನು ಸ್ವಂತ ಮಾಡುವ ಕೃಷಿಕ ಮಾತ್ರವಲ್ಲದೆ ಇತರರು ಖರೀದಿಸುವಂತಿರಲಿಲ್ಲ. ಅಂಥ ಹಿನ್ನೆಲೆಯಲ್ಲಿ ಗೃಹನಿರ್ಮಾಣ ಸಂಘ ಒಂದು ೪೪,೦೦೦ ರೂ.ಗಳ ಪರಿಹಾರವಿತ್ತು, ಸರ್ಕಾರದ ರೆವಿನ್ಯೂ ಕಾರ್ಯದರ್ಶಿಯವರು ಅದನ್ನು ಮತ್ತೂ ೬೦೦೦ ರೂ.ಗಳಿಗೆ ಹೆಚ್ಚಿಸಿದಾಗ ರೈತರು ಅವರನ್ನು ದೇವರಂತೆ ಬಂದಿರಿ ಎಂದು ಹೊಗಳಿದ್ದರು. ಆದರೆ ಕೆಲವೇ ತಿಂಗಳಲ್ಲಿ ಈ ಭೂಮಿಯ ಆಸುಪಾಸಿನ ಭೂಮಿಗಳಿಗೆ ಬೆಲೆ ಲಕ್ಷಾಂತರವಾಗಿ, ಕೋಟ್ಯಂತರವಾಯ್ತು. ಇಲ್ಲಿ ನಿರ್ಮಿಸಿದ ನಿವೇಶನದಲ್ಲಿ ಈಗ ಅಂದರೆ ಸದಸ್ಯರಿಗೆ ನಿವೇಶನ ಸಿಕ್ಕಿದ ೧೨-೧೩ ವರ್ಷಗಳಲ್ಲಿ ಬೆಲೆ ಚದರ ಅಡಿಗೆ ೪೦೦೦ ರೂ.ಗೂ ಮಿಕ್ಕು ವರ್ಧಿಸಿದೆ. ಮೂಲದ ಭೂಮಾಲಿಕನ ಪರಿಸ್ಥಿತಿ ಏನು ? ಸಂಘ ಅವರಿಗೆ ಸಲಹೆ ಮಾಡಿತ್ತು: ಪರಿಹಾರಧನವನ್ನು ಸಂಘದಲ್ಲಿ ನಿವೇಶನ ಕೊಳ್ಳಲು ಬಳಸಿ, ಯಾವ ನಿರ್ಬಂಧವೂ ಇಲ್ಲದೆ ಮುಕ್ತ ಹಕ್ಕಿನಲ್ಲಿ ನಿವೇಶನವನ್ನು ಆದ್ಯತೆಯ ಮೇಲೆ ಪಡೆಯಿರಿ, ಎಂದು. ಕೆಲವರು ಆ ಮಾತಿನಂತೆ ನಡೆದುಕೊಂಡು ಇಂದು ಶ್ರೀಮಂತರೇ ಆಗಿದ್ದಾರೆ. ಆದರೆ ಬಹಳ ಜನ ರೈತರು ಈ ಸಲಹೆಯನ್ನು ಸ್ವೀಕರಿಸುವ ಪ್ರಗತಿಪರ ಮನೋಭಾವನೆಯನ್ನು ಹೊಂದಿರಲಿಲ್ಲ. ಅವರೆಲ್ಲಾ ಈಗ ದಟ್ಟದರಿದ್ರರಾಗಿದ್ದಾರೆ. ಇದಾದ ಹತ್ತು ವರ್ಷಗಳ ನಂತರ ಪ್ರಾಧಿಕಾರ ತಾನು ವಶಪಡಿಸಿಕೊಂಡ ಭೂಮಿಯಲ್ಲಿ ಎಕರೆಗೆ ಇಷ್ಟು ಎಂದು ನಿವೇಶಗಳನ್ನು ಭೂಮಾಲಿಕನಿಗೆ ನೀಡಲು ಮುಂದಾಯಿತು.

ಗೃಹನಿರ್ಮಾಣ ಸಂಘಗಳು ಈಗಲೂ ನೇರವಾಗಿ ಕೃಷಿ ಭೂಮಿಯನ್ನು ಕೊಳ್ಳುವಂತಿಲ್ಲ. ಆದರೆ ಏಜೆಂಟರುಗಳು ಅಪಾರ ಕಪ್ಪುಹಣವನ್ನು ಬಳಸಿ, ಮಾಲಿಕನ ಹೆಸರಿನಲ್ಲಿ ಭೂಮಿಯನ್ನು ಕೃಷಿಯೇತರ ಬಳಕೆಗೆ ಕಾನೂನಿನನ್ವಯ ಒಪ್ಪಿಗೆ ಪಡೆದು, ನಿವೇಶನಗಳನ್ನಾಗಿ ಪರಿವರ್ತಿಸಿ, ಅದನ್ನು ಗೃಹನಿರ್ಮಾಣ ಸಂಘಗಳ ಹೆಸರಿನಲ್ಲಿ ಗೃಹನಿರ್ಮಾಣಕ್ಕೆ ಹಾಗೂ ಕೈಗಾರಿಕೆಗಳಿಗೆ

ಮಾರುವ ವ್ಯವಹಾರ ಭರಾಟೆಯಿಂದ ನಡೆಯುತ್ತಿದೆ. ಇದರಿಂದ ರೈತನಿಗೆ ಹಿಂದಿಗಿಂತ ಹೆಚ್ಚು ಪರಿಹಾರ ದೊರಕುತ್ತಿದೆ, ನಿಜ. ಆದರೆ ಈ ಕ್ರಮದಲ್ಲಿ ಭೂಮಿಯ ಬೆಲೆ ಅಪಾರವಾಗಿ ಏರಿದ್ದು, ಅದರ ಬಹುಭಾಗ ಮಧ್ಯವರ್ತಿಗಳು, ಏಜೆಂಟರುಗಳು, ರಾಜಕೀಯ ಶಕ್ತಿಗಳು, ಅಧಿಕಾರಿಗಳು ಹಾಗೂ ಸಹಕಾರ ಸಂಘದ ಭ್ರಷ್ಟ ಪದಾಧಿಕಾರಿಗಳ ವಶವಾಗುತ್ತಿದ್ದು ರೈತನಿಗೆ ಅದರ ಶೇ. ೨೦ರಷ್ಟು ದಕ್ಕುತ್ತಿರಬಹುದು. ಆದರೆ ಈ ಪದ್ಧತಿಯನ್ನು ನ್ಯಾಯಯುತವೆಂದು ಸಾರುತ್ತದೆ ಉದಾರೀಕರಣ ನೀತಿ.

ಕೈಗಾರಿಕಾಭಿವೃದ್ಧಿ ಪ್ರಾಧಿಕಾರ ಕಾನೂನುರೀತ್ಯಾ ಕೃಷಿಭೂಮಿಯನ್ನು ವಶಪಡಿಸಿಕೊಂಡು, ಕೈಗಾರಿಕೆಗಳಿಗೆ ಲಾಭದಲ್ಲಿ ಮಾರುತ್ತದೆ. ಆದರೆ ಕೈಗಾರಿಕೆಗಳ ಮಾಲಿಕನಿಗೆ ನೇರವಾಗಿ ಕೃಷಿಭೂಮಿಯನ್ನು ಕೊಳ್ಳಲು ಕಾನೂನುರೀತ್ಯಾ ಅವಕಾಶ ಮಾಡಿಕೊಟ್ಟು, ಮಾರುಕಟ್ಟೆಯಲ್ಲಿ ಪೈಪೋಟಿಯಲ್ಲಿ ಖರೀದಿಸಿದ್ದರೆ, ರೈತನಿಗೆ ಇನ್ನೂ ಹೆಚ್ಚು ಹಣ ದೊರೆಯುತ್ತಿತ್ತು. ಇಲ್ಲಿ ಬರುವ ಪ್ರಶ್ನೆ, ಉಚಿತ ಪರಿಹಾರವೆಂದರೇನು ? ಕೈಗಾರಿಕೆಗಳು ಸುಲಭ ದರದಲ್ಲಿ ಭೂಮಿಯನ್ನು ಪಡೆಯುತ್ತವೆ. ಸುಲಭ ದರದಲ್ಲಿ ಬ್ಯಾಂಕುಗಳಿಂದ ಬಂಡವಾಳ ಪಡೆಯುತ್ತವೆ. ಅನೇಕ ಪ್ರೋತ್ಸಾಹ ವಿನಾಯಿತಿಗಳನ್ನು ಪಡೆಯುತ್ತವೆ. ಆದರೂ ಅನೇಕವೇಳೆ ಅಸಮರ್ಥ ನಿರ್ವಹಣೆಯಿಂದಲೋ, ಭ್ರಷ್ಟಾಚಾರದಿಂದಲೋ ಅದು ನಷ್ಟಕ್ಕೆ ತಿರುಗಿ, ಕೈಗಾರಿಕೆ ಮುಚ್ಚಲ್ಪಡುತ್ತದೆ. ಹತ್ತಿಪ್ಪತ್ತು ವರ್ಷದಲ್ಲಿ ಇದರ ಮಾಲಿಕ ಅಪಾರ ಲಾಭವನ್ನು ಗಳಿಸಿರುತ್ತಾನೆ. ಆಗ ಕಾರ್ಖಾನೆಯನ್ನು ನಷ್ಟದಿಂದಾಗಿ ನಡೆಸಲಾಗುವುದಿಲ್ಲವೆಂದು ಮುಚ್ಚುತ್ತಾನೆ. ಕಾರ್ಮಿಕರಿಗೂ ಸೂಕ್ತ ಪರಿಹಾರ ನೀಡುವುದಿಲ್ಲ, ಬ್ಯಾಂಕುಗಳಿಗೆ ಸಾಲವನ್ನು ಮರುಪಾವತಿ ಮಾಡುವುದಿಲ್ಲ. ಅವನ ಭೂಮಿಯನ್ನು ಮಾತ್ರ ಆ ವೇಳೆಗೆ ಗಗನಕ್ಕೆ ಏರಿರುವ ಮಾರುಕಟ್ಟೆಯಲ್ಲಿ ಮಾರಿ, ಅಪಾರ ಲಾಭ ಗಳಿಸುತ್ತಾನೆ. ಅವನು ಮುಳುಗುವುದಿಲ್ಲ. ಮೂಲದಲ್ಲಿ ಇವನಿಗಾಗಿ ತನ್ನ ಭೂಮಿಯನ್ನು ಕಳೆದುಕೊಂಡ ರೈತ ದಟ್ಟ ದರಿದ್ರನಾಗಿರುತ್ತಾನೆ. ಒಂದು ಕಾಲಕ್ಕೆ ಪ್ರಗತಿಪರವೂ ಪ್ರವರ್ಧಮಾನವೂ ಆಗಿದ್ದ ಬೆಂಗಳೂರಿನ ಕಿರ್ಲೋಸ್ಕರ್ ಎಲೆಕ್ಟ್ರಿಕಲ್ ಕಾರ್ಖಾನೆಯ ಭೂಮಿಯಲ್ಲಿ ಇಂದು ಮೆಟ್ರೋ ನಿಂತಿದೆ. ಅದರ ಹಿಂದೆ ೪೫೦೦ ರೂ. ಚದರ ಅಡಿ ಬೆಲೆಯ ಬಹುಮಹಡಿ ಫ್ಲಾಟ್‌ಗಳು ಬಂದಿವೆ. ನಗರದ ಎಲ್ಲರೂ ಬದುಕಿದರೂ ಆ ಭೂಮಿಯ ಮೂಲ ಮಾಲಿಕ ಎಲ್ಲಿ ಹೋದ ? ಅಲ್ಲಿಯ ಕಾರ್ಮಿಕರು ದಿವಾಳಿಯಾದದ್ದು ಹೇಗೆ ? ಇದು ಈ ಉದಾರೀಕರಣ ನೀತಿಯ ಬಂಡವಾಳ ವ್ಯವಸ್ಥೆಯಲ್ಲಿ ಅಂತರ್ಲೀನವಾದ ರೈತ ವಿರೋಧಿ, ಕಾರ್ಮಿಕ ವಿರೋಧಿ ಶೋಷಣೆಯ ಅಂತರಂಗ. ಒಂದು ವೇಳೆ ಭೂಮಿಯ ಮಾಲಿಕನಾಗಿ ರೈತನೂ ಕೈಗಾರಿಕೆಯಲ್ಲಿ ಷೇರುದಾರನಾಗಿದ್ದರೆ? ತಕ್ಷಣದಲ್ಲಿ ರೈತನಿಗೆ ಜೀವನ ಮಾಡಲು ಪರಿಹಾರಧನ ಬೇಕೇ ಬೇಕು. ನಂತರವೂ ಅದೇ ಕೈಗಾರಿಕೆಯಲ್ಲಿ ಕಾರ್ಮಿಕನಾಗುವ ಅವಕಾಶ ಬೇಕು; ಅದಕ್ಕೆ ತಕ್ಕ ಯೋಗ್ಯತೆ ಪಡೆಯಲು ಅಗತ್ಯಬಿದ್ದ ಶಿಕ್ಷಣವನ್ನು ಉದ್ಯಮದ ಭಾಗವಾಗಿ ನೀಡಬೇಕು. ಮಿಕ್ಕೆಲ್ಲ ಬಂಡವಾಳದಂತೆಯೇ ಭೂಮಿಯನ್ನು ಉದ್ಯಮದ ಒಂದು ಪಾಲೆಂದು ನಿಗದಿಮಾಡಬೇಕು. ಅದನ್ನು ಭವಿಷ್ಯದಲ್ಲಿ ಬರಬಹುದಾದ ಭೂಮಿಯ ಬೆಲೆಯ ಆಧಾರದ ಮೇಲೆ ನಿಗದಿಮಾಡಬೇಕು. ಈ ಬೆಲೆ ಷೇರು ರೂಪದಲ್ಲಿದ್ದು ಕಂಪನಿಯ ಪ್ರಗತಿ-ಅವನತಿಯನ್ನು ಅದು ಅನುಸರಿಸುತ್ತದೆ. ಒಂದು ವೇಳೆ ಕಂಪನಿ ಮುಚ್ಚಿದರೆ ಆಗ ಅಂದಿನ ಮಾರುಕಟ್ಟೆಯಲ್ಲಿ ದೊರಕುವ ಬೆಲೆಗೆ ಅನುಸಾರ ರೈತನಿಗೆ ಭೂಮಿ ಮಾರಿದ ಬೆಲೆಯಲ್ಲಿ ಭಾಗಕ್ಕೆ ಹಕ್ಕಿರಬೇಕು. ಅಂದರೆ ಪರಿಹಾರ ಮೂರು ಭಾಗದಲ್ಲಿರುತ್ತದೆ: ತಕ್ಷಣದ ಪರಿಹಾರ, ಉದ್ಯೋಗ, ಹಾಗೂ ಅಂತಿಮವಾಗಿ ಷೇರಿಗೆ ಬರುವ ಡಿವಿಡೆಂಡ್ ಇಲ್ಲವೆ ಉದ್ಯಮ ಮುಚ್ಚಿದಾಗ ಬರುವ ಹಣದಲ್ಲಿ ಪಾಲುಗಾರಿಕೆ. ಕಡಿಮೆ ದರದಲ್ಲಿ ಬಂಡವಾಳ, ಭೂಮಿ, ಕಾರ್ಮಿಕ ದೊರೆಯದಿದ್ದರೆ ಪೈಪೋಟಿಯ ನಡುವೆ ಬದುಕಬಲ್ಲ ಉದ್ಯಮವನ್ನು ಸೃಷ್ಟಿಸಲು ಸಾಧ್ಯವಿಲ್ಲವೆಂಬ ನಿರ್ವಾಹಕ-ಮ್ಯಾನೇಜರ್ ಅದೆಂಥ ಮ್ಯಾನೇಜರ್ ? ಇಂದಿನ ಮ್ಯಾನೇಜ್‌ಮೆಂಟ್ ಸಿದ್ಧಾಂತಗಳು ಇದನ್ನು ಒಪ್ಪುವುದಿಲ್ಲ. ಉತ್ಪಾದನೆಯಲ್ಲಿ ತೊಡಗುವ ಪ್ರತಿಯೊಂದು ಭಾಗಗಳಿಗೂ ಅವುಗಳ ಸಾಧುವಾದ ಬೆಲೆಯನ್ನು ನೀಡುವುದು, ಆ ಉದ್ಯಮದಲ್ಲಿ ತೊಡಗುವ ಎಲ್ಲ ಜನರ ಕ್ಷೇಮವನ್ನು ಸಾಧಿಸುವುದು, ಉದ್ಯಮದ ಗುರಿಯಾಗಬೇಕೆ ವಿನಾ ಕೇವಲ ಬಂಡವಳಿಗನ ಹಿತ, ಅವನ ಲಾಭ ಮಾತ್ರವಲ್ಲ ಎಂದು ಇಂದಿನ ಎಲ್ಲಾ ಪರಿಣತರೂ ಒಪ್ಪುತ್ತಾರೆ. ಬಂಡವಾಳ ವ್ಯವಸ್ಥೆ ಸಮತಾವಾದವನ್ನು ಎದುರಿಸಬೇಕಾದರೆ ತನ್ನೊಳಗೆ ಈ ಸುಧಾರಣೆಯನ್ನು ಮಾಡಿಕೊಳ್ಳುವುದು ಅನಿವಾರ್ಯ.

ನಮಗೆ ಬೇಕಾದ ಆಹಾರವನ್ನು ಆಮದು ಮಾಡಿಕೊಳ್ಳುತ್ತೇವೆ ಎಂಬ ವಾದವನ್ನು ತಿರಸ್ಕರಿಸಲು ಹೆಚ್ಚು ಸಮರ್ಥನೆಯನ್ನೇನೂ ನೀಡಬೇಕಾಗಿಲ್ಲ. ಇದು ಕೇವಲ ಭೂಮಾಲಿಕನ ವಿಷಯವಲ್ಲ. ಭೂಹೀನ ಕೃಷಿಕರು, ಕೃಷಿಯ ಸುತ್ತ ಜೀವನ ನಿರ್ವಹಿಸುವ ಗ್ರಾಮೀಣ ಪ್ರದೇಶದವರು, ಇವರೇ ಈ ದೇಶದ ಬಹುಜನರು. ಇವರ ಕ್ಷೇಮಕ್ಕೆ ಏನಾಗಬೇಕು? ಅವರಿಗೆ ಶಿಕ್ಷಣ, ಕಸುಬುಗಾರಿಕೆಯ ತರಪೇತಿ, ಆರೋಗ್ಯ ಸುಧಾರಣೆ ಮುಂತಾದ ವಿಷಯಗಳ ಸಮಸ್ಯೆಯೂ ಈ ಸಮಸ್ಯೆಯೊಡನೆಯೇ ಅಂಟಿಕೊಂಡಿದೆ. ಈ ಜವಾಬ್ದಾರಿಯನ್ನು ಬಂಡವಾಳ ವ್ಯವಸ್ಥೆ ನಿರ್ವಹಿಸಲು ಸಿದ್ಧವಾಗುವುದಾದರೆ ಸರಿ; ಇಲ್ಲವಾದರೆ, ಸಾಮಾಜಿಕ ಸಂಘರ್ಷ ಅನಿವಾರ್ಯ. ಇಂದಿನ ರಾಷ್ಟ್ರವ್ಯಾಪಿ ಚರ್ಚೆಯಲ್ಲಿ ಈ ವಿಷಯ ಗೌಣವೆನ್ನುವಂತೆ ಆಗಿಬಿಟ್ಟಿದೆ. ನಮಗೆ ಎಲ್ಲರನ್ನೂ ಜತೆಯಲ್ಲಿ ತೆಗೆದುಕೊಂಡು ಹೋಗಬಲ್ಲ ಪ್ರಜಾ ಪ್ರಭುತ್ವವಾದಿ ಬೆಳವಣಿಗೆ ಬೇಕಾಗಿದೆ. ದೇಶದಾದ್ಯಂತ ಪಶ್ಚಿಮದ ವ್ಯವಸ್ಥೆಗೆ ಶರಣಾದವರು ಚುಕ್ಕಾಣಿ ಹಿಡಿದಿರುವಾಗ, ಕೇರಳದಲ್ಲೋ ಪಶ್ಚಿಮ ಬಂಗಾಳದಲ್ಲೋ ಜನವಾದೀ ನೀತಿಗಳನ್ನು ಜಾರಿಗೆ ತರುವುದು ಸಾಧ್ಯವಿಲ್ಲ. ಅವುಗಳು ಈ ಎಲ್ಲಾ ಪರಿಣಾಮಗಳಿಂದ ವಿಮುಕ್ತವಾದ ದ್ವೀಪಗಳಲ್ಲ. ಅಸಂಘಟಿತ ಗ್ರಾಮೀಣ ಜನತೆಯನ್ನು, ಸಣ್ಣ ಹಿಡುವಳಿದಾರರನ್ನು ಸಂಘಟಿಸಲು ವಿಫಲರಾಗಿ, ಕೇವಲ ನಗರ ಕೇಂದ್ರಿತ ಕೈಗಾರಿಕಾ ಕಾರ್ಮಿಕರ ಸಂಘಗಳ ಬಲದ ಮೇಲೆ ಬೆಳೆದ ಎಡ ಪಕ್ಷಗಳು ಬೂರ್ಷ್ವಾ ಪ್ರಜಾಪ್ರಭುತ್ವವನ್ನು ಅಪ್ಪಿಕೊಂಡು ಕೃಶವಾಗುತ್ತಿರುವುದರಲ್ಲಿ ಆಶ್ಚರ್ಯವಿಲ್ಲ. ಅದಕ್ಕೇ ಅವರು ಪರ್ಯಾಯ ಶಕ್ತಿಯಾಗಬಲ್ಲ ರಾಷ್ಟ್ರವ್ಯಾಪಿ ಪಕ್ಷವಾಗಲಿಲ್ಲ. ಈ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳನ್ನೇ ಬಳಸಿ ಎಡಪಕ್ಷಗಳ ಐಕಮತ್ಯ ಮುರಿಯಲು ಬೂರ್ಷ್ವಾಪಕ್ಷಗಳಂತೆ ತೀವ್ರಗಾಮಿ ಎಡಪಕ್ಷಗಳೂ ಮುಂದಾದದ್ದೂ ಮತ್ತೊಂದು ದುರಂತ. ಬಂಡವಾಳವಾದಿ ಶಕ್ತಿಗಳು ಇಂದು ಭೂಸ್ವಾಧೀನ ನೀತಿಗೆ ರಾಷ್ಟ್ರದಲ್ಲಿ ಒಮ್ಮತವಿದೆಯೆಂದು, ಆರ್ಥಿಕ ಸುಧಾರಣೆಗೆ ಎಡಪಕ್ಷಗಳೂ ಒಪ್ಪಿವೆಯೆಂದು ಸಮರ್ಥನೆ ನೀಡುತ್ತಿದ್ದರೆ ಅದಕ್ಕೆ ಎಡಪಕ್ಷಗಳ ಸಂಘಟನಾ ವೈಫಲ್ಯ ಹಾಗೂ ಸೈದ್ಧಾಂತಿಕ ಗೊಂದಲವೂ ಕಾರಣ.

[signature]

ಇರುವ ಭೂಮಿಯನ್ನು ವರ್ಧಿಸಲು ಬರುವುದಿಲ್ಲ; ಇರುವುದನ್ನೇ ಬೇರೆ ಬೇರೆ ಕೆಲಸಗಳಿಗೆ ಬಳಸಿಕೊಳ್ಳಬೇಕು. ರೈತರಿಂದ ಹೀಗೆ ಭೂಮಿ ಪಡೆಯುವಾಗ ಅವರಿಗೆ ಎಂತಹ ಪರಿಹಾರ ನೀಡಬೇಕು ? ನಿಮ್ಮ ಸಲಹೆಯನ್ನು ಸಂಕ್ಷಿಪ್ತವಾಗಿ ನೀಡಿ. –ಸಂ





**ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಕೆ. ಎಲ್. ಗೋಪಾಲಕೃಷ್ಣ ರಾವ್
ಎಚ್. ಎಸ್. ಗೋಪಾಲ ರಾವ್
ಜಿ. ಕೆ. ಗೋವಿಂದ ರಾವ್
ಎಂ. ಸಿ. ನರಸಿಂಹನ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮಹಾಬಲೇಶ್ವರ ರಾವ್
ವ್ಯಾಸರಾಯ ಬಲ್ಲಾಳ
ವಿಜಯಾ
ಬಿ. ವಿ. ವೀರಭದ್ರಪ್ಪ
ಟಿ. ವೆಂಕಟೇಶ ಮೂರ್ತಿ
ಯು. ಎಸ್. ಶ್ರೀನಿವಾಸನ್
ಸಿದ್ದನಗೌಡ ಪಾಟೀಲ
ಎಲ್. ಹನುಮಂತಯ್ಯ

**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




## ದಲಿತರ ಸ್ಥಿತಿಗತಿ

ಅಕ್ಟೋಬರ್ ೨೦೦೬ರ 'ಹೊಸತು' ಸಂಚಿಕೆಯಲ್ಲಿ ಪ್ರಕಟವಾದ 'ಸ್ವಾತಂತ್ರ್ಯೋತ್ತರ ಕಾಲದ ದಲಿತರ ಸ್ಥಿತಿಗತಿ' ಎಂಬ ಲೇಖನ ಚಿಂತನೆಗೀಡುಮಾಡುವಂಥದ್ದು. ನಮ್ಮದು ಪ್ರಗತಿಪರ ದೇಶ ಎಂದು ಎಷ್ಟೇ ಬೊಬ್ಬೆಹೊಡೆದರೂ ಜಾತೀಯತೆಯ ವಿಷಯಕ್ಕೆ ಬಂದಾಗ ಅದು ಅಷ್ಟೇ ಹಿಂದಕ್ಕೆ ಹೋಗುತ್ತಿದೆ ಎಂಬುದು ಕಟುಸತ್ಯ. ಆಧುನಿಕೀಕರಣ, ವೈಜ್ಞಾನಿಕೀಕರಣ, ಜಾಗತೀಕರಣ ಎನ್ನುತ್ತಲೇ ಜಾತಿಪ್ರಜ್ಞೆಯನ್ನು ಮತ್ತೆ ಮತ್ತೆ ಬಡಿದೆಬ್ಬಿಸುವಲ್ಲಿ ರಾಜಕೀಯ ಪಕ್ಷಗಳು ಸಫಲವಾಗುತ್ತಿವೆ. ಮನುಷ್ಯ ಮನುಷ್ಯರ ನಡುವೆ ಜಾತಿಯ ಕಂದಕ ಹೆಚ್ಚುತ್ತಲೇ ಹೋಗುತ್ತಿದೆ. ಜಾತಿಗೊಂದರಂತೆ ಮಠಗಳು, ಮಠಾಧೀಶರು, ಶಾಲಾ ಕಾಲೇಜುಗಳು, ವಿದ್ಯಾರ್ಥಿನಿಲಯಗಳು ಹುಟ್ಟಿಕೊಳ್ಳುತ್ತಾ ಸಮಾಜದಲ್ಲಿ ಜಾತೀಯತೆ ಬಲಿಷ್ಠವಾಗುತ್ತಲೇ ಇದೆ. ಮನಸ್ಸುಗಳು ಬದಲಾಗದೆ ಪರಿವರ್ತನೆ ಸುಲಭಸಾಧ್ಯವೂ ಅಲ್ಲ. ಜಾತೀಯತೆ ಮತ್ತು ಅಸ್ಪೃಶ್ಯತೆಗಳು ಈ ದೇಶಕ್ಕಂಟಿರುವ ಬಹುದೊಡ್ಡ ಕಳಂಕಗಳು.

ಇಂದು ದಲಿತರ ಬದುಕಿನಲ್ಲಿ ಸ್ವಲ್ಪಮಟ್ಟಿಗಾದರೂ ಬೆಳಕು ಮೂಡುವಂತಾಗಿರುವುದು ಸಂವಿಧಾನ ಕಲ್ಪಿಸಿರುವ ಮೀಸಲಾತಿಯ ಸೌಲಭ್ಯದಿಂದ. ಆರ್ಥಿಕವಾಗಿ, ಸಾಮಾಜಿಕವಾಗಿ ಅತ್ಯಂತ ಹೀನಾಯ ಸ್ಥಿತಿಯಲ್ಲಿದ್ದ ಅನೇಕ ದಲಿತರಿಗೆ ಇದು ಉಪಯುಕ್ತವಾಗಿದೆ. ಆದರೆ ಗ್ರಾಮೀಣ ಪ್ರದೇಶಗಳಲ್ಲಿರುವ ಬಹಳಷ್ಟು ದಲಿತರು ಇಂದಿಗೂ ಸಹ ಮೌಢ್ಯ, ಕಂದಾಚಾರ, ಅನಕ್ಷರತೆ, ಬಡತನಗಳ ಕಪಿಮುಷ್ಟಿಯೊಳಗೆ ಸಿಲುಕಿ ಒದ್ದಾಡುತ್ತಿರುವುದು ಶೋಚನೀಯ ಸಂಗತಿ. ತುತ್ತಿನ ಚೀಲ ತುಂಬಿಸಿಕೊಳ್ಳುವುದನ್ನೇ ಪ್ರಥಮ ಧ್ಯೇಯವನ್ನಾಗಿಸಿಕೊಂಡಿರುವ ಅನೇಕ ದಲಿತರು ದೊಡ್ಡ ಹಬ್ಬ, ಸಣ್ಣ ಹಬ್ಬ ಎನ್ನುತ್ತಾ ಕುಡಿದು ತಿಂದು, ಅದರಿಂದ ಉಂಟಾಗುವ ಸಾಲಸೋಲಗಳನ್ನು ತೀರಿಸಲು ವರ್ಷಪೂರ್ತಿ ಕೂಲಿನಾಲಿಮಾಡಿ ಜೀವನ ಸವೆಸುವುದನ್ನು ನಾವಿಂದು ಪ್ರತಿಯೊಂದು ಗ್ರಾಮದಲ್ಲಿಯೂ ಕಾಣಬಹುದಾಗಿದೆ. ಸರಕಾರ ನೀಡುವ ಅನೇಕ ಸೌಲಭ್ಯಗಳನ್ನು ಸಮರ್ಪಕವಾಗಿ ಬಳಸಿಕೊಳ್ಳುವಲ್ಲಿಯೂ ಈ ವರ್ಗ ವಿಫಲವಾಗಿದೆಯೆಂದು ಹೇಳಬಹುದು. ಈ ವರ್ಗಕ್ಕೆ ಇಂದು ಅತ್ಯಗತ್ಯವಾಗಿ ಬೇಕಾಗಿರುವುದು ಮೂಲಭೂತ ಶಿಕ್ಷಣ. ಇಂದು ಎಲ್ಲರೂ ಉನ್ನತ ಶಿಕ್ಷಣದಲ್ಲಿ ಮೀಸಲಾತಿಯ ಕುರಿತು ಮಾತನಾಡುತ್ತಿದ್ದಾರೆಯೇ ಹೊರತು ಮೂಲಭೂತ ಶಿಕ್ಷಣದ ಬಗ್ಗೆ ಚಿಂತಿಸುತ್ತಲೇ ಇಲ್ಲ. ಒಬ್ಬ ಗ್ರಾಮೀಣ ಪ್ರದೇಶದ ಬಡ ದಲಿತ ವಿದ್ಯಾರ್ಥಿಗೆ ಸರಕಾರದ ಎಲ್ಲಾ ಸೌಲಭ್ಯಗಳೂ ಲಭಿಸುವಂತೆ ಮಾಡಿ ಮೂಲಭೂತ ಶಿಕ್ಷಣದ ಭದ್ರ ಬುನಾದಿ ಹಾಕಿಕೊಟ್ಟರೆ ಉನ್ನತ ಶಿಕ್ಷಣವನ್ನು ಗಳಿಸಿಕೊಳ್ಳಬಲ್ಲಂಥ ಛಾತಿಯನ್ನು ಅವನೇ ಪಡೆದುಕೊಳ್ಳಬಲ್ಲ. ಇಂದು ಆರ್ಥಿಕವಾಗಿ ಸಾಕಷ್ಟು ಸುಸ್ಥಿತಿಯಲ್ಲಿರುವ ದಲಿತರೇ ತಮ್ಮ ಮಕ್ಕಳಿಗೂ ಈ ಸೌಲಭ್ಯಗಳನ್ನು ಬಳಸಿಕೊಳ್ಳಲು ಹೆಣಗಾಡುತ್ತಿರುವುದನ್ನು ಕಂಡು ಖೇದವೆನಿಸುತ್ತದೆ. ಈ ವರ್ಗದ ದಲಿತರು ಮೀಸಲಾತಿಯ ನೆರಳಿನಲ್ಲಿಯೇ ತಮ್ಮ ಮಕ್ಕಳನ್ನು ಪೋಷಿಸುತ್ತಾ ಅವರಲ್ಲಿರುವ ಸುಪ್ತಪ್ರತಿಭೆ ಮತ್ತು ಸ್ಪರ್ಧಾಮನೋಭಾವವನ್ನು ಹೊಸಕಿಹಾಕುತ್ತಿದ್ದಾರೆ ಎಂಬುದನ್ನು ಮನಗಾಣಬೇಕು. ಮೀಸಲಾತಿಯಿಂದ ಉನ್ನತ ಶಿಕ್ಷಣದಲ್ಲಿ ಸೀಟು ಗಿಟ್ಟಿಸಿಕೊಳ್ಳುವ ಸ್ಥಿತಿವಂತ ದಲಿತರ ಅನೇಕ ಮಕ್ಕಳು ವಿದ್ಯಾಭ್ಯಾಸವನ್ನು ಅರ್ಧಕ್ಕೇ ಮೊಟಕುಗೊಳಿಸುತ್ತಿರುವ ಮತ್ತು ಕೋರ್ಸುಗಳನ್ನು ಬದಲಿಸಿಕೊಳ್ಳುತ್ತಿರುವ ನಿದರ್ಶನಗಳನ್ನು ನಾವಿಂದು ಕಾಣುತ್ತಿದ್ದೇವೆ. ಇಂದು ಉನ್ನತ ಶಿಕ್ಷಣ ಪಡೆಯುತ್ತಿರುವ ದಲಿತ ವಿದ್ಯಾರ್ಥಿಗಳನ್ನು ಭೂತಕನ್ನಡಿ ಹಿಡಿದು ಹುಡುಕುವಂಥ ಪರಿಸ್ಥಿತಿ ಉಂಟಾಗಿದೆ. ಅದರಲ್ಲೂ ಗ್ರಾಮೀಣ ಪ್ರದೇಶಗಳಿಂದ ಬಂದ ವಿದ್ಯಾರ್ಥಿಗಳಂತೂ ಬೆರಳೆಣಿಕೆಯಷ್ಟಿದ್ದರೆ ಹೆಚ್ಚು. ಇದಕ್ಕೆ ಸೂಕ್ತ ಪರಿಹಾರವೆಂದರೆ ಆರ್ಥಿಕವಾಗಿ ಸುಸ್ಥಿತಿಯಲ್ಲಿರುವ ದಲಿತವರ್ಗ ತಮ್ಮ ಮಕ್ಕಳಲ್ಲಿ ಎಳವೆಯಿಂದಲೇ ಸ್ಪರ್ಧಾ ಮನೋಭಾವವನ್ನು ಬಿತ್ತಿ ಮೀಸಲಾತಿ ಮತ್ತಿತರ ಸೌಲಭ್ಯಗಳನ್ನು ತಮಗಿಂತಲೂ ನಿಕೃಷ್ಟಮಟ್ಟದಲ್ಲಿರುವ ತಮ್ಮದೇ ಬಂಧುಗಳ ಅರ್ಹ ಮಕ್ಕಳಿಗೆ ಸ್ವಯಂ ಸ್ಫೂರ್ತಿಯಿಂದ ಬಿಟ್ಟುಕೊಡಬೇಕು ಮತ್ತು ಅವರಲ್ಲಿ ಆಳವಾಗಿ ಬೇರು ಬಿಟ್ಟಿರುವ ಮೌಢ್ಯ, ಕಂದಾಚಾರಗಳು ತೊಲಗಲು ಅನುವಾಗುವಂಥ ಮೂಲಭೂತ ಶಿಕ್ಷಣ ನೀಡುವಲ್ಲಿ ತುಂಬು ಹೃದಯದಿಂದ ಸಹಕರಿಸಬೇಕು. ಸರಕಾರ ಮತ್ತು ಸಂಘ ಸಂಸ್ಥೆಗಳೂ ಸಹ ಈ ನಿಟ್ಟಿನಲ್ಲಿ ಯೋಚಿಸಿ ಕಾರ್ಯ ಪ್ರವೃತ್ತರಾಗಬೇಕು.




ತುಮಕೂರು — **ಡಾ|| ಕೆ.ಬಿ. ರಂಗಸ್ವಾಮಿ**

## ಇಂಗ್ಲಿಷ್ ಕಲಿಕೆ, ಕೆಲವು ಪ್ರಶ್ನೆಗಳು

ಕನ್ನಡ ಪರ ವಾದಿಸುವವರಲ್ಲಿ ಯಾರೂ, ಎಂದೆಂದಿಗೂ ಇಂಗ್ಲಿಷ್ ಬೇಡವೆಂದಿಲ್ಲ. ಆದರೂ ಇಂಗ್ಲಿಷ್ ಪರ ವಾದ ಮಾಡುವ ಜನರು ಇಂದಿನ ಜಗತ್ತಿನಲ್ಲಿ ಇಂಗ್ಲಿಷಿನ ಮಹತ್ವ ಎಷ್ಟೆಂಬುದನ್ನು ತೋರಿಸಿಕೊಡುವ ಭಾಷಣದಲ್ಲೇ ನಿರತರಾಗಿರುತ್ತಾರೆ. ಯಾಕೆ ? ಮಗು ತೊಟ್ಟಿಲಿಂದ ಇಳಿಯುತ್ತಲೇ ಇಂಗ್ಲಿಷ್ ಕಲಿತವರೊಡನೆ ಸ್ಪರ್ಧೆಯನ್ನು ಎದುರಿಸಬೇಕಾಗುತ್ತದೆ ಎಂಬ ಭಾವನೆಯನ್ನು ಏಕೆ ಬಿತ್ತುತ್ತಾರೆ ? ನಾಲ್ಕನೆಯ ವರುಷದಿಂದ ಇಂಗ್ಲಿಷ್ ಕಲಿಯಬೇಕು ಎಂಬ ವಾದವನ್ನು ತಿರಸ್ಕರಿಸಿ ಒಂದನೆಯ ಕ್ಲಾಸಿನಿಂದ ಪ್ರಾರಂಭ ಮಾಡುವ ತವಕ ಏಕೆ ? ಒಂದು ಭಾಷೆಯನ್ನು ಕಲಿಯುವುದಕ್ಕೆ ಹೆಚ್ಚು ಕಾಲಾವಕಾಶ ಕಲ್ಪಿಸಿದ ಮಾತ್ರಕ್ಕೆ ಸಾಕೆ ? ಕಲಿಸುವ ರೀತಿ ಪರಿಣಾಮಕಾರಿಯಾಗಿರಬೇಕಲ್ಲವೇ ? ''ಬನ್ನಿ ಇಂಗ್ಲಿಷಿನಲ್ಲಿ ಮಾತಾಡೋಣ'' ಎನ್ನುವ ತರಹದ ಖಾಸಗಿ ಕ್ಲಾಸುಗಳಲ್ಲಿ ಇರುವಂತಹ ಹೊಸ ಹೊಸ ವಿಧಾನಗಳನ್ನೇನಾದರೂ ಇಲ್ಲಿ ಅಳವಡಿಸಿಕೊಂಡಿರುತ್ತಾರೆಯೇ ? ಅಂತಹದೇನನ್ನೂ ಮಾಡಿದಂತೆ ಕಂಡುಬರುವುದಿಲ್ಲ!

ಸ್ವಾತಂತ್ರ್ಯ ಬಂದಾಗಿನಿಂದಲೂ ನಾವು ಆಂಗ್ಲರು ರೂಪಿಸಿದ ಶಿಕ್ಷಣ ನೀತಿಯನ್ನೇ ಮುಂದುವರಿಸಿಕೊಂಡು ಬಂದಿದ್ದೇವೆ. ನಮ್ಮ ಕಾಲೇಜು ಶಿಕ್ಷಣವೆಲ್ಲ ಸುಮಾರಾಗಿ ಇಂಗ್ಲಿಷ್ ಮಾಧ್ಯಮದಲ್ಲಿಯೇ ನಡೆಯುತ್ತ ಬಂದಿದೆ. ಅದು ಸುಶಿಕ್ಷಿತ ಗುಲಾಮರನ್ನು ಸೃಷ್ಟಿಸುವದಕ್ಕೆಂದೇ ಆಂಗ್ಲರು ರೂಪಿಸಿದ ನೀತಿ. ಆದರೆ ಅದರಲ್ಲಿ ಅಡಗಿದ್ದ ಒಂದು ಮುಖ್ಯ ಸಂಗತಿಯನ್ನು ಗಮನಿಸಿರಿ. ಅವರಿಗೆ 'ಭದ್ರ ತಳಹದಿಯ ತರಬೇತಿ' ಪಡೆದ 'ನಿಪುಣ ಗುಲಾಮ'ರನ್ನು ಸೃಷ್ಟಿಸುವ ಅಗತ್ಯವಿತ್ತು. ಅದಕ್ಕಾಗಿ ಅವರು ಕಲಿಕೆಯ ಕ್ರಮವನ್ನು ಒಳ್ಳೆಯ ತರ್ಕಬದ್ಧ ತಳಹದಿಯ ಮೇಲೆ ರೂಪಿಸಿದರು. ಮೊದಲ ನಾಲ್ಕು ವರುಷದಲ್ಲಿ ನಮ್ಮ ಸ್ಥಳೀಯ ಭಾಷೆಯನ್ನು ಕಲಿಸಿದರು. ನಿಬಂಧ ಲೇಖನ, ಪತ್ರಲೇಖನ ಮುಂತಾದವುಗಳಲ್ಲಿ ಪರಿಣತಿ ಸೂಕ್ತವಾದ ಒಂದು ನಿಗದಿತ ಮಟ್ಟಕ್ಕೆ ಬರುವಂತೆ ನೋಡಿಕೊಂಡರು.

ಅದರ ನಂತರ ಉನ್ನತ ವ್ಯಾಸಂಗ ಬಯಸುವ ವಿದ್ಯಾರ್ಥಿಗಳಿಗೆ ಪ್ರತ್ಯೇಕ ಶಾಲೆಗಳಲ್ಲಿ (ಅವಕ್ಕೇ ನಾವು ಇಂಗ್ಲಿಷ್ ಶಾಲೆ ಅಥವಾ ಹೈಸ್ಕೂಲ್ ಎಂದು ಕರೆಯುತ್ತಿದ್ದೆವು) ಮೂರು ವರುಷ 'ಇಂಗ್ಲಿಷಿನ ಪ್ರಾರಂಭಿಕ ಪಾಠ'ಗಳಿಂದ ಮೊದಲು ಮಾಡಿ, ನಮ್ಮನ್ನು ಆಂಗ್ಲ ಭಾಷೆಯಲ್ಲಿಯೂ ನಿಬಂಧ, ಪತ್ರಲೇಖನ ಬರೆಯುವ ಮಟ್ಟಕ್ಕೆ ತರುತ್ತಿದ್ದರು. ಆ ಮೂರು ವರ್ಷಗಳಲ್ಲಿ ಗಣಿತ, ವಿಜ್ಞಾನ, ಇತಿಹಾಸ ಭೂಗೋಲಗಳನ್ನು ಸ್ಥಳೀಯ ಭಾಷೆಯಾದ ಕನ್ನಡದಲ್ಲಿಯೇ ಕಲಿಸುತ್ತಿದ್ದರು. ಮುಂದೆ ಕಾಲೇಜಿನಲ್ಲಿ ಬೋಧನಾ ಮಾಧ್ಯಮ ಇಂಗ್ಲಿಷ್ ಆಗಿರುವುದರಿಂದ ಉನ್ನತ ವ್ಯಾಸಂಗದ ಇಚ್ಛೆ ಉಳ್ಳವರು ಇಂಗ್ಲಿಷ್ ಕಲಿಕೆಗೆ ವಿಶೇಷ ಗಮನ ಕೊಡಬೇಕೆಂದು ಸೂಚಿಸುತ್ತಿದ್ದರು. ಈ ಮೂರು ವರುಷ ಕಾಲ ಕಲಿತ ನಮ್ಮ ಇಂಗ್ಲಿಷ್ ಜ್ಞಾನ ಅದರ ನಂತರದ ನಾಲ್ಕು ವರುಷಗಳಲ್ಲಿ ಗಣಿತಶಾಸ್ತ್ರವನ್ನು ಇಂಗ್ಲಿಷಿನಲ್ಲಿಯೇ ಕಲಿಯಲಿಕ್ಕೆ, ಉತ್ತರಿಸಲಿಕ್ಕೆ ಸಾಕಾಗುತ್ತಿತ್ತು. ಆಲ್ಜಿಬ್ರಾ, ಜ್ಯಾಮೆಟ್ರಿಗಳನ್ನೆಲ್ಲ ನಾವು ಇಂಗ್ಲಿಷಿನಲ್ಲಿಯೇ ಓದಿ ಉತ್ತರಿಸುತ್ತಿದ್ದೆವು.

ಭೌತಶಾಸ್ತ್ರ, ರಸಾಯನಶಾಸ್ತ್ರಗಳನ್ನು ಕನ್ನಡದಲ್ಲಿ ಕಲಿಸುತ್ತಿದ್ದರು. ಪರೀಕ್ಷೆಯಲ್ಲಿ ಕನ್ನಡದಲ್ಲಿಯೇ ಉತ್ತರಿಸುವ ಅವಕಾಶವನ್ನೂ ಕೊಟ್ಟರು. ವೈಜ್ಞಾನಿಕ ಕನ್ನಡ ಶಬ್ದಗಳಿಗೆ ಕಂಸಗಳಲ್ಲಿ ಅದರ ಇಂಗ್ಲಿಷ್ ಪದವನ್ನು ನಮೂದಿಸುವ ಪರಿಪಾಠ ಇಟ್ಟುಕೊಂಡಿದ್ದೆವು. ಮನೆಯಲ್ಲಿ ನಾವು ಓದುತ್ತಿದ್ದ ಪಠ್ಯಪುಸ್ತಕಗಳು ಇಂಗ್ಲಿಷಿನಲ್ಲಿ ಇರುತ್ತಿದ್ದವು. ವಾರ್ಷಿಕ ಪರೀಕ್ಷೆಗೆ ಜಿಲ್ಲಾ ಕೇಂದ್ರದಿಂದ ಬರುತ್ತಿದ್ದ ಪ್ರಶ್ನೆ ಪತ್ರಿಕೆಗಳೂ ಇಂಗ್ಲಿಷಿನಲ್ಲಿಯೇ ಇರುತ್ತಿದ್ದವು. ಪ್ರಶ್ನೆ ಪತ್ರಿಕೆಯನ್ನು ಇಂಗ್ಲಿಷಿನಲ್ಲಿ ಕೊಡುವ ಉದ್ದೇಶ ಆಂಗ್ಲ ಮಾಧ್ಯಮ ಶಾಲೆಗಳನ್ನು ಓಲೈಸುವದಕ್ಕೆ ಇರಬೇಕೆಂದು ನೀವು ಊಹಿಸಿದರೆ

# ದೇಶಪ್ರೇಮದ ಬೆಲೆ

೨೦೧೦ರಲ್ಲಿ ಕಾಮನ್‌ವೆಲ್ತ್ ಕ್ರೀಡಾಕೂಟವು ದೆಹಲಿಯಲ್ಲಿ ನಡೆಯಬೇಕಾಗಿದೆ. ಆ ಕಾರಣಕ್ಕಾಗಿ ಈಚೆಗೆ ಮೆಲ್ಬೋರ್ನ್‌ನಲ್ಲಿ ನಡೆದ ಕ್ರೀಡಾಕೂಟದ ಕಡೆಯ ದಿನ ಭಾರತವು ೧೧ ನಿಮಿಷಗಳ ಒಂದು "ಸಾಂಸ್ಕೃತಿಕ" ಕಾರ್ಯಕ್ರಮ ನೀಡುವುದಿತ್ತು. ಅದಕ್ಕೆ ಸರ್ಕಾರ ಖರ್ಚು ಮಾಡಿದ ಹಣ ೪೦ ಕೋಟಿ ರೂಪಾಯಿಗಳೆಂದರೆ ನಂಬಬಹುದೆ? ರಂಜನೆ ನೀಡಲು ಇನ್ನಾವ ಕಲಾವಿದರೂ ಇರಲಿಲ್ಲವೆಂದೋ ಏನೋ ಸಿನಿಮಾ ತಾರೆಯರನ್ನು ಹಿಡಿದುಕೊಂಡು ಹೋಗಲಾಗಿತ್ತು. ಇವರೆಲ್ಲಾ ಮಹಾನ್ ದೇಶಭಕ್ತರು. ಭಾರತದ ಪರವಾಗಿ ಅಂತಹ ಸಮಾರಂಭದಲ್ಲಿ ಪಾಲ್ಗೊಳ್ಳುವ ಅವಕಾಶ ಸಿಕ್ಕಿದ್ದು ತಮ್ಮ ದೇಶಭಕ್ತಿಗೆ ಮೆರುಗು ನೀಡಿದೆಯೆಂದು ಅವರೆಲ್ಲಾ ಘೋಷಿಸಿದ್ದಾರೆ! ಈ ದೇಶಭಕ್ತಿ ಪ್ರದರ್ಶನಕ್ಕೆ ಐಶ್ವರ್ಯಾ ರೈ ಎಂಬುವಳು ಪಡೆದದ್ದು ಕೇವಲ ಮೂರು ಕೋಟಿ ರೂಪಾಯಿಗಳು. ಲಾರಾ ದತ್ತ ಮತ್ತು ರಾಣಿ ಮುಖರ್ಜಿ ಎಂಬುವರು ತಲಾ ಒಂದೂವರೆ ಕೋಟಿ ಪಡೆದು ದೇಶಭಕ್ತಿ ಮೆರೆದರು. ಸಯಿಫ್ ಖಾನ್ ಸ್ವಲ್ಪ ಉದಾರಿ; ಆದ್ದರಿಂದ ಅವನಿಗೆ ಮುಕ್ಕಾಲು ಕೋಟಿ ಸಾಕಾಯಿತಂತೆ. ಯಾವ ರೀತಿಯಲ್ಲೂ ಭಾಗವಹಿಸದ ಅನೇಕ ತಾರ-ತಾರೆಯರು ಆಸ್ಟ್ರೇಲಿಯಕ್ಕೆ ಹಾರಿ ಸೌಖ್ಯ ಅನುಭವಿಸಿದರಂತೆ. ಒಟ್ಟು ಹೋಗಿದ್ದವರ ಸಂಖ್ಯೆ ೫೦೦. ಕ್ರೀಡಾಪಟುಗಳು ಇದ್ದದ್ದು ೧೯೩ ಮಾತ್ರ.

ಈ ಅಯೋಗ್ಯ ಸಿನೆಮಾ ತಾರೆಯರಿಗೆ ನಾಚಿಕೆ ಇಲ್ಲದಿದ್ದರೆ ಹಾಳಾಗಲಿ, ದೇಶದ ಸರ್ಕಾರಕ್ಕೇನು ಬಂದಿದೆ? ಇವರನ್ನೆಲ್ಲಾ ತಣಿಸಿ ಮೆರೆಸದಿದ್ದರೆ ನಮ್ಮ ಸಂಸ್ಕೃತಿ ಹೀನವಾಗುತ್ತದೆಯೇ? ಇಂತಹ ತಾರೆಯರ ಎಲ್ಲ ಸಂಗತಿಗಳನ್ನೂ ಚಪ್ಪರಿಸುತ್ತಾ ಕುಳಿತಿರುವ ನಮ್ಮ ಜನಕ್ಕೇನೆನ್ನಬೇಕು? *(ಆಧಾರ : ತೆಹೆಲ್ಕಾ ಪತ್ರಿಕೆ, ೧೩-೦೧-೨೦೦೬)*

— ಸಂ.

ಅದು ಶುದ್ಧ ತಪ್ಪು. ಆ ಕಾಲದಲ್ಲಿ ನಮ್ಮ ಜಿಲ್ಲೆಯಲ್ಲಿ ಅಂತಹ ಶಾಲೆಗಳೇ ಇರಲಿಲ್ಲ. (ಇದ್ದ ಒಂದು ಕಾನ್ವೆಂಟ್ ಶಾಲೆ ಜಿಲ್ಲಾ ಬೋರ್ಡಿನ ಆಡಳಿತದಲ್ಲಿ ಬರುತ್ತಿರಲಿಲ್ಲ.) ಈ ರೀತಿಯಲ್ಲಿ ನಮಗೆ ವಿಷಯ ಜ್ಞಾನ ಕನ್ನಡದಲ್ಲಿ ಸಿಕ್ಕುತ್ತಿತ್ತು; ಅದರ ಇಂಗ್ಲಿಷ್ ಅವತರಣಿಕೆಯೊಡನೆ ಪರಿಚಿತರಾಗಲಿಕ್ಕೆ ಮನೆಯಲ್ಲಿ ಇಂಗ್ಲಿಷ್ ಪುಸ್ತಕಗಳು, ಪರೀಕ್ಷೆಯಲ್ಲಿ ಪ್ರಶ್ನೆಗಳೂ ಇಂಗ್ಲಿಷಿನಲ್ಲಿಯೇ ಇದ್ದವು. ನಮ್ಮ ವಿಚಾರಗಳನ್ನು ಇಂಗ್ಲಿಷಿನಲ್ಲಿಯೇ ವ್ಯಕ್ತಪಡಿಸುವದಕ್ಕೆ ತೊಂದರೆ ಇದ್ದರೆ ಅದರಿಂದ ಹಿನ್ನಡೆ ಅನುಭವಿಸುವದು ಬೇಡ ಎಂದು ಕನ್ನಡದಲ್ಲಿ ಬರೆಯುವ ಸವಲತ್ತನ್ನೂ ಕಲ್ಪಿಸಿದ್ದರು.

ಮುಂದೆ ಸೈನ್ಸ್, ಇಂಜಿನಿಯರಿಂಗ್ ಮತ್ತು ಮೆಡಿಕಲ್ ಓದಲಿರುವ ವಿದ್ಯಾರ್ಥಿಗಳಿಗೆ ಗಣಿತಶಾಸ್ತ್ರ, ರಸಾಯನ ಹಾಗೂ ಭೌತಶಾಸ್ತ್ರಗಳನ್ನು ಕಾಲೇಜಿನಲ್ಲಿ ಕಲಿಯುವಾಗ ಇಂಗ್ಲಿಷ್ ಮಾಧ್ಯಮಕ್ಕೆ ಹೊಂದಿಕೊಳ್ಳುವದು ನಿರಾಯಾಸವಾಗಿರಲಿ, ಎಂಬ ಉದ್ದೇಶದಿಂದ ಹಂತ ಹಂತವಾಗಿ ಮಾಧ್ಯಮದ ಬದಲಾವಣೆಯನ್ನು ನಿಯೋಜಿಸಿದ್ದರು!

ಅಂದಿನ ದಿನಗಳ ಕಾನ್ವೆಂಟ್ ಶಾಲೆಗಳು ಮೂಲತಃ ಆಂಗ್ಲ ದೊರೆಗಳ ಪೀಳಿಗೆಯ ಹಿತಕ್ಕಾಗಿ ನಿರ್ಮಿಸಿದವುಗಳು. ಅವರಿಗೆ ಉಳಿದವರಂತೆ 'ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಪಾಲುಗೊಳ್ಳುವ ಅಗತ್ಯವಿರಲಿಲ್ಲ'. ಹೀಗಾಗಿ ಅಂತಹ ಶಾಲೆಗಳಲ್ಲಿ ಓದಿ ಬಂದ ಭಾರತೀಯ ವಿದ್ಯಾರ್ಥಿಗಳು ಮುಖ್ಯವಾಹಿನಿಯ ವಿದ್ಯಾರ್ಥಿಗಳ ಗುಂಪಿನಲ್ಲಿ ಹಿಂದೆ ಬೀಳುತ್ತಿದ್ದುದು ಸ್ವಾಭಾವಿಕವಾಗಿತ್ತು. ಅಂದು ಅಷ್ಟು ನಿಕೃಷ್ಟವಾಗಿ ನಾವು ಕಂಡ ಇಂಗ್ಲಿಷ್ ಮಾಧ್ಯಮ ಶಾಲೆಗಳಿಗೆ ಈಗ ಒಮ್ಮಿಂದೊಮ್ಮೆಲೇ ಶುಕ್ರದೆಶೆ ಒದಗಿಬಂತು! ಇದು ಯಾವ ಕಾರಣಕ್ಕಾಗಿ? ಉತ್ತರ ಹಿಂದುಸ್ತಾನದ ಶಕುನಿಗಳು ಹಿಂದಿ ಹೇರಿಕೆಯ ವ್ಯೂಹ ರಚಿಸುತ್ತಿದ್ದಾರೆ ಎಂಬ ಗುಲ್ಲು ಇದಕ್ಕೆ ಮೂಲ ಕಾರಣವಾಗಿತ್ತು. ಅದರ ವಿರೋಧಕ್ಕಾಗಿ ಜನರು ಆಂಗ್ಲ ಮಾಧ್ಯಮ ಶಾಲೆ ಎಂದು ಕಾನ್ವೆಂಟ್ ಶಾಲೆಗಳಿಗೆ ನುಗ್ಗಿದರು!

ಆಗ ಆಂಗ್ಲ ಮಾಧ್ಯಮ ಶಾಲೆಗಳನ್ನು ನಡೆಸುವದು ಒಂದು 'ಸುಲಭವಾಗಿ ಹಣ ಮಾಡುವ ಹೊಸ ವಿಧಾನ' ಎಂಬ ಸಂಗತಿ ಧನಾಕಾಂಕ್ಷಿ ಹದ್ದುಗಳಿಗೆ ಗೋಚರವಾಯಿತು. ಶಾಸಕರ ಹಾಗೂ ಇತರ ಪ್ರಭಾವೀ ವ್ಯಕ್ತಿಗಳ ಸಂಬಂಧಿಕರು ಅಂತಹ ಶಾಲೆಗಳನ್ನು ತೆರೆದರು. 'ಅವರ ಹಿತಕ್ಕೆ ಅಡ್ಡಿ ಬರಬಾರದು' ಎಂಬ ಒಂದು ಒಳ ಉದ್ದೇಶ, ಮೇಲಿನ ಮಾತಿಗೆ 'ಕನ್ನಡಕ್ಕೆ ಅಗ್ರಸ್ಥಾನ ನೀಡುವ ಘೋಷಣೆ' ಇದು ನಮ್ಮ ಶಾಸಕರ ಇಬ್ಬಂದಿ ಧೋರಣೆ. ಅದಕ್ಕಾಗಿ ಕಾನೂನನ್ನು ನೆಪ ಮಾಡಿಕೊಂಡು ಕಣ್ಣು ಮುಚ್ಚಾಲೆ ಆಡುತ್ತ ನಮ್ಮನ್ನು ಆಟ ಆಡಿಸುತ್ತಿದ್ದಾರೆ. ಮುಂಬಯಿ ಕರ್ನಾಟಕದಲ್ಲಿ ನಲವತ್ತರ ದಶಕದಲ್ಲಿ ರೂಢಿಯಲ್ಲಿದ್ದ, ಮೇಲೆ ವಿವರಿಸಿದ ಆ ಪಠ್ಯಕ್ರಮವನ್ನು ಇನ್ನೊಮ್ಮೆ ಪರಿಶೀಲಿಸಬಾರದೇಕೆ? (ಬಹುಶಃ ದೇಶದ ಎಲ್ಲ ಕಡೆಗೂ ಅದೇ ಪದ್ಧತಿ ಇದ್ದಿರಬೇಕು.) ಅದೇ ಸರಿಯಾದದ್ದು ಎಂದು ಕಂಡುಬಂದರೆ ಅದನ್ನೇ ಅಳವಡಿಸಿಕೊಳ್ಳಲಿ. ಆ ರೀತಿ ವ್ಯಾಸಂಗ ಮಾಡಿದವರು ಕನ್ನಡ ಆಡಳಿತಭಾಷೆಯಾಗಿರುವ ಕರ್ನಾಟಕದಲ್ಲಿಯೂ ಸಲ್ಲುವರು, ಬೇರೆ ಕಡೆಯಲ್ಲಿಯೂ ಸಲ್ಲಬಲ್ಲರು.

ಮೊದಲಿನ ನಾಲ್ಕು ವರುಷ ಮಾತೃಭಾಷೆಯಲ್ಲಿ ವ್ಯಾಸಂಗ ಮಾಡಿದ ನಾವು ಪರಕೀಯರ ಆಡಳಿತದಲ್ಲಿಯೂ ನಮ್ಮ ಸಂಸ್ಕೃತಿಯನ್ನು ಕಾಪಾಡಿಕೊಂಡು ಬಂದಿದ್ದೆವು. ದಾಸ್ಯ ವಿಮೋಚನೆಯತ್ತ ಕಾರ್ಯಪ್ರವೃತ್ತರಾಗುವ ಪ್ರಯತ್ನವನ್ನೂ ಮಾಡಲು ಶಕ್ತರಾದೆವು. ಈಗ ಏನಾಗುತ್ತಿದೆ? 'ನಮ್ಮವರ ಆಡಳಿತ'ದಲ್ಲಿ 'ನಮ್ಮ ಸಂಸ್ಕೃತಿ'ಯನ್ನು ನಿರ್ಲಕ್ಷಿಸಿ ಅಮೇರಿಕನ್ನರ ದಾಸರಾಗುವತ್ತ ಹೆಜ್ಜೆ ಹಾಕುತ್ತಿದ್ದೇವೆ. ಈಗಲೇ ಎಚ್ಚೆತ್ತುಕೊಳ್ಳುವುದು ಒಳಿತು.

ಮೈಸೂರು — **ಪ್ರೊ॥ ವಿಕ್ರಮ ಕವಲಿ**

## ಇಂಗ್ಲಿಷ್ ಭಾಷಾ ಕಲಿಕೆ ಮತ್ತು ಭಾಷಾ ನೀತಿ

ಒಂದು ಸಮುದಾಯದ ಶೈಕ್ಷಣಿಕ-ಸಾಂಸ್ಕೃತಿಕ ನಿಲುವುಗಳನ್ನು ನಿರ್ಧರಿಸುವ ಪ್ರಭುತ್ವ ಯಾರಿಗೆ ಸೇರಿದ್ದು ಎನ್ನುವ ಅಂಶವನ್ನು ಕುರಿತು ಯೋಚಿಸುವ ಕ್ರಮವೇ ದಿಗ್ಭ್ರಮೆಯನ್ನುಂಟುಮಾಡುವಂತಹದು. ಕಾರಣ, ಕರ್ನಾಟಕದ ದಲಿತ, ಶೂದ್ರ ಮತ್ತು ಇನ್ನುಳಿದ ಹಿಂದುಳಿದ ಸಮುದಾಯದ ಮಕ್ಕಳಿಗೆ ಇಂಗ್ಲಿಷನ್ನು ಒಂದನೇ ತರಗತಿಯಿಂದ ಕಲಿಸಬೇಕು ಎನ್ನುವ ಬೇಡಿಕೆ ಸಾಮಾಜಿಕ-ಆರ್ಥಿಕವಾಗಿ ಮಹತ್ವವನ್ನು ಪಡೆದುಕೊಂಡಿದೆ. ಇದಕ್ಕೆ ವ್ಯತಿರಿಕ್ತವಾಗಿ, ಕೆಲವು ಬುದ್ಧಿಜೀವಿಗಳು (ಇಂಗ್ಲಿಷಿನ ಲಾಭವನ್ನು ಪಡೆದುಕೊಂಡವರು) ಒಂದನೇ ತರಗತಿಯಿಂದ ಇಂಗ್ಲಿಷ್ ಕಲಿಕೆ ತಪ್ಪು ಎನ್ನುವ ವಾದವನ್ನು ಮುಂದೊಡ್ಡಿದ್ದಾರೆ. ಯಾವುದೇ ಸಮುದಾಯದ ಶಿಕ್ಷಣ ಭಾಷೆ ಮತ್ತು ಶಿಕ್ಷಣದಲ್ಲಿ ಕಲಿಸಬೇಕಾದ ಭಾಷೆಗಳು ಯಾವುವು? ಈ ಭಾಷಾ ನೀತಿಯ ಆಧಾರದ ಮೇಲೆ ಒಂದು ಸಮುದಾಯದ ಭವಿಷ್ಯ ನಿರ್ಧಾರವಾಗುತ್ತದೆ. ಯಾಕೆಂದರೆ, ಶಿಕ್ಷಣ ಕ್ರಮವೂ ಕೂಡ ನಮ್ಮ ಸಾಂಸ್ಕೃತಿಕ ಅಂತಃಸತ್ವವನ್ನು ಕಾಪಾಡಬಹುದು ಅಥವಾ ನಾಶಮಾಡಬಹುದು. ಹಾಗಾಗಿ ಪ್ರತಿಯೊಂದು ಸಮುದಾಯದ ಸಾಂಸ್ಕೃತಿಕ, ಶೈಕ್ಷಣಿಕ ನಿಲುವುಗಳನ್ನು ತೆಗೆದುಕೊಳ್ಳುವ ಸಂದರ್ಭದಲ್ಲಿ ಸಾಂಸ್ಕೃತಿಕ ವಿವೇಕ ಮತ್ತು ಎಚ್ಚರದಿಂದ ನಿರ್ಧರಿಸಬೇಕು. ಈ ಎಲ್ಲ ಚರ್ಚೆಯನ್ನು ಇವತ್ತಿನ ಇಂಗ್ಲಿಷ್ ಕಲಿಕೆಯ ತೀರ್ಮಾನಕ್ಕೆ ಪೂರಕವಾಗಿ ಬಳಸಿಕೊಳ್ಳಬೇಕು.

ಒಂದು ವಸಾಹತುಶಾಹಿ, ಸಾಮ್ರಾಜ್ಯಶಾಹಿ ಭಾಷೆಯನ್ನು ಕಲಿಸಬೇಕೋ ಬೇಡವೋ ಎನ್ನುವುದನ್ನು ಕುರಿತು ಸುಮಾರು ಆರು ದಶಕಗಳಿಂದ ಚರ್ಚೆ ನಡೆಯುತ್ತಲೇ ಇದೆ. ಆದರೆ, ಇಂದು ಇಂಗ್ಲಿಷ್ ಕೇವಲ ವಸಾಹತುಶಾಹಿ ಅಥವಾ ಸಾಮ್ರಾಜ್ಯಶಾಹಿ ಭಾಷೆಯಾಗಿರದೆ ಆ ಎಲ್ಲ ಧೋರಣೆಗಳಿಗೆ ತಕ್ಕ ಪ್ರತಿರೋಧವನ್ನು ಒಡ್ಡುವ ಆಯುಧವಾಗಿಯೂ ನಮಗೆ ಲಭ್ಯವಾಗಿದೆ. ಒಂದು ರಾಷ್ಟ್ರದ ಭಾಷಾನೀತಿ ಮತ್ತು ಯೋಜನೆ ಬಹಳ ಪ್ರಮುಖವಾದ ಸಂವಿಧಾನಾತ್ಮಕ ನಿರ್ಧಾರವಾಗುತ್ತದೆ. ಆದ್ದರಿಂದ, ಇಂಗ್ಲಿಷನ್ನು ಒಂದನೇ ತರಗತಿಯಿಂದ ಕಲಿಸಬೇಕು ಎನ್ನುವ ತೀರ್ಮಾನಕ್ಕೂ ಮತ್ತು ಭಾಷಾ ನೀತಿಗೆ ಯಾವುದೇ ಸಂಬಂಧವಿಲ್ಲವೆನ್ನುವ ವಾದ ಸೂಕ್ತವಾದುದಲ್ಲ. ಹಾಗಂತ ಇಂಗ್ಲಿಷ್‌ಅನ್ನು ಒಂದನೇ ತರಗತಿಯಿಂದ ಕಲಿಸಕೂಡದು ಎನ್ನುವ ವಾದವೂ ಕೂಡ ಅಷ್ಟೇ ಅಸಮಂಜಸವಾದಂತಹುದು. ಹಾಗಾಗಿ, ಇಂದು ಸರ್ಕಾರಿ ಶಾಲೆಗಳಲ್ಲಿ ಓದುವ ಸಾಮಾನ್ಯ ಪ್ರಜೆಗಳ ಮಕ್ಕಳಿಗೆ ಇಂಗ್ಲಿಷನ್ನು ಕಲಿಸುವ ಕ್ರಮ ತಪ್ಪು ಎನ್ನುವುದು ಕೇವಲ ಹುಸಿ ಆದರ್ಶವಾದೀತು. ಪಕ್ಕದ ಕಾನ್ವೆಂಟ್ ಶಾಲೆಗಳಲ್ಲಿ ಮೇಲು ವರ್ಗದ ಮತ್ತು ಶ್ರೀಮಂತ ಮಕ್ಕಳು ಒಂದನೇ ತರಗತಿಗಿಂತಲೂ ಮುಂಚೆ ಇಂಗ್ಲಿಷನ್ನು ಸುಲಲಿತವಾಗಿ, ಸ್ಫುಟವಾಗಿ ಕಲಿಯುವುದಕ್ಕೆ ಸಾಧ್ಯವಾದಾಗ, ಅದೇಕೆ ಸರಕಾರಿ ಶಾಲೆಗಳಲ್ಲಿ ಓದುವ ಮಕ್ಕಳಿಗೆ ಅಸಾಧ್ಯ?

ಶಿಕ್ಷಣದ ಮೂಲ ಸ್ವರೂಪದಲ್ಲೇ ದೋಷಗಳಿವೆ. ಹಾಗಾಗಿ, ಇವತ್ತು ಇಂಗ್ಲಿಷ್‌ಅನ್ನು ಒಂದು ಭಾಷೆಯಾಗಿ ಓದುವುದರ ಮೂಲಕ ಕೆಲವು ಸಾಂಸ್ಕೃತಿಕ ಅಪಾಯಗಳು ಜರುಗುತ್ತವೆ ಎನ್ನುವುದು ಹಸಿ ಸುಳ್ಳು. ಬದಲಾಗಿ, ಇಂಗ್ಲಿಷ್ ಜನಸಾಮಾನ್ಯರಿಗೆ ವ್ಯಾವಹಾರಿಕ ಲಾಭ ಮತ್ತು ಆತ್ಮಸ್ಥೈರ್ಯವನ್ನು ಕೊಡುತ್ತದೆ. ಇವತ್ತಿನ ಅಗತ್ಯ ಮತ್ತು ಆಧುನಿಕ ಜ್ಞಾನವನ್ನು ಪಡೆದುಕೊಳ್ಳಲು ಇಂಗ್ಲಿಷ್ ಸುಲಭವಾಗಿ ನಮಗೆ ಅಂತಹ ಜ್ಞಾನದ ಮೂಲಗಳನ್ನು ಒದಗಿಸಿಕೊಡುತ್ತದೆ. ಮನೋಭಾಷಾವಿಜ್ಞಾನದ ಪ್ರಕಾರ ಪ್ರತಿಯೊಂದು ಸಾಮಾನ್ಯ ಮಗುವೂ ಜೈವಿಕ ಮತ್ತು

ಪುಟ ೯ಕ್ಕೆ

### ಓದುಗರ ಗಮನಕ್ಕೆ

ಜನವರಿ ವಿಶೇಷ ಸಂಚಿಕೆಯ ೧೨೫ನೆಯ ಪುಟದ ೨೧ನೇ ಸಾಲಿನಲ್ಲಿರುವ ಪ್ರೊ॥ ಬಿ.ವಿ. ವೆಂಕಟರಾವ್ ಅವರ ಮಾತನ್ನು ಹೀಗೆ ಓದಿಕೊಳ್ಳಬೇಕೆಂದು ವಿನಂತಿ :

ಇಂಥಾ ಸ್ಥಿತಿ, ಅದರಲ್ಲೂ ವಿಶೇಷ ಆರ್ಥಿಕ ವಲಯ ಒಂದು ರಾವಣ ರಾಜ್ಯ. ಅದರ ಹೊರಗೆ ವಾಸಿಸುವವರೆಲ್ಲಾ ಅರೆಮಾನವರಾಗುತ್ತಾರೆ, ಅಷ್ಟೇ.

— ಸಂ.

೩ನೇ ಪುಟದಿಂದ (ಈ ತಿಂಗಳು)

ದಿನಗಳಲ್ಲಿ ಇದಕ್ಕೆ ಉತ್ತರ ಹುಡುಕಬೇಕಾಗುತ್ತದೆ. ಅಮೆರಿಕಾದ ಜನಗಳು ಎದುರಿಸಬೇಕಾದ ಮೂಲಭೂತ ಪ್ರಶ್ನೆ ಇದು : ''ನಮ್ಮ ಅಧ್ಯಕ್ಷನು ಬೇರೆಲ್ಲ ದೇಶಗಳನ್ನೂ ಆಕ್ರಮಿಸಿ ಅಲ್ಲಿಯ ಅಧ್ಯಕ್ಷರುಗಳನ್ನು ನೇಣುಹಾಕಬಹುದೇ? ಹಾಗಿದ್ದರೆ ನಮ್ಮ ಅಧ್ಯಕ್ಷನನ್ನು ನೇಣು ಹಾಕಬೇಕಾದವರು ಯಾರು ?''

*  *  *

ಪಶ್ಚಿಮ ಬಂಗಾಳದ ಸಿಂಗೂರು ಮತ್ತು ನಂದಿಗ್ರಾಮ ಈಗ ಜಗತ್ಪ್ರಸಿದ್ಧವಾಗಿವೆ. ಬಲವಂತವಾಗಿ ರೈತರಿಂದ ಜಮೀನನ್ನು ಪಡೆಯಲಾಗಿದೆ ಎಂಬ ಆಪಾದನೆ ಮಾಡಿ ಮಮತಾ ದೀದಿ ಉಪವಾಸವ್ರತ ಕೈಗೊಂಡು ಸಿಂಗೂರನ್ನು ಹೆಸರುವಾಸಿಯನ್ನಾಗಿಸಿದರು. ಈಚೆಗೆ ಆಕೆಯ ಪಕ್ಷದ ಕಾರ್ಯಕರ್ತರು ಆ ಗ್ರಾಮದ ಬಳಿ ಟಾಟಾ ಕಂಪನಿಯು ಕೊಳ್ಳಲಿರುವ ಜಮೀನಿನ ಬೇಲಿ ಕಿತ್ತುಹಾಕಿದರು. ಬಲವಂತದ ಪ್ರಶ್ನೆಯೇ ಇಲ್ಲ, ಮಾರುಕಟ್ಟೆ ಬೆಲೆಯನ್ನು ರೈತರು ಈಗಾಗಲೇ ಪಡೆದಿದ್ದಾರಲ್ಲದೆ ಬೇರೆ ಸೌಕರ್ಯಗಳನ್ನೂ ಪಡೆಯಲಿದ್ದಾರೆಂದು ಮುಖ್ಯಮಂತ್ರಿ ಹೇಳಿದ್ದಾರೆ. ರೈತರಿಗೆ ನೀಡಲಾಗುವ ಬೆಲೆ ಮತ್ತು ಟಾಟಾ ಕಂಪನಿಯಿಂದ ಪಡೆಯಲಾಗುವ ಬೆಲೆ ಎರಡೂ ಬೇರೆ ಬೇರೆ ಎಂಬ ಆಪಾದನೆಯು ಖಚಿತವಾಗಿಲ್ಲ. ನಂದೀಗ್ರಾಮದ ಕತೆಯೇ ಬೇರೆ. ಸಕ್ರಮವಾಗಿ ಸರ್ಕಾರವು ಜಮೀನನ್ನು ವಶಪಡಿಸಿಕೊಳ್ಳಲು ಅಗತ್ಯವಾದ ಪ್ರಕಟಣೆ ಇನ್ನೂ ನೀಡಿಲ್ಲದಿರುವಾಗಲೆ, ವಿಶೇಷ ಆರ್ಥಿಕ ವಲಯದ ರಚನೆಗಾಗಿ ಜಮೀನು ಸ್ವಾಧೀನಪಡಿಸಿಕೊಳ್ಳಲಾಗಿದೆಯೆಂಬ ಕೂಗು ಎದ್ದಿದೆ. ಅದರ ಬಗ್ಗೆ ತಕರಾರು ಅನೇಕ ವಿಧಗಳಲ್ಲಿ ವ್ಯಕ್ತವಾಗಿದೆ. ಮೊಟ್ಟಮೊದಲನೆಯದಾಗಿ, ಈ ವಲಯಗಳ ಉದ್ದೇಶವು ತೀರಾ ಪ್ರಶ್ನಾರ್ಹವಾಗಿದೆ ; ಎರಡನೆಯದಾಗಿ, ಲಾಭ ಮಾಡಿಕೊಳ್ಳುವ ಕಂಪನಿಗಳ ಪರವಾಗಿ ಸರಕಾರವು ಮಧ್ಯವರ್ತಿಯಾಗುವುದನ್ನು ಸಕಾರಣವಾಗಿ ಟೀಕಿಸಲಾಗಿದೆ. ಈ ಬಗ್ಗೆ 'ಹೊಸತು' ಪತ್ರಿಕೆಯಲ್ಲಿ ಸಾಕಷ್ಟು ಚರ್ಚೆ ನಡೆದಿದೆ ಮತ್ತು ಇನ್ನೂ ಮುಂದುವರಿಯುತ್ತದೆ. ಬಿಡದಿಯಲ್ಲಿ ಒಂದು ಪಟ್ಟಣವನ್ನು ಹುಟ್ಟಿಹಾಕುವ ಕಾರ್ಯಕ್ರಮವು ಸಹ ವಿಶೇಷ ಆರ್ಥಿಕ ವಲಯಗಳ ರಚನೆಯಂತೆ ರೈತರ ಭೂಮಿಯನ್ನು ಸ್ವಾಹಾ ಮಾಡುವ ದಿಕ್ಕಿನಲ್ಲೇ ಹೋಗುತ್ತದೆ. ಎಲ್ಲಾ ಬಿಟ್ಟು ಶ್ರೀರಂಗಪಟ್ಟಣದ ಬಳಿ ಒಂದು ವಿಶೇಷ ಆರ್ಥಿಕ ವಲಯದ ರಚನೆಗೆ ಪ್ರಯತ್ನಗಳು ನಡೆದಿವೆ. ಕೃಷಿಯೋಗ್ಯವಾದ ಫಲವತ್ತಾದ ಭೂಮಿಯನ್ನು ಹೀಗೆ ಪರಿವರ್ತಿಸುವುದು ಅಕ್ಷಮ್ಯ. ಜೊತೆಗೆ, ಬೆಂಗಳೂರು-ಮೈಸೂರು ಬಿಟ್ಟು ಉತ್ತರ ಕರ್ನಾಟಕದಲ್ಲಿ, ಅದರಲ್ಲೂ ನೀರಾವರಿ ಸೌಲಭ್ಯ ಕಲ್ಪಿಸಲಾಗದಿರುವ ಕಡೆಗಳಲ್ಲಿ, ಈ ವಲಯಗಳನ್ನು ಸ್ಥಾಪಿಸಲು ಮುಂದಾಗದಿರುವುದರ ಹಿಂದೆ ಅಡಗಿರುವ ಯೋಜನೆ ಯಾವುದು ? ಶ್ರೀರಂಗಪಟ್ಟಣದ ಬಳಿ ಉದ್ದೇಶಿತ ಯೋಜನೆಗೆಂದು ರೈತರೊಡನೆ ಜಿಲ್ಲಾಧಿಕಾರಿಗಳು ಸಮಾಲೋಚನೆ ನಡೆಸಿದ್ದಾರೆ. ಎಕರೆಗೆ ಎಂಟು ಲಕ್ಷ ರೂಪಾಯಿಗಳನ್ನು ನೀಡಲು ಸರ್ಕಾರವು ಸಿದ್ಧವಿದೆಯೆಂದು ಅವರು ಹೇಳಿದ್ದಾರೆಂಬ ವರದಿಯೊಂದಿದೆ. ಇನ್ಫೋಸಿಸ್‌ನವರು ಎಕರೆಗೆ ಇಪ್ಪತ್ತು ಲಕ್ಷ ನೀಡಲು ತಯಾರಾಗಿದ್ದಾರಂತೆ. ಆದರೆ ರೈತರು ಐವತ್ತು ಲಕ್ಷ ಕೇಳುತ್ತಿದ್ದಾರೆಂಬ ಸಮಾಚಾರವಿದೆ. ಎಷ್ಟು ಲಕ್ಷ ಕೊಟ್ಟರೂ ಸರಿಯೆ, ಆ ಭೂಮಿಯನ್ನು ಕೃಷಿಗಾಗಿ ಮಾತ್ರವೇ ಬಳಸಬೇಕೆಂಬ ನಿರ್ಬಂಧವಿರಬೇಕು; ಏಕೆಂದರೆ, ಇರುವ ಭೂಮಿಯನ್ನು ಹೆಚ್ಚಿಸಲು ಹೊಸ ಭೂಮಿಯ ಸೃಷ್ಟಿ ಅಸಾಧ್ಯ. ಆಹಾರದ ಉತ್ಪಾದನೆಗೆ ಭಂಗವಾಗುವ ರೀತಿಯಲ್ಲಿ ಭೂಮಿಯನ್ನು ಪರಿವರ್ತಿಸುವುದು ಆರ್ಥಿಕತೆಯ ದೃಷ್ಟಿಯಿಂದ ಮೂರ್ಖತನವಾದೀತು ಮತ್ತು ದೇಶದ ಆಹಾರ ಕೊರತೆಯನ್ನು ಹೆಚ್ಚಿಸುವ ಪ್ರಣಾಲಿಕೆಯಾದೀತು. ವಿಶೇಷ ಆರ್ಥಿಕ ವಲಯಗಳ ಹೆಸರಿನಲ್ಲಿ ಹೊಸ ಶೈಲಿಯ ವಸಾಹತುಶಾಹಿಯ ಆವಿರ್ಭಾವವಾಗದಂತೆ ಸೆಣೆಸುವುದು ಜನರ ಪ್ರಾಥಮಿಕ ಕರ್ತವ್ಯವಾಗಿರುತ್ತದೆ.

*  *  *

ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿ ಸಬರ್ವಾಲ ನಿವೃತ್ತರಾಗುವ ಮುನ್ನ ಒಂದು ಬಾಂಬು ಸಿಡಿಸಿ ಹೋಗಿದ್ದಾರೆ. ಅದು ಸಂವಿಧಾನದ ಒಂಭತ್ತನೆಯ ಶೆಡ್ಯೂಲ್‌ಗೆ ಸಂಬಂಧಿಸಿದ ತೀರ್ಪಿನ ರೂಪದಲ್ಲಿ ವ್ಯಕ್ತವಾಗಿದೆ. ಮೂಲತಃ ಭೂಸುಧಾರಣೆಗೆ ಅಡ್ಡಿ ಉಂಟಾಗದಿರುವಂತೆ ಮಾಡಲು ಈ ಶೆಡ್ಯೂಲಿನ ಅಗತ್ಯವಿತ್ತು. ನಂತರ ಮೀಸಲಾತಿಗೆ ಸಂಬಂಧಿಸಿದ ಪ್ರಶ್ನೆಗಳೂ ಇದರಲ್ಲಿ ಅಡಕಗೊಂಡವು. ಈಗ ಅವೆಲ್ಲಕ್ಕೂ ಚ್ಯುತಿಯುಂಟಾಗುವ ಸಂಭವವು ದಿಢೀರನೆ ಎದುರಾಗಿದೆ. ಮೂಲಭೂತವಾದ ಪ್ರಶ್ನೆ ಒಂದೇ : ದೇಶದ ಪ್ರಗತಿಯ ಹಾದಿಯಲ್ಲಿ, ಒಬ್ಬ ವ್ಯಕ್ತಿಯ ಆಕಾಂಕ್ಷೆಗಳಿಗೆ ಅಡಚಣೆಯೊಡ್ಡುವ ಪರಂಪರಾಗತವಾದ ಕೆಲವು ಪದ್ಧತಿಗಳನ್ನು ನಿವಾರಿಸುವುದು ಹೇಗೆ? ಪುರಾತನ ವ್ಯವಸ್ಥೆಯಿಂದ ಕೆಲವು ಹಕ್ಕುಗಳನ್ನುಳ್ಳವರು, ಹೊಸದಾಗಿ ಸ್ವಾತಂತ್ರ್ಯ ಪಡೆಯಲು ಉದ್ಯುಕ್ತರಾದವರ ಹಕ್ಕನ್ನು ಮೊಟಕುಗೊಳಿಸಬಹುದೆ ?

ಎಷ್ಟೇ ಸಂವಿಧಾನಾತ್ಮಕವಾದ ತಾಂತ್ರಿಕ ಭಾಷೆ ಪ್ರಯೋಗಿಸಿ ಚರ್ಚಿಸಿದರೂ ಕಡೆಗೆ ನಾವು ಎದುರಿಸಲೇಬೇಕಾದ ಪ್ರಶ್ನೆಗೆ ಈಗ ನ್ಯಾಯಪೀಠವು ಅಸಮರ್ಪಕವಾದ ಉತ್ತರ ನೀಡಿದೆ. ಅದಕ್ಕೆ ''ಸಂವಿಧಾನದ ಮೂಲ ಸ್ವರೂಪ'' ಎಂಬ ಗುಮ್ಮನನ್ನು ಮುಂದೆಮಾಡಲಾಗಿದೆ. ಕೇಶವಾನಂದ ಭಾರತಿ ಸಂಬಂಧದಲ್ಲಿ ಬಂದ ತೀರ್ಪು ಈ ''ಮೂಲ ಸ್ವರೂಪ''ದ ಪ್ರಸ್ತಾಪ ಮಾಡಿ, ಪಾರ್ಲಿಮೆಂಟಿಗೆ ಅದನ್ನು ಬದಲಾಯಿಸುವ ಹಕ್ಕಿಲ್ಲವೆಂದು ಹೇಳಿತ್ತು. ಆದರೆ ಇಂದು ನಮ್ಮ ದೇಶದ ಸಂವಿಧಾನವು ''ಕಾರ್ಪೊರೇಟ್ ಸಂವಿಧಾನ''ವಾಗಿ ಬದಲಾಗುವ ಸೂಚನೆಗಳು ಕಂಡುಬರುತ್ತಿವೆ. ಯಾವುದು ''ಮೂಲ ಸ್ವರೂಪ'' ಎಂಬುದನ್ನು ನಿರ್ಧರಿಸಬೇಕಾದವರು ಸಹ ಜನರೇ ಎಂಬುದನ್ನು ನ್ಯಾಯಾಲಯವು ಮಾನ್ಯಮಾಡಬೇಕಾಗುತ್ತದೆ. ೧೯೫೦ರಲ್ಲಿ ನಾವು ಬರೆದುಕೊಂಡ ಸಂವಿಧಾನದ ವಾಕ್ಯಗಳಿಗೆ ಅರ್ಥವೇನೆಂಬುದನ್ನು ನಿರ್ಧರಿಸುತ್ತಾ ಬಂದಿರುವುದು ನ್ಯಾಯಾಲಯ. ಒಂದೇ ವಾಕ್ಯವು ಕಾಲದಿಂದ ಕಾಲಕ್ಕೆ ಭಿನ್ನವಾದ ಅರ್ಥಗಳನ್ನು ಕೊಡುತ್ತಾ ಬಂದಿರುವುದು ಒಂದು ವಿಶಿಷ್ಟ ನ್ಯಾಯಾಲಯದ ವ್ಯಾಕರಣದಿಂದಾಗಿ ಮತ್ತು ಅರ್ಥಕೋಶದ ವಿಸ್ತರಣೆಯಿಂದಾಗಿ. ವ್ಯಾಕರಣ ಮತ್ತು ಅರ್ಥಕೋಶ ಜನತೆಯ ಪರಿಧಿಗೆ ಸೇರಬೇಕೇ ಹೊರತು ಹನ್ನೊಂದು ಜನರ ಪೀಠಕ್ಕಲ್ಲವೆಂಬುದನ್ನು ನಾವು ಮನದಟ್ಟು ಮಾಡಿಕೊಳ್ಳಬೇಕಾಗಿದೆ. ಇಂದಿನ ಸಾಮಾಜಿಕ-ಆರ್ಥಿಕ ವ್ಯವಸ್ಥೆಯು ಇದೇ ''ಮೂಲ ಸ್ವರೂಪ''ದಲ್ಲಿ ಒಂದು ಸಾವಿರ ವರ್ಷಗಳ ಕಾಲ ಮುಂದುವರಿಯಬೇಕೆಂದು ನಿರೀಕ್ಷಿಸುವುದು ಅಪ್ರಬುದ್ಧವಾದದ್ದು. ಹಾಗೇನಾದರೂ ಸೂತ್ರವನ್ನು ವಿಧಿಸಿದರೆ ಬದಲಾವಣೆಗೆ ಎರಡು ಮಾರ್ಗಗಳು ಮಾತ್ರ ಉಳಿಯುತ್ತವೆ. ಒಂದು, ಹನ್ನೊಂದು ಜನರ ಪೀಠದ ತೀರ್ಪನ್ನು ಹದಿಮೂರು ಜನರ ಪೀಠವು ತಲೆಕೆಳಗು ಮಾಡುವುದು; ಇನ್ನೊಂದು, ನೇಪಾಳದಲ್ಲಿ ಸಂವಿಧಾನವನ್ನು ಬದಲಾಯಿಸಲು ಅನುಸರಿಸಬೇಕಾಗಿಬಂದ ಮಾರ್ಗ ಹಿಡಿಯುವುದು. ಒಂಭತ್ತನೆಯ ಶೆಡ್ಯೂಲ್ ಬಂದದ್ದೇ ತೊಡಕುಗಳ ನಿವಾರಣೆಗಾಗಿ; ಈಗ ಅದನ್ನೇ ತೊಡಕಿನ ಸಾಧನವನ್ನಾಗಿ ಮಾಡಹೊರಟಿರುವುದು ಒಂದು ವಿಪರ್ಯಾಸ. ಜನರ ಪ್ರಭುತ್ವದಿಂದ ಕೆಲವು ತಥಾಕಥಿತ ಧೀಮಂತರ ಪ್ರಭುತ್ವದತ್ತ ಚಲಿಸುವುದು ಇದರ ಪರಿಣಾಮವಾಗುತ್ತದೆ. ಒಬ್ಬ ನಾರಾಯಣಮೂರ್ತಿಗಳು ಕರ್ನಾಟಕದ ಶಿಕ್ಷಣ-ಆರೋಗ್ಯ-ಸಾರಿಗೆ-ಉತ್ಪಾದನಾ ಕ್ಷೇತ್ರ ಮುಂತಾದುವನ್ನೆಲ್ಲಾ ನಿಯಂತ್ರಿಸಿಬಿಡುವ ಅಪಾಯ ಇದರಲ್ಲಿ ಅಡಗಿದೆ. ಆದ್ದರಿಂದ, ಒಂಭತ್ತನೆ ಶೆಡ್ಯೂಲಿನ ಬಗೆಗಿನ ತೀರ್ಮಾನದ ಬಗ್ಗೆ ವ್ಯಾಪಕ ಚರ್ಚೆ ಮತ್ತು ಕ್ರಿಯೆ ಅನಿವಾರ್ಯವಾಗಿದೆ.

*  *  *

ನಮ್ಮ ರಾಜ್ಯದಲ್ಲಿ ಒಂದು ರೀತಿಯ 'ಸಮಾಜೋತ್ಸವ' ಆಚರಣೆಗೆ ಬರುತ್ತಿದೆ, ವ್ಯಾಖ್ಯಾನಗಳಿಗೆ ವಸ್ತುವಾಗುತ್ತಿದೆ. ಉದಾಹರಣೆಗೆ, ಬೆಂಗಳೂರಿನಲ್ಲಿ ಒಂದು ಲಕ್ಷ ಮಹಿಳೆಯರು ಒಟ್ಟಾಗಿ 'ಸೌಂದರ್ಯ ಲಹರಿ'ಯನ್ನು ಪಠಿಸುವುದು. ಆ ಗ್ರಂಥವು ಶಂಕರಾಚಾರ್ಯರು ರಚಿಸಿದ್ದೇ ಅಲ್ಲವೇ ಎಂಬ ಪ್ರಶ್ನೆಯನ್ನು ಬದಿಗಿಟ್ಟು ನೋಡಿದರೂ ಇದು ವಿಲಕ್ಷಣವಾಗಿ ತೋರುತ್ತದೆ. ತಂತ್ರವಿದ್ಯೆಯ ಲಕ್ಷಣವುಳ್ಳ ಈ ಗ್ರಂಥವನ್ನು ಲಕ್ಷ ಮಂದಿ ಮಹಿಳೆಯರಿಗೆ ಅರ್ಥವಾಗುವಂತೆ ತಿಳಿಸಿಹೇಳಲಾಗಿದೆಯೆ ? ಕೇವಲ ಸಾಮೂಹಿಕ ಪಠಣದಿಂದ ಉಂಟಾಗಬಹುದಾದ ಮನೋಭೂಮಿಕೆ ಎಂತಹದು ? ಅದಕ್ಕಿಂತಲೂ ವಿಶಾಲವಾದದ್ದು 'ಹಿಂದು ಸಮಾಜೋತ್ಸವ' ಎಂಬ ಹೆಸರಿನಲ್ಲಿ ನಡೆಯುತ್ತಿದೆ. ವಿಶಾಲವಾದ ಗಟ್ಟಿಸಮಾಜವನ್ನು ಒಡೆದು, ಭಿನ್ನಮಾಡಿ, ಅದನ್ನು ಉತ್ಸವವೆಂದು ಕರೆಯುವುದು ಯೋಗ್ಯವಲ್ಲ; ಜೊತೆಗೆ, ಬೇರೆಯವರ ಬಗ್ಗೆ ಈರ್ಷೆಯನ್ನು ಪ್ರಚೋದಿಸುವುದು ಸಾಂಸ್ಕೃತಿಕವಾಗಿ ಅಂಗೀಕಾರಾರ್ಹವಲ್ಲ. ಭಾರತಮಾತೆಯನ್ನು ಒಬ್ಬ ವ್ಯಕ್ತಿಯಲ್ಲಿ ಅಂತರ್ಗತಗೊಳಿಸುವುದಂತೂ ಸರ್ವಥಾ ಶಿಕ್ಷಾರ್ಹವಾದ ಅಪರಾಧವೆಂದು ಗಣನೆಗೆ ಬರಬೇಕಾದುದು. ಸದ್ಯದಲ್ಲಿ ಇದಕ್ಕೆಲ್ಲಾ ಹಿನ್ನೆಲೆಯನ್ನು ಶ್ರೀ ಎಂ. ಎಸ್. ಗೋಲ್ವಾಲ್ಕರ್ ಅವರ ಜನ್ಮಶತಮಾನೋತ್ಸವವು ಕಲ್ಪಿಸಿಕೊಟ್ಟಿದೆ. ಬಸವಣ್ಣ, ವಿವೇಕಾನಂದ ಮತ್ತು ಅಂಬೇಡ್ಕರ್ ಅವರ ಸಾಹಚರ್ಯವನ್ನು ಗೋಲ್ವಾಲ್ಕರ್ ಅವರಿಗೆ ಒದಗಿಸಿ ಅವರದೆಲ್ಲಾ ಒಂದೇ ಪರಂಪರೆಯೆಂಬ ಸುಳ್ಳು ಭಾವನೆಯನ್ನು ಪ್ರಕಟಿಸಲಾಗುತ್ತಿದೆ. ಅದೇಕೆ ಗಾಂಧೀಜಿ ಬಿಟ್ಟುಹೋದರೆಂಬುದಕ್ಕೆ ಸಂಶೋಧನೆಯ ಅಗತ್ಯವಿಲ್ಲ. ಅದಿರಲಿ, ನಿಜಕ್ಕೂ ಬಸವಣ್ಣ ಮುಂತಾದವರು ಶತಮಾನೋತ್ಸವದ ಆಚರಣೆಗೆ ಇಂದು ಕೇಂದ್ರವಾಗಿರುವ ಶ್ರೀ ಗೋಲ್ವಾಲ್ಕರ್ ಅವರ ಚಿಂತನೆಗೆ ಮೆಟ್ಟಿಲುಗಳನ್ನು ಹಾಕಿಕೊಟ್ಟವರೆ ? ವಿವೇಕಾನಂದ ಇತ್ಯಾದಿ ಚಿಂತಕರ ಚಿಂತನಧಾರೆ ಪ್ರಖ್ಯಾತವಾಗಿದೆಯಾದ್ದರಿಂದ ಅದನ್ನು ಉದಾಹರಿಸಲು ಹೋಗದೆ ಗೋಲ್ವಾಲ್ಕರ್ ಅವರ ಕೆಲವು ವಾಕ್ಯಗಳನ್ನು ಮಾತ್ರ ಇಲ್ಲಿ ಉಲ್ಲೇಖಿಸಬಹುದಾಗಿದೆ: ''ಪರಸ್ಪರ ವಿರೋಧೀ ಆಚಾರ ವಿಚಾರಗಳುಳ್ಳ ಸಮಾಜಗಳನ್ನು ಸೇರಿಸಿ ರಾಷ್ಟ್ರವೆನ್ನುವುದು ಬುದ್ಧಿಯ ದಿವಾಳಿತನದ ಲಕ್ಷಣ. ಪ್ರಾಚೀನ ಕಾಲದಲ್ಲೂ ಇದೇ ಸತ್ಯ ಸಿದ್ಧಾಂತವಾಗಿತ್ತು, ಭವಿಷ್ಯದಲ್ಲಿ– ಕಾಲದ ಕೊನೆಯವರೆಗೂ – ಇದೇ ಸತ್ಯವಾಗುಳಿಯುತ್ತದೆ'' (ಧ್ಯೇಯಸ್ಮೃತಿ, ೧೯೬೦, ಪುಟ ೨೮). ''ಒಬ್ಬ ನಾಯಕನ ಮಾತನ್ನು ಕೇಳುತ್ತಾ, ಒಂದೇ ಆಜ್ಞೆಯನ್ನು ಪಾಲನೆ ಮಾಡುತ್ತಾ ಒಂದೇ ದಾರಿಯಲ್ಲಿ ನಮ್ಮ ಶಕ್ತಿ ಸಾಮರ್ಥ್ಯಗಳನ್ನು

ಉಪಯೋಗಿಸುವ ವ್ಯವಸ್ಥೆ ಬೇಕು'' (ಅದೇ ಕೃತಿ, ಪುಟ ೩೪). [ಇದೇ ಮಾತನ್ನು ಅಡಾಲ್ಫ್ ಹಿಟ್ಲರ್ ಎಂಬಾತನೂ ನುಡಿದಿದ್ದ ನೆನಪಿದೆಯೆ ?] ''ನಮ್ಮ ದೇಶಕ್ಕೆ ಸಮಾಜವಾದವು ಒಂದು ಆದರ್ಶವಾಗಬಹುದೇ ? ಅದು ನಮ್ಮ ರಕ್ತದಲ್ಲಿ ಮತ್ತು ಪರಂಪರೆಯಲ್ಲಿ ಇಲ್ಲ. ಸಹಸ್ರಾರು ವರ್ಷಗಳ ಚರಿತ್ರೆಯುಳ್ಳ ನಮ್ಮ ಆದರ್ಶ ಮತ್ತು ಪರಂಪರೆಗಳಲ್ಲಿ ಅದರ ಹೆಸರಿಲ್ಲ. ಅದರಿಂದ ನಮ್ಮ ದೇಶದ ಕೋಟಿಗಟ್ಟಲೆ ಜನರಿಗೆ ಅದೊಂದು ಹೊರಗಿನ ತತ್ವ. ಅವರ ಹೃದಯಕ್ಕೆ ಈ ತತ್ವವು ಸಂತಸವನ್ನೀಯಲಾರದು ಮತ್ತು ಅವರಲ್ಲಿ ತ್ಯಾಗ ಮತ್ತು ಸಂಪನ್ನತೆಯ ಭಾವವನ್ನು ಮೂಡಿಸಲಾರದು. ಈ ಕಾರಣದಿಂದ ನಮ್ಮ ರಾಷ್ಟ್ರೀಯ ಜೀವನದ ಆದರ್ಶವಾಗಲು ಅದರಲ್ಲಿ ಎಳ್ಳಷ್ಟಾದರೂ ಸತ್ವವಿಲ್ಲ'' (*ನಾಟ್ ಸೋಶಿಯಲಿಸಂ ಬಟ್ ಹಿಂದೂ ರಾಷ್ಟ್ರ* ಎಂಬ ಇಂಗ್ಲಿಷ್ ಕೃತಿ, ಪುಟ ೧೯).

''ರುಚೀನಾಂ ವೈಚಿತ್ರ್ಯಾತ್ ಋಜುಕುಟಿಲ ನಾನಾಪಥ ಜುಷಾಂ ॥
ನೃಣಾಮೇಕೋ ಗಮ್ಯಸ್ತ್ವಮಸಿ ಪಯಸಾಮರ್ಣವ ಇವ ॥

(ಅವರವರ ರುಚಿಗೆ ತಕ್ಕಂತೆ ವಿಭಿನ್ನ ಹಾದಿಗಳನ್ನನುಸರಿಸುವ ಜನರಿಗೆ ನೀನೇ ಗುರಿ, ಎಲ್ಲ ನದಿಗಳಿಗೂ ಸಮುದ್ರವೇ ಅಂತಿಮಸ್ಥಾನವಿದ್ದಂತೆ) ಎಂಬ ಶಿವಾನುಭವ ಸ್ತೋತ್ರದ ಸಾಲುಗಳನ್ನು ಧ್ಯೇಯವಾಕ್ಯವನ್ನಾಗಿ ಇರಿಸಿಕೊಂಡಿದ್ದ ವಿವೇಕಾನಂದರು ಗೋಲ್ವಾಲ್ಕರ್ ಅವರಿಗೆ ಪರಂಪರೆಯ ಸ್ಥಾನದಲ್ಲಿ ಇದ್ದಾರೆಯೇ ?

ಒಟ್ಟಿನಲ್ಲಿ ಯಾವ ಸಮಾಜೋತ್ಸವವೂ ಸಮಾಜಘಾತುಕವಾಗಬಾರದು. ಈಚಿನ ಒಂದು ಅಂತರರಾಷ್ಟ್ರೀಯ ಯೋಗ ಸಮ್ಮೇಳನದಲ್ಲಿ ಒಬ್ಬ ಪ್ರಬಂಧಕಾರರು ಹೇಳಿದ ಮಾತಿದು: ''ಸಂಸ್ಕೃತಿಯ ಸಹನೆಯನ್ನು ನಾವು ಬೆಳೆಸಿಕೊಂಡರೆ ಆಗ ಸಹನೆಯ ಸಂಸ್ಕೃತಿ ನಮ್ಮದಾಗುತ್ತದೆ.'' ಸಮಾಜೋತ್ಸವ ಬೇಕಾದ್ದು ಅದರ ಸಾಧನೆಗಾಗಿ. ಅದು ವಿವೇಕಾನಂದರ ಮಾರ್ಗ. ಮಾನ್ಯ ಶ್ರೀ ಗೋಲ್ವಾಲ್ಕರ್ ಅವರ ಮಾರ್ಗವು ಅದಕ್ಕೆ ವಿರುದ್ಧವಾದದ್ದು.

*   *   *

ವಿಶ್ವ ಪರಂಪರೆಗೆ ಸೇರಿದ ಹಂಪಿಯು ಭಯೋತ್ಪಾದಕನೊಬ್ಬನಿಗೆ ಆಶ್ರಯ ನೀಡುವಂತಾಗಿದ್ದು ನಮ್ಮ ಸಮಕಾಲೀನ ಇತಿಹಾಸದ ಕುಚೋದ್ಯಗಳಲ್ಲಿ ಒಂದು. ಗಾಂಜಾ, ಗುಡಿಗುಡಿ, ಮಾದಕ ದ್ರವ್ಯ ಇತ್ಯಾದಿಗಳ ಸೇವನೆಗೆ ಬಿಳಿಯರು ಇಲ್ಲಿ ಬೀಡುಬಿಡುತ್ತಿದ್ದುದು ತಿಳಿದಿತ್ತು; ಈಗ ಮಾರಕಾಸ್ತ್ರಗಳ ಶೇಖರಣೆಗೂ ಅದು ತಾಣವಾಗಿದ್ದು ಒಂದು ದುರಂತ, ಆತಂಕದ ವಿಷಯ. ಎಚ್ಚರವು ಯಾವ ಮಟ್ಟದ್ದಾಗಿರಬೇಕೆಂಬುದಕ್ಕೆ ಇದು ಇನ್ನೊಂದು ಸೂಚನೆಯಾಗಿದೆ.

*   *   *

ಕರ್ನಾಟಕದ ರಾಜ್ಯಪಾಲರು ನಮ್ಮ ರಾಜ್ಯದ ವಿಶ್ವವಿದ್ಯಾಲಯಗಳ ಆಡಳಿತ ಮತ್ತು ಶೈಕ್ಷಣಿಕ ನಿರ್ಧಾರಗಳಲ್ಲಿ ಅನಗತ್ಯವಾಗಿ ಮೂಗು ತೂರಿಸುವ ಕೆಟ್ಟ ಸಂಪ್ರದಾಯವನ್ನು ಬೆಳೆಸಿಕೊಳ್ಳುತ್ತಿದ್ದಾರೆ. ಅವರಿನ್ನೂ ಭಾರತೀಯ ಜನತಾ ಪಕ್ಷದ ರಾಜ್ಯಸಭಾ ಸದಸ್ಯ ಎನ್ನುವಂತೆಯೇ ವರ್ತಿಸುವುದು ಶೋಭೆ ತರುವ ಸಂಗತಿಯಲ್ಲ. ನಮ್ಮ ವಿಶ್ವವಿದ್ಯಾಲಯಗಳು ಯಾರು ಯಾರಿಗೆ ಡಾಕ್ಟರೇಟ್ ಪದವಿ ನೀಡಿ ಗೌರವಿಸಬೇಕೆಂಬುದನ್ನು ತೀರ್ಮಾನಿಸುವುದು ರಾಜ್ಯಪಾಲರ ಅಧಿಕಾರದ ಕಕ್ಷೆಗೆ ಸೇರಿಲ್ಲ. ಆದರೆ ಚತುರ್ವೇದಿಯವರು ಆ ಅಧಿಕಾರವನ್ನು ತಮಗೆ ಆರೋಪಿಸಿಕೊಂಡಿದ್ದಾರೆ. ಅವರ ಕಾರ್ಯದರ್ಶಿಯಾದ ಶ್ರೀಮತಿ ತ್ರಿವೇದಿಯವರಿಗೆ ಸಹ ರಾಜ್ಯಪಾಲರು ಮೈಸೂರು ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ ಪದವಿಯನ್ನು ದಯಪಾಲಿಸಿ ''ವೇದಿ''ಗಳ ವೇದಿಕೆಯನ್ನು ರಚಿಸುವತ್ತ ಧಾವಿಸುತ್ತಿದ್ದಾರೆಂಬ ಶಂಕೆಯನ್ನು ಮೂಡಿಸಿದ್ದಾರೆ. ಚತುರ್ವೇದಿಯವರ ಇಂತಹ ವೈಯಕ್ತಿಕ ಆಸಕ್ತಿಗಳು ಆರೋಗ್ಯಕರವಲ್ಲ.

*   *   *

''ರಾಷ್ಟ್ರೀಯ ನಾಟಕರಂಗ'' ಎಂಬ ಮಾನ್ಯತೆಗೆ ಕನ್ನಡ ನಾಟಕರಂಗವು ಬಾಧ್ಯವಾಗಬೇಕೆಂಬ ಒತ್ತಾಯವು ಶ್ರೀ ಪ್ರಸನ್ನ ಅವರ ನೇತೃತ್ವದಲ್ಲಿ ಈ ತಿಂಗಳಲ್ಲಿ ಪ್ರಕಟವಾಯಿತು. ಹಿಂದಿ ಅಧ್ವರ್ಯುಗಳು ತಮ್ಮ ಹೇರಿಕೆಯ ಸಂಸ್ಕೃತಿಯನ್ನು ಅನುಸರಿಸುವುದನ್ನು ವಿರೋಧಿಸುವುದು ಸಹಜವಾದ್ದು. ಈ ಸಂಬಂಧದಲ್ಲಿ ಹೊಸ ರಾಷ್ಟ್ರೀಯ ನಾಟಕ ಶಾಲೆಯೊಂದನ್ನು ಆರಂಭಿಸುವ ಬದಲು ಈಗಾಗಲೇ ಖ್ಯಾತಿ ಗಳಿಸಿರುವ ಮೈಸೂರಿನ ರಂಗಾಯಣವನ್ನೋ ಹೆಗ್ಗೋಡಿನ ನೀನಾಸಂ ಅನ್ನೋ ರಾಷ್ಟ್ರೀಯ ನಾಟಕಶಾಲೆಯನ್ನಾಗಿ ಬೆಳೆಸುವುದು ಸೂಕ್ತವೆನಿಸುವುದಿಲ್ಲವೇ ?

[signature]

---

*ಪುಟ ೭ರಿಂದ (ಪತ್ರಗಳು)*

ಮಾನಸಿಕವಾಗಿ ಭಾಷೆಯನ್ನು ರೂಢಿಸಿಕೊಳ್ಳುವ ಸ್ಥಿತಿಯನ್ನು ಪಡೆದುಕೊಂಡಿರುತ್ತದೆ. ಇದಕ್ಕಿಂತ ಹೆಚ್ಚಾಗಿ ನಮ್ಮ ದೇಶದ ಬಹುತೇಕ ಸಮುದಾಯಗಳು ದ್ವಿಭಾಷಾ ಸಮುದಾಯಗಳು ಆಗಿರುವವು. ಈ ಸಮುದಾಯದ ಮಕ್ಕಳು ತಮ್ಮ ಎಳೆ ವಯಸ್ಸಿನಲ್ಲಿ ಸ್ಫುಟವಾಗಿ ಆ ಎರಡು ಭಾಷೆಗಳನ್ನು ಮಾತನಾಡುವ ಸಾಮರ್ಥ್ಯವನ್ನು ಪಡೆದುಕೊಳ್ಳುವರು.

ಇವತ್ತಿನ ಜಗತ್ತಿನಲ್ಲಿ ತಂತ್ರಜ್ಞಾನ, ವಿಜ್ಞಾನ, ವೈದ್ಯಕೀಯ ಮುಂತಾದ ಆಧುನಿಕ ಜ್ಞಾನಶಾಖೆಗಳ ಆವಿಷ್ಕಾರ, ಅನುಭವ, ಜ್ಞಾನ ತಕ್ಷಣಕ್ಕೆ ನಮಗೆ ಲಭ್ಯವಾಗುವುದು ಇಂಗ್ಲಿಷಿನ ಮುಖಾಂತರ. ಈ ಎಲ್ಲಾ ಜ್ಞಾನ ಸಾಧ್ಯತೆಗಳನ್ನು ನಾವು ನಮ್ಮ ಭಾಷೆಯಿಂದ ಪಡೆದುಕೊಳ್ಳುವುದಕ್ಕೆ ಆ ಸಾಮರ್ಥ್ಯವನ್ನು ನಾವು ನಮ್ಮ ಭಾಷೆಯೊಂದಿಗೆ ಕೂಡಿಸಿಕೊಂಡಿಲ್ಲ. ನಿಜ, ಯಾವುದೇ ಭಾಷೆ ಆಧುನಿಕ ಜಗತ್ತಿನ ಸವಾಲುಗಳಿಗೆ ಪ್ರತಿಸ್ಪಂದಿಸಲು ಮುಖ್ಯವಾಗಿ ಎಲ್ಲಾ ಕ್ರಿಯಾತ್ಮಕ ರಂಗಗಳಲ್ಲಿ ಬಳಕೆಯಾಗಬೇಕು, ಶಿಕ್ಷಣವನ್ನೊಳಗೊಂಡು. ಹಾಗಾಗಿ, ಕಾಲ-ದೇಶಕ್ಕೆ ತಕ್ಕ ಹಾಗೆ ನಮ್ಮ ಶಿಕ್ಷಣ ಕ್ರಮ ಮತ್ತು ಭಾಷಾ ನೀತಿಗಳು ರೂಪಗೊಳ್ಳಬೇಕು. ಇಲ್ಲಿ ಇಂಗ್ಲಿಷ್ ಕೇವಲ ಒಂದು ಭಾಷೆಯಾಗಿ ಬೋಧಿಸಲಾಗುವುದು. ಇದರ ಮುಖ್ಯ ಉದ್ದೇಶ ಭಾಷಾ ಕೌಶಲ್ಯಗಳನ್ನು ರೂಢಿಸಿಕೊಳ್ಳುವಲ್ಲಿ ಸಫಲವಾಗಬೇಕು ಎನ್ನುವುದು. ಶಿಕ್ಷಣ ಮಾಧ್ಯಮವಾಗಿ ಇಂಗ್ಲಿಷ್ ಭಾಷೆ ಮತ್ತು ಕೇವಲ ಭಾಷಾ ಕಲಿಕೆಯಾಗಿ ಇಂಗ್ಲಿಷ್, ಇದರ ನಡುವೆ ಶೈಕ್ಷಣಿಕ ಮತ್ತು ತಾತ್ವಿಕ ವ್ಯತ್ಯಾಸಗಳಿವೆ. ಇದನ್ನು ಮರೆಮಾಚಿ ಜನಸಾಮಾನ್ಯರನ್ನು ದ್ವಂದ್ವಕ್ಕೀಡುಮಾಡಬಾರದು.

ಭಾರತದಂತಹ ಬಹುಭಾಷಿಕ ದೇಶಗಳಲ್ಲಿ ಭಾಷಾ ನೀತಿಯನ್ನು ರೂಪಿಸುವ ಸಂದರ್ಭದಲ್ಲಿ ನಾವು ಪರಿಗಣಿಸಬೇಕಾದ ಅಂಶಗಳು ವೈಜ್ಞಾನಿಕ ಮತ್ತು ವೈಚಾರಿಕ ನಿಲುವುಗಳಿಂದ ಕೂಡಿರಬೇಕು. ಇಲ್ಲದೆ ಹೋದರೆ ಕೆಲವೇ ಜನ ಅಥವಾ ಜನಗಳ ಗುಂಪು ತಮ್ಮದೇ ತಾತ್ವಿಕತೆಯಿಂದ ಜನಪರವಾದ ತೀರ್ಮಾನಗಳನ್ನು ಜನವಿರೋಧಿ ನಿಲುವುಗಳೆಂದು ಬಿಂಬಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ದೇಶೀ ಭಾಷೆಗಳೊಂದಿಗೆ ಇಂಗ್ಲಿಷನ್ನು ಕಲಿಸಬೇಕು ಎನ್ನುವುದು ಸಂವಿಧಾನಾತ್ಮಕವಾದ ಶಾಸನವಾದ್ದರಿಂದ ಇದನ್ನು ಒಂದನೇ ತರಗತಿಯಿಂದ ಕಲಿಸುವುದರಲ್ಲಿ ಏನೂ ಕಷ್ಟ ಇರಲಾರದು.

ಶಿವಮೊಗ್ಗ — **ಮೇಟಿ ಮಲ್ಲಿಕಾರ್ಜುನ**

## ಬುಶ್ ಎಂಬ ಭೂತಕ್ಕೆ ಸದ್ದಾಮನ ಬಲಿ

ಜಗತ್ತಿನಲ್ಲಿ ತನ್ನಷ್ಟು ಶಕ್ತಿಶಾಲಿ ಇನ್ನೊಬ್ಬನಿಲ್ಲ, ತನ್ನ ರಾಷ್ಟ್ರದಷ್ಟು ಬಲಿಷ್ಠ ಇನ್ನೊಂದಿಲ್ಲವೆಂದು ಅಹಂಕಾರದಿಂದ ಕೊಬ್ಬಿ ಮೆರೆಯುತ್ತಿರುವ ಕ್ರೂರಿ, ನಿರ್ದಯಿ, ಸ್ವಾರ್ಥಿ ಮತ್ತು ಮಹಾಪಾಪಿ ಬುಶ್ ಭೂತದ ಬಹುದಿನಗಳ ಬಯಕೆ ಸದ್ದಾಂ ಹುಸೇನ್‌ನ ಮರಣದಂಡನೆಯಿಂದ ನೆರವೇರಿದಂತಾಯಿತು.

ಇರಾಕಿನ ಸಾವಿರಾರು ಮಂದಿ ಕುರ್ದಿಶ್ ಮತ್ತು ಷಿಯಾ ಜನರ ಹತ್ಯೆಯ ಆರೋಪವನ್ನು ಸದ್ದಾಮನ ಮೇಲೆ ಹೊರಿಸಿ, ಅಮೆರಿಕಾ ಪೋಷಿತ ವಿಚಾರಣೆ ಎಂಬ ನಾಟಕವಾಡಿಸಿ ಬುಶ್ ಆತನನ್ನು ಗಲ್ಲಿಗೇರಿಸಿದ. ಸದ್ದಾಮ್ ಹುಸೇನ್ ದುಷ್ಟ, ಅತ್ಯಂತ ಕ್ರೂರಿ, ಸರ್ವಾಧಿಕಾರಿ ಎಂಬುದರಲ್ಲಿ ಎರಡು ಮಾತಿಲ್ಲ. ತನ್ನ ವಿರೋಧಿಗಳನ್ನು ಬರ್ಬರವಾಗಿ ಕೊಂದ ಪಾಪವೂ ಅವನ ತಲೆಯ ಮೇಲಿತ್ತು, ನಿಜ. ಆದರೆ ಪರಮಾಣು ತಪಾಸಣೆಯ ಹಿನ್ನೆಲೆಯಲ್ಲಿ ಇರಾಕಿನ ಮೇಲೆ ಆಕ್ರಮಣ ನಡೆಸಿ ಲಕ್ಷೋಪಲಕ್ಷ ನಿರಪರಾಧಿ ಜನರ, ಹೆಂಗಸರ, ಮಕ್ಕಳ ಹತ್ಯೆಗೆ ಕಾರಣನಾದ ಬುಶ್ ಸದ್ದಾಮನಿಗಿಂತ ಕಡಿಮೆ ಪಾಪಿಯೇ? ಕಡಿಮೆ ಅಪರಾಧಿಯೇ? ಅವನ ವಿಚಾರಣೆ ಯಾಕಿಲ್ಲ? ಇರಾಕಿನಲ್ಲಿ ಇನ್ನೂ ನಿಲ್ಲದ, ನಿಲ್ಲುವ ಆಶೆಯೂ ಇಲ್ಲದ ನರಸಂಹಾರಕ್ಕೆ ಯಾರು ಹೊಣೆ? ಸದ್ದಾಮನಿಗಿಂತಲೂ ಹೆಚ್ಚು ಜನರನ್ನು ಕೊಲ್ಲಿಸಿದ ಆತನ ಬಗ್ಗೆ ಯಾರೂ, ಯಾವ ದೇಶವೂ ಯಾಕೆ ದನಿ ಎತ್ತುವುದಿಲ್ಲ? ಅವನ ಭಯವೇ ?

ಬುಶ್‌ನ ಕ್ರೂರ ದೃಷ್ಟಿಗೆ ಬಲಿಯಾಗಿ ಇರಾಕ್ ಇಂದು ಪುಡಿ ಪುಡಿಯಾಯಿತು. ಇನ್ನು ಇರಾನ್, ಉತ್ತರ ಕೊರಿಯಾ. ಆಮೇಲೆ ಕೈ ಮುಗಿದದ್ದು ಓರೆಯಾದರೆ ಒಂದು ದಿನ ಭಾರತವೂ ಅವನ ರಕ್ತದಾಹಕ್ಕೆ ಬಲಿಯಾದರೆ ಆಶ್ಚರ್ಯವಿಲ್ಲ. ಹೇಗೂ ಈಗಾಗಲೇ ನಾವು ಅಣು ಬಳಕೆಯ ಒಪ್ಪಂದಕ್ಕೆ ಮುದ್ರೆ ಒತ್ತಿದ್ದೇವೆ. ನೀವೇ ಶರಣು ಅಂದಿದ್ದೇವೆ. ನಮ್ಮ ನೆರೆ ರಾಷ್ಟ್ರವಾದ ಪಾಕಿಸ್ತಾನಕ್ಕೆ ಅದು ಕೇಳಿದಷ್ಟು ಯುದ್ಧ ವಿಮಾನಗಳನ್ನು, ಡಾಲರುಗಳನ್ನು ಕೊಡುತ್ತಾ ಬರುತ್ತಿರುವ ಅಮೆರಿಕಾದ ಉದ್ದೇಶ ಏನೆಂಬುದನ್ನು ನಮ್ಮ ರಾಷ್ಟ್ರ ನಾಯಕರು ಇನ್ನಾದರೂ ಅರ್ಥಮಾಡಿಕೊಳ್ಳುವುದು ಒಳ್ಳೆಯದು. ಇಲ್ಲಿ ಖಂಡಿತ ಗಂಡಾಂತರ ಕಾದು ಕುಳಿತಿದೆ.

ಕ್ಯೂಬಾ ಅಮೆರಿಕಾಕ್ಕೆ ಹತ್ತಿರದಲ್ಲಿರುವ ಒಂದು ಪುಟ್ಟ ರಾಷ್ಟ್ರ. ಅದನ್ನು ಸದೆಬಡಿಯಲು ಅಮೆರಿಕಾ ಎಲ್ಲಿಲ್ಲದ ಸಾಹಸ ಮಾಡಿತು. ಈಗ ಇರಾನಿನ ಮೇಲೆ ಅಮೆರಿಕಾದ ಕಣ್ಣು ಬಿದ್ದಿದೆ. ಆಮೇಲೆ ಇರಾನ್, ಉತ್ತರ ಕೊರಿಯಾದಂತಹ ಹತ್ತು ರಾಷ್ಟ್ರಗಳು ಬುಶ್‌ನ ಮುಂದೆ ತಲೆ ಎತ್ತಿ ನಿಂತರೆ ಅವನ ಕೊಬ್ಬು ಕರಗದೆ ಉಳಿಯದು. ನಾವು ? 'ನಮ್ಮದು ಬಲಿಷ್ಠ ರಾಷ್ಟ್ರ. ನಾವು ಯಾರಿಗೂ ಹೆದರಬೇಕಾಗಿಲ್ಲ'ವೆಂದು ಹೇಳುತ್ತಾ ಹೇಳುತ್ತಾ ನಮ್ಮ ಪ್ರಧಾನ ಮಂತ್ರಿಗಳು ಬುಶ್‌ನ ಮುಂದೆ ತಲೆ ತಗ್ಗಿಸಿ, ಹಲ್ಲು ಕಿಸಿದು ನಿಂತಿರುವುದನ್ನು ನೆನೆಯುವಾಗ 'ಅಯ್ಯೋ' ಎನಿಸುತ್ತದೆ. ಇಂತಹ ಹೀನತೆ ಯಾರಿಗೂ, ಯಾವ ದೇಶಕ್ಕೂ ಬರಬಾರದು.

ಬೆಂಗಳೂರು — ಎಂ. ವಿ. ಭಟ್

# ಆಲೂರರ ಕರ್ನಾಟಕತ್ವ ಮೀಮಾಂಸೆ

ಡಾ|| ಟಿ. ಆರ್. ಚಂದ್ರಶೇಖರ

ಆಲೂರರ ಕರ್ನಾಟಕತ್ವ ವಿಚಾರ ಪ್ರಣಾಳಿಕೆಯನ್ನು ಅನನ್ಯತೆಯ ರಾಜಕಾರಣದ ಚೌಕಟ್ಟಿನಲ್ಲಿಯೂ ಅಧ್ಯಯನ ಮಾಡಬಹುದು. ಅವರ ವಿಚಾರ ಪ್ರಣಾಳಿಕೆಯಲ್ಲಿ ಕರ್ನಾಟಕಕ್ಕೆ ಭಾರತೀಯತೆಯ ಒಂದು ನೆಲೆಯೂ ಇದೆ ಮತ್ತು ತನ್ನ ವಿಶಿಷ್ಟತೆಯ ನೆಲೆಯೂ ಇದೆ. ಅದೇ ರೀತಿ ಭಾರತೀಯತೆಗೆ ಜಾಗತಿಕವಾದ ಒಂದು ನೆಲೆಯಿದೆ ಹಾಗೂ ಅದಕ್ಕೆ ಕರ್ನಾಟಕತ್ವದ ಒಂದು ನೆಲೆಯಿದೆ. ಆಲೂರರ ರಾಷ್ಟ್ರೀಯತೆ ಸಿದ್ಧಾಂತದಲ್ಲಿ ಕರ್ನಾಟಕತ್ವವಿಲ್ಲದೆ ಭಾರತೀಯತೆಗೆ ಅಸ್ತಿತ್ವವಿಲ್ಲ. ಆಲೂರರ ಕರ್ನಾಟಕತ್ವವು ಭಾರತೀಯತೆಯು ತಿಂದು ತೇಗಿ ಅರಗಿಸಿಕೊಂಡುಬಿಡುವ ಸ್ವರೂಪದ್ದಾಗಿರಲಿಲ್ಲ. ಕರ್ನಾಟಕತ್ವದಿಂದ ಭಾರತೀಯತೆಯು ಭಾರತೀಯತೆಯಿಂದ ಕರ್ನಾಟಕತ್ವವು ಅಸ್ತಿತ್ವವನ್ನು ಪಡೆದುಕೊಂಡ ಸಂಗತಿಗಳನ್ನಾಗಿ ಅವರು ಅವುಗಳನ್ನು ಪರಿಭಾವಿಸಿಕೊಂಡಿದ್ದಾರೆ. ಇದನ್ನು ಏಕತೆ-ಅನೇಕತೆಯೆಂಬ ಕ್ಲೀಷೆಯ ಚೌಕಟ್ಟಿನಲ್ಲಿ ಪರಿಶೀಲಿಸಲು ಸಾಧ್ಯವಿಲ್ಲ. ಭಾರತೀಯ ಸಂಸ್ಕೃತಿಯ ಏಕತೆ-ಅನೇಕತೆಗಳ ನಡುವಣ ಸಂಬಂಧವನ್ನು ಅವರು ಮರು ಪರಿಶೋಧಕ್ಕೆ ಒಳಪಡಿಸಿದರು. ಇವೆರಡರ ನಡುವಣ ಸಂಬಂಧವನ್ನು ಅವರು ಚಲನಶೀಲವಾದ ಹಾಗೂ ಸಂಕೀರ್ಣವಾದ ನೆಲೆಯಲ್ಲಿ ಪರಿಭಾವಿಸಿಕೊಂಡಿದ್ದರು. ಇವೆರಡೂ ಪರಸ್ಪರ ಪೂರಕವಾದ ಸಂಗತಿಗಳಾಗಿವೆಯೆ ವಿನಾ ಪರಸ್ಪರ ಪರ್ಯಾಯವಾದ ಸಂಗತಿಗಳಲ್ಲ.

**ಪ್ರಸ್ತಾವನೆ**

ಕರ್ನಾಟಕವು ತನ್ನ ಉದಯದ ೫೦ನೆಯ ವರ್ಷವನ್ನು ಆಚರಿಸಿಕೊಳ್ಳುತ್ತಿರುವ ಸಂದರ್ಭದಲ್ಲಿ ಕರ್ನಾಟಕತ್ವವೆಂಬ ಕುತೂಹಲಕಾರಿಯೂ ರಾಜಕೀಯವಾಗಿ ಆಸ್ಫೋಟಕಾರಿಯೂ ಮತ್ತು ಸಾಮಾಜಿಕವಾಗಿ ವಿಸ್ತೃತ ವ್ಯಾಪ್ತಿ ಹೊಂದಿದ್ದ ಮೀಮಾಂಸೆಯೊಂದನ್ನು ರೂಪಿಸಲು ಪ್ರಯತ್ನಿಸಿದ ಹಾಗೂ ಕರ್ನಾಟಕ ಏಕೀಕರಣ ಹೋರಾಟವನ್ನು ಹುಟ್ಟುಹಾಕಿ ಅದಕ್ಕಾಗಿ ಅಹರ್ನಿಶಿ ದುಡಿದ ಆಲೂರು ವೆಂಕಟರಾಯರನ್ನು (೧೮೮೦-೧೯೬೪) ಹಾಗೂ ಅವರ ವಿಚಾರಗಳನ್ನು - ಹೋರಾಟವನ್ನು ಇಂದು ನೆನಪಿಸಿಕೊಳ್ಳುವುದು ನಮ್ಮ ಕರ್ತವ್ಯವಾಗಿದೆ. ಅವರು ರೂಪಿಸಿದ್ದ ಕರ್ನಾಟಕತ್ವ ಮೀಮಾಂಸೆಯ ವಿವಿಧ ಆಯಾಮಗಳನ್ನು ಪ್ರಸ್ತುತ ಪ್ರಬಂಧದಲ್ಲಿ ಚರ್ಚಿಸಲು ಪ್ರಯತ್ನಿಸಲಾಗಿದೆ.

೧೯೫೭ರಲ್ಲಿ ಪ್ರಕಟವಾದ ೨೩೨ ಪುಟಗಳ ಅವರ 'ಕರ್ನಾಟಕತ್ವದ ವಿಕಾಸ' ಕೃತಿಯು ರಾಜಕೀಯ - ಸಾಮಾಜಿಕ ಸಂಗತಿಗಳನ್ನು ಕುರಿತ ಸೈದ್ಧಾಂತಿಕ ಚರ್ಚೆಯನ್ನು ಒಳಗೊಂಡಿದೆ. ಅವರು ತಮ್ಮ ಕೃತಿಯಲ್ಲಿ ಮತ್ತೆ ಮತ್ತೆ ಸ್ಪಷ್ಟಪಡಿಸಿರುವಂತೆ ಅವರ ಕರ್ನಾಟಕತ್ವವು ಪ್ರಾಂತೀಯತೆ - ಪ್ರಾದೇಶಿಕತೆಗಳೆಂಬ ಸಂಕುಚಿತ ಸಂಗತಿಗಳಿಗೆ ಸಂಬಂಧಿಸಿದುದಲ್ಲ. ಅದು ಕೇವಲ ಭಾಷೆ-ಸಾಹಿತ್ಯಕ್ಕೆ ಸಂಬಂಧಿಸಿದ ಸಂವಾದವೂ ಅಲ್ಲ. ಅದೊಂದು ರಾಜಕೀಯ-ಸಾಮಾಜಿಕ ಸಿದ್ಧಾಂತ. ಆಲೂರರ ಕರ್ನಾಟಕತ್ವದ ವಿವಿಧ ಆಯಾಮಗಳನ್ನು ಕುರಿತಂತೆ ನಮ್ಮ ವಿದ್ವಾಂಸರು ಹೆಚ್ಚು ಚರ್ಚೆ ಮಾಡಿದಂತೆ ಕಾಣಲಿಲ್ಲ. ಅವರ ವಿಚಾರಗಳನ್ನು ಕುರಿತಂತೆ ಅನುಸಂಧಾನ ಹೆಚ್ಚು ನಡೆಯಲಿಲ್ಲ. ಡಾ|| ಡಿ. ಆರ್. ನಾಗರಾಜ್ (೧೯೯೬) ಮತ್ತು ಡಾ|| ಕೆ. ರಾಘವೇಂದ್ರ ರಾವ್ (೨೦೦೦) ಅವರು ಮಾತ್ರ ಆಲೂರರ ಕರ್ನಾಟಕತ್ವದ ಸೈದ್ಧಾಂತಿಕ ನೆಲೆಗಳನ್ನು ಹಿಡಿದಿಡಲು ಪ್ರಯತ್ನಿಸಿದರು. ಉಳಿದಂತೆ ಅದರ ಬಗ್ಗೆ ಚರ್ಚೆ ನಡೆದಂತೆ ಕಾಣಲಿಲ್ಲ. ಸಮಾಜವಿಜ್ಞಾನಿಗಳಿಗೆ ಅವರ ಕೃತಿಯು ವಿಚಾರಗಳ ನಿಕ್ಷೇಪದಂತಿದೆ. ದುರದೃಷ್ಟದ ಸಂಗತಿಯೆಂದರೆ ಕರ್ನಾಟಕದಲ್ಲಿ ಸಮಾಜ ವಿಜ್ಞಾನಿಗಳು ಅವರ ಕೃತಿಯನ್ನು ಕುರಿತು ಅಧ್ಯಯನ ನಡೆಸಲಿಲ್ಲ (ಡಾ|| ಕೆ. ರಾಘವೇಂದ್ರ ರಾವ್ ಮಾತ್ರ ಇದಕ್ಕೆ ಅಪವಾದ).

**ಅಬ್ಬರ-ಆರ್ಭಟ**

ಸುವರ್ಣ ವರ್ಷಾಚರಣೆಯ ಅಬ್ಬರ-ಆರ್ಭಟದಲ್ಲಿ ಆಲೂರರನ್ನು ನೆನಪಿಸಿಕೊಳ್ಳುವ ಪ್ರಯತ್ನವನ್ನು ಕರ್ನಾಟಕ ಮಾಡದಿರುವುದು ತುಂಬಾ ದುರದೃಷ್ಟಕರ. ಕರ್ನಾಟಕ ಏಕೀಕರಣವನ್ನು ತಪಸ್ಸಿನಂತೆ ಧ್ಯಾನಿಸಿದವರು ಅವರು. ಅತ್ಯಂತ ಸುಲಭವಾಗಿ ಪಡೆದುಕೊಳ್ಳಬಹುದಾಗಿದ್ದ ರಾಷ್ಟ್ರೀಯ ವೇದಿಕೆಯನ್ನು, ಅಲ್ಲಿನ ನಾಯಕತ್ವವನ್ನು, ಅವರು ಕರ್ನಾಟಕತ್ವಕ್ಕಾಗಿ ಅಂದು ಬಿಟ್ಟುಕೊಟ್ಟರು. ''ಕರ್ನಾಟಕ ಚಳುವಳಿಯೆಂದರೂ ನಾನೇ, ನಾನು ಎಂದರೇನೆ ಕರ್ನಾಟಕ ಚಳುವಳಿ'' ಎಂಬ ಮಾತುಗಳನ್ನು ಅವರು ''ಕರ್ನಾಟಕತ್ವದ ವಿಕಾಸ''ದ ಮುನ್ನುಡಿಯಲ್ಲಿ ಬರೆದಿದ್ದಾರೆ. ಇನ್ನೊಂದು ಕಡೆ ''ಕರ್ನಾಟಕವೆಂಬುದು ನನ್ನ ವಿಶಿಷ್ಟ ವಿಚಾರ. ಆ ಶಬ್ದವೂ ಕೂಡ ನನ್ನ ಟಂಕಸಾಲೆಯಲ್ಲಿ ಹುಟ್ಟಿದ್ದು'' (ಪು. ೯) ಎಂಬ ಮಾತುಗಳನ್ನು ಅವರು ಬರೆದಿದ್ದಾರೆ. ಅವರ ಸ್ವಾಭಿಮಾನ ಮತ್ತು ಆತ್ಮಸ್ಥೈರ್ಯವು ಅನುಕರಣೀಯವಾದುದಾಗಿದೆ. ಕರ್ನಾಟಕ ಏಕೀಕರಣಕ್ಕೆ ೫೦ ವರ್ಷ ತುಂಬುತ್ತಿರುವ ಸಂದರ್ಭದಲ್ಲಿ ಅದರ ಆದ್ಯಪ್ರವರ್ತಕರಾದ ಆಲೂರು ವೆಂಕಟರಾಯರನ್ನು ನೆನೆಯುವುದು ಅತ್ಯಂತ ಪ್ರಸ್ತುತವೆಂದು ನಾನು ಭಾವಿಸಿದ್ದೇನೆ. (ಅವರ 'ಕರ್ನಾಟಕತ್ವದ ವಿಕಾಸ' ಕೃತಿಗೂ ೨೦೦೭ಕ್ಕೆ ೫೦ ವರ್ಷ ತುಂಬುತ್ತದೆ). ವಾಸ್ತವವಾಗಿ ಕರ್ನಾಟಕ ಏಕೀಕರಣಕ್ಕೆ ಒಂದು ಶತಮಾನಕ್ಕೂ ಮಿಕ್ಕಿದ ಇತಿಹಾಸವಿದೆ. ಆದರೆ ಈ ಇತಿಹಾಸದ ಬೇರುಗಳಿರುವುದು ಉತ್ತರ ಕರ್ನಾಟಕದಲ್ಲಿ ಮತ್ತು ಮುಖ್ಯವಾಗಿ ಧಾರವಾಡದಲ್ಲಿ. ಇದಕ್ಕೆ ಸಂಬಂಧಿಸಿದ ಪ್ರಯತ್ನಗಳು ಹತ್ತೊಂಬತ್ತನೆಯ ಶತಮಾನದ ಕೊನೆಯ ದಶಕದಲ್ಲೇ ಆರಂಭವಾಗಿರುವುದನ್ನು ಗುರುತಿಸಬಹುದು. ಅದು ಮುಖ್ಯವಾಗಿ ಹಿಂದುಳಿದವರ, ಬಡವರ, ವಂಚಿತರ ಒಂದು ಪ್ರಯತ್ನವಾಗಿತ್ತು.

**ಕರ್ನಾಟಕತ್ವವು ಭಾಷಾ ರಾಜಕಾರಣವಲ್ಲ**

ಕರ್ನಾಟಕತ್ವವೆಂಬುದು ಅವರು ರೂಪಿಸಿದ ವಿಚಾರ ಪ್ರಣಾಳಿಕೆಯಾಗಿದೆ. ಭಾಷಾ ರಾಜಕಾರಣದ ಭಾಗವಾಗಿ ಅವರು ಅದನ್ನು ಪರಿಭಾವಿಸಿಕೊಂಡಿರಲಿಲ್ಲ. ಅವರು ಅದನ್ನು ಸಾಮಾಜಿಕ-ಆರ್ಥಿಕ-ರಾಜಕಾರಣದ ಒಂದು ಸಿದ್ಧಾಂತವನ್ನಾಗಿ ರೂಪಿಸಿದರು. ಅದು ಭಾಷೆ-ಸಾಹಿತ್ಯಕ್ಕೆ ಮಾತ್ರ ಸೀಮಿತಗೊಂಡ ಸಂಗತಿಯಾಗಿರಲಿಲ್ಲ. ಏಕೀಕರಣಪೂರ್ವದಲ್ಲಿ ಚಳುವಳಿ ನಡೆಸುತ್ತಿದ್ದ ಆಲೂರರಿಗೆ ಮತ್ತು ಅವರ ಸಮಕಾಲೀನರಿಗೆ ಕರ್ನಾಟಕತ್ವದ ಬಗ್ಗೆ ಖಚಿತವಾದ ವಿಚಾರಗಳಿದ್ದವು. ಕರ್ನಾಟಕ ಏಕೀಕರಣ ಏಕೆ ಬೇಕು ಎಂಬುದರ ಬಗ್ಗೆ ಅವರಿಗೆ ಅರಿವಿತ್ತು ಮತ್ತು ಅದನ್ನು ಕುರಿತಂತೆ ಅವರು ಚಿಂತನೆ ಮಾಡಿದ್ದರು. ಸಾಮಾಜಿಕ-ರಾಜಕೀಯ ನೆಲೆಯಲ್ಲಿ ಅದನ್ನು ಕಟ್ಟಲು ಅವರು ಪ್ರಯತ್ನಿಸಿದರು.

ಆಲೂರರು ೧೯೨೦ರಲ್ಲಿ ಧಾರವಾಡದಲ್ಲಿ ಸಂಘಟಿಸಿದ್ದ ಅಖಿಲ ಕರ್ನಾಟಕ ರಾಷ್ಟ್ರೀಯ ಪರಿಷತ್ತಿನ ಅಧಿವೇಶನದಲ್ಲಿ ಚರ್ಚಿಸಿದ ವಿಷಯಗಳ ಪಟ್ಟಿಯನ್ನು ತಮ್ಮ ಕೃತಿಯಲ್ಲಿ ನೀಡಿದ್ದಾರೆ (ಪು. ೮೪). ರಾಜಕಾರಣ, ವಾಙ್ಮಯ, ವ್ಯಾಪಾರ, ವೃತ್ತಪತ್ರಿಕೆ ಬೆಳವಣಿಗೆ, ಕರ್ನಾಟಕದಲ್ಲಿ ರೈಲ್ವೆ ತೊಂದರೆ, ಪೋಸ್ಟುಗಳ ತೊಂದರೆ, ಬಂದರು, ನೀರು ಕಾಲುವೆ, ಹೈಕೋರ್ಟ್, ವಿಶ್ವವಿದ್ಯಾಲಯ, ಮೋಟಾರಿನ ಅನನುಕೂಲತೆ, ರಸ್ತೆಗಳು, ಸೇತುವೆಗಳು, ಕನ್ನಡ ಶಾಲೆ ಮುಂತಾದ ಸಂಗತಿಗಳ ಬಗ್ಗೆ ಅಲ್ಲಿ ಚರ್ಚೆ ನಡೆದಿತ್ತು.

ಮತ್ತೊಂದು ಕಡೆ ಇದನ್ನು ಅವರು ಇನ್ನಷ್ಟು ಸ್ಪಷ್ಟವಾಗಿ ಹೀಗೆ ನುಡಿದಿದ್ದಾರೆ: 'ಕರ್ನಾಟಕತ್ವವೆಂದರೆ ಕನ್ನಡ ವಾಙ್ಮಯವಲ್ಲ. ಕನ್ನಡ ನುಡಿಯೆಂದರೆ ಕರ್ನಾಟಕದ ಸರ್ವಸ್ವವೆಂದು ತಿಳಿಯುವುದೊಂದು ವರ್ಗವಿದೆ. ಅದು ಅಷ್ಟು ಸರಿಯಲ್ಲ. ಕರ್ನಾಟಕತ್ವವು ವ್ಯಾಪಾರ, ಕಲೆ, ಭೂಸುಧಾರಣೆ, ಬಂದರು ಸುಧಾರಣೆ, ಆಯುರ್ವೇದ ಮುಂತಾದ ಸಂಗತಿಗಳನ್ನು ಒಳಗೊಂಡಿದೆ' (ಪು. ೧೪೭)'

ಅವರು ಬಳಸಿರುವ ಭೂಸುಧಾರಣೆ, ಬಂದರು ಅಭಿವೃದ್ಧಿ, ಶಾಲೆಗಳು ಮುಂತಾದ ಸಂಗತಿಗಳಿಂದ ಅವರೆ ವಿಚಾರ ಪ್ರಣಾಳಿಕೆಯ ವ್ಯಾಪ್ತಿ ಎಷ್ಟು ವಿಸ್ತೃತವಾಗಿತ್ತು ಎಂಬುದು ತಿಳಿಯುತ್ತದೆ. ದ್ವಿಭಾಷಾ ವಲಯದಲ್ಲಿದ್ದ ಕನ್ನಡ ಮಾತನಾಡುತ್ತಿದ್ದ ಪ್ರದೇಶಗಳನ್ನು ಕರ್ನಾಟಕದಲ್ಲಿ ವಿಲೀನಗೊಳಿಸುವ ಗುರಿಯ ಹಿನ್ನೆಲೆಯಲ್ಲಿ ಆಲೂರರ ಮೇಲ್ಕಂಡ

ವಿಚಾರಧಾರೆಯು ತುಂಬಾ ಉಪಯುಕ್ತವಾದುದಾಗಿತ್ತು. ಅದು ಜನರನ್ನು ಒಳಗೊಳ್ಳುವ ಪರಿಯದಾಗಿತ್ತು. ಆಲೂರರಂತೆಯೇ ಕರ್ನಾಟಕತ್ವದ ವ್ರತ ಕೈಗೊಂಡಿದ್ದ ಅಂದಿನ ಖ್ಯಾತ ಕಥೆಗಾರ ಕೃಷ್ಣಕುಮಾರ ಕಲ್ಲೂರ ಏಕೀಕರಣ ಕುರಿತಂತೆ ಹೀಗೆ ಬರೆದಿದ್ದಾರೆ:



"...ಸಂಯುಕ್ತ ಕರ್ನಾಟಕದ ಬೇಡಿಕೆ ಹೊರ ಹೊರಗೆ ಭಾಷಾತ್ಮಕವಾಗಿದ್ದರೂ ನಿಜವಾಗಿ ಅದು ಆರ್ಥಿಕ ದೃಷ್ಟಿಯಲ್ಲಿ ಹಿಂದುಳಿದವರ ಕೂಗಾಗಿತ್ತು. ಆದುದರಿಂದ ಈಗ ಒಂದಾಗಿರುವ ಸಂಯುಕ್ತ ಕರ್ನಾಟಕ ಹಿಂದುಳಿದ ಪ್ರದೇಶ ಗಳದೇ ಒಂದು ಸಂಯುಕ್ತ ರಾಜ್ಯವೆಂತಲೂ, ಭಾಷೆ ಒಂದಾಗಿರುವುದು ಒಂದು ಹೆಚ್ಚಿನ ಅನುಕೂಲವೆಂದೂ ಭಾವಿಸಿಕೊಳ್ಳಬೇಕು. ಆದುದರಿಂದ ಭಾಷೆ ಸಾಹಿತ್ಯಗಳ ಬೆಳವಣಿಗೆಗಿಂತಲೂ ಹಿಂದುಳಿದ ಪ್ರದೇಶಗಳ ಆರ್ಥಿಕ ಬೆಳವಣಿಗೆಯೇ ಕರ್ನಾಟಕ ರಾಜ್ಯದ ಗುರಿ ಎಂದು ಬಗೆಯ ಬೇಕು" (ಮೈಸೂರು ರಾಜ್ಯ ೧೯೫೬, ಕರ್ನಾಟಕ ಸರ್ಕಾರ, ಬೆಂಗಳೂರು). ಇದು ತುಂಬಾ ಮಹತ್ವದ ವಿಚಾರವಾಗಿದೆ. ಅಭಿವೃದ್ಧಿಯೇ ಏಕೀಕರಣದ ಮುಖ್ಯ ಗುರಿ ಯೆಂಬುದನ್ನು ಇವರು ಸ್ಪಷ್ಟವಾಗಿ ಗುರುತಿಸಿದ್ದಾರೆ.

ಕರ್ನಾಟಕ, ಏಕೀಕರಣ, ರಾಜ್ಯೋತ್ಸವಗಳು ಕೇವಲ ಭಾಷೆ-ಸಾಹಿತ್ಯಕ್ಕೆ ಮೀಸಲಾಗಿರುವ ಇಂದಿನ ದಿನಮಾನಗಳಲ್ಲಿ ಕಲ್ಲೂರರ ವಿಚಾರಗಳು, ಆಲೂರರ ಸಿದ್ಧಾಂತ ನಮ್ಮ ಕಣ್ಣು ತೆರೆಸಬೇಕಾಗಿದೆ. ಇಂದು ನಾವು ಯಾವುದನ್ನು ಪ್ರಾದೇಶಿಕ ಅಸಮಾನತೆಯೆಂದು ಗುರುತಿಸುತ್ತಿದ್ದೇವೆಯೋ ಅದರ ಬಗ್ಗೆ ೧೯೫೬ರಲ್ಲಿ ಕಲ್ಲೂರರು ಬರೆದಿರುವ ಮಾತುಗಳು ನಿಜಕ್ಕೂ ದಂಗುಬಡಿಸುತ್ತವೆ.

"...ನಿಜ ಕರ್ನಾಟಕ ಕೊಡಗು, ಕನ್ನಡ ಜಿಲ್ಲೆ, ಶಿವಮೊಗ್ಗ, ಚಿತ್ರದುರ್ಗ, ಬಿಜಾಪುರ, ಗುಲಬರ್ಗಾಗಳ ಪ್ರದೇಶದಲ್ಲಿರುವುದಲ್ಲದೆ ಬೆಂಗಳೂರು-ಮಂಗಳೂರು-ಮೈಸೂರು ನಗರಗಳಲ್ಲಿಲ್ಲ. ಇದನ್ನು ಮನದಟ್ಟಾಗುವಂತೆ ಅರಿತಾಗ ಮಾತ್ರ ನಾವು ನಮ್ಮ ನಾಡಿಗೆ ಸಮರ್ಪಕವಾದ ಸಂಚಾರ ಸಂಪರ್ಕಗಳ ಸಾಧನಗಳನ್ನು ಸಂಯೋಜಿಸಿಕೊಳ್ಳಬಲ್ಲೆವು. ಕರ್ನಾಟಕದ ಬಹು ಭಾಗ ನಾಡಿನ ಪಶ್ಚಿಮ ಹಾಗೂ ಉತ್ತರ ನಿಟ್ಟಿನಲ್ಲಿರುವುದರಿಂದಲೂ ಅದರಲ್ಲಿ ಕೆಲಭಾಗ ರಾಜಧಾನಿಯಿಂದ ಅತಿದೂರದಲ್ಲಿರುವುದರಿಂದಲೂ, ಬೆಂಗಳೂರು ಇನ್ನು ಮುಂದೆ ಉತ್ತರಾಭಿಮುಖವಾಗಬೇಕು. ಸಂಸಾರಿಯಾದವನಿಗೆ ಹೊರಗಿನ ದೊಡ್ಡಸ್ತಿಕೆ ಎಷ್ಟೇ ಇದ್ದರೂ, ತನ್ನ ಕುಟುಂಬದ ಹೊಣೆ ಹೇಗೆ ಆದ್ಯ ಕರ್ತವ್ಯವೋ ಹಾಗೆ ಬೆಂಗಳೂರು ತನ್ನ ಅಂತಾಭಾರತೀಯ-ಅಂತಾರಾಷ್ಟ್ರೀಯ ಹಿರಿಮೆ ಎಷ್ಟೇ ಇದ್ದರೂ ಕರ್ನಾಟಕದ ಆರ್ಥಿಕ ಅಂತರ್ವ್ಯವಸ್ಥೆ ಹೆಚ್ಚು ಕೀಳಾಗಿರುವಲ್ಲಿ ತನ್ನ ಹೊಣೆ ಹೆಚ್ಚಿದೆಯೆಂದು ಬಗೆದುಕೊಳ್ಳಬೇಕು."

ದಾರ್ಶನಿಕರಂತೆ, ೨೦೦೬ರಲ್ಲಿ ಉದ್ಭವಿಸಿರುವ ಸಮಸ್ಯೆಗಳನ್ನು ಕುರಿತಂತೆ ೧೯೫೬ರಲ್ಲಿ ಮುಂಗಂಡು ಕಲ್ಲೂರ ಅವರು ಕರ್ನಾಟಕದ ಅಭಿವೃದ್ಧಿ ಕುರಿತಂತೆ ಚರ್ಚೆಮಾಡಿದ್ದಾರೆ. ಅಭಿವೃದ್ಧಿ ಸಂಬಂಧಿ ಪ್ರಾದೇಶಿಕ ಅಸಮಾನತೆ ಬಗ್ಗೆ ಅವರು ಅಲ್ಲಿ ಮಾತನಾಡಿದ್ದಾರೆ. ಕಲ್ಲೂರರ ಪ್ರಕಾರ ೧೯೫೬ರಲ್ಲಿ ಕರ್ನಾಟಕದಲ್ಲಿ ವಿಲೀನವಾದ ಮತ್ತು ಅಲ್ಲಿಯವರೆಗೆ ಬೇರೆ ಪ್ರಾಂತ-ಸರ್ಕಾರಗಳ ಆಡಳಿತದಲ್ಲಿದ್ದ ಭಾಗಗಳು ಅಭಿವೃದ್ಧಿಯ ದೃಷ್ಟಿಯಿಂದ ಹಿಂದುಳಿದಿದ್ದವು. ಈ ಎಲ್ಲ ಭಾಗ-ಪ್ರದೇಶಗಳನ್ನು ಕರ್ನಾಟಕದಲ್ಲಿ ವಿಲೀನಗೊಳಿಸಬೇಕೆಂಬ ಏಕೀಕರಣದ ಹಿಂದಿನ ಉದ್ದೇಶವು ಮುಖ್ಯವಾಗಿ ಅಭಿವೃದ್ಧಿಗೆ ಸಂಬಂಧಿಸಿದ್ದುದಾಗಿತ್ತು. ನಿಜ, ಭಾಷೆಯು ಒಂದು ಮುಖ್ಯ ಸಂಗತಿಯಾಗಿತ್ತು. ಏಕೀಕರಣಕ್ಕೆ ಜನರನ್ನು ಸಂಘಟಿಸಲು ಭಾಷೆಯನ್ನು ಒಂದು ಅಸ್ತ್ರವನ್ನಾಗಿ ಬಳಸಲಾಗಿತ್ತು. ಆದರೆ ಈ ವಿಷಯದಲ್ಲಿ ನಿರ್ಣಾಯಕ ಸಂಗತಿ ಅಭಿವೃದ್ಧಿಯದಾಗಿತ್ತು. ನೆರೆ ಪ್ರಾಂತ-ರಾಜ್ಯಗಳ ಭಾಗಗಳು ಸಂಬಂಧಿಸಿದ ಆಡಳಿತದಿಂದ ನಿರ್ಲಕ್ಷ್ಯಕ್ಕೆ ಒಳಗಾಗಿದ್ದವು. ಇಂದಿಗೂ ಗಡಿಭಾಗದ ದ್ವಿಭಾಷಾ ಪ್ರದೇಶಗಳ ಸ್ಥಿತಿ ಹಿಂದಿನದಕ್ಕಿಂತಲೂ ಭಿನ್ನವಾಗಿಲ್ಲ. ಏಕೀಕರಣದ ವೈಫಲ್ಯವನ್ನು ಭಾಷೆಯ ನೆಲೆಯಿಂದ ನೋಡುವುದಕ್ಕೆ ಪ್ರತಿಯಾಗಿ ನಾವು ಅಭಿವೃದ್ಧಿಯ ನೆಲೆಯಿಂದ ಅದನ್ನು ನೋಡುವುದು ಅಗತ್ಯ. ಒಟ್ಟಿಂದದಲ್ಲಿ ಕರ್ನಾಟಕ, ಏಕೀಕರಣವೆಂಬ ಸಂಗತಿಗಳು ಭಾಷೆಗೆ, ಸಾಹಿತ್ಯಕ್ಕೆ ಮಾತ್ರ ಸಂಬಂಧಿಸಿದ ಸಂಗತಿಗಳಾಗಿರಲಿಲ್ಲ. ಈ ಬಗೆಯ ವಿಕೃತಿ ೧೯೫೬ರ ನಂತರ ಉಂಟಾಗಿದೆ. ಏಕೀಕರಣದ ಕನಸು ಕಂಡವರು, ಅದನ್ನು ಉಪಾಸನೆ ಮಾಡಿರುವವರು, ಅದನ್ನು ವಿಶಾಲವಾದ ಚೌಕಟ್ಟಿನಲ್ಲಿ ಪರಿಭಾವಿಸಿಕೊಂಡಿದ್ದರು.

### ಕರ್ನಾಟಕ ರಾಷ್ಟ್ರೀಯತೆ

ಡಾ|| ಕೆ. ರಾಘವೇಂದ್ರ ರಾವ್ ಅವರು ಏಕೀಕರಣದ ಧುರೀಣರ ಬಗ್ಗೆ ಬರೆದ ಮಹತ್ವದ ಕೃತಿಯಲ್ಲಿ (೨೦೦೦) ಸರಿಯಾಗಿ ಗುರುತಿಸಿರುವಂತೆ ನಿರ್ದಿಷ್ಟವಾದ ಹಾಗೂ ಖಚಿತವಾದ ಐತಿಹಾಸಿಕ, ಸಾಮಾಜಿಕ, ಪ್ರಾದೇಶಿಕ ಹಾಗೂ ರಾಜಕೀಯ ವ್ಯಕ್ತಿತ್ವವನ್ನು ಪಡೆದ ನಾಡು ಕರ್ನಾಟಕ. ಈ ಬಗೆಯ ಅದರ ನಿರ್ದಿಷ್ಟ ವ್ಯಕ್ತಿತ್ವ-ವಿಶಿಷ್ಟತೆಗೆ ಸರಿಸುಮಾರು ಸಾವಿರ ವರ್ಷಗಳ ಇತಿಹಾಸವಿದೆ. ಈ ಬಗೆಯ ವಿಚಾರಗಳ ಹಿನ್ನೆಲೆಯಲ್ಲಿ ಆಲೂರರು 'ಕರ್ನಾಟಕ ರಾಷ್ಟ್ರೀಯತೆ' ಎಂಬ ನುಡಿ ಬಳಸಿದ್ದಾರೆ (ಪು. ೮೩). ಈ ಕುರಿತಂತೆ ಅವರ ಮಾತುಗಳು ಅರ್ಥಗರ್ಭಿತವಾಗಿವೆ: "ರಾಷ್ಟ್ರೀಯತ್ವಕ್ಕೂ ಕರ್ನಾಟಕಕ್ಕೂ ನನಗೆ ವಿಶೇಷ ಭೇದವೆ ತೋರುವುದಿಲ್ಲ. ಕರ್ನಾಟಕತ್ವವನ್ನಷ್ಟೇ ಕಾರ್ಯಕ್ಷೇತ್ರವನ್ನಾಗಿ ತಕ್ಕೊಂಡು ರಾಷ್ಟ್ರೀಯತ್ವದಲ್ಲಿ ಕೆಲಸ ಮಾಡಿದೆನು. ಇದಕ್ಕೆ ಪ್ರಾದೇಶಿಕ ರಾಷ್ಟ್ರೀಯತ್ವ ಅಥವಾ ಕರ್ನಾಟಕ ರಾಷ್ಟ್ರೀಯತ್ವವೆಂದು ಕರೆಯಬಹುದು" (ಪು. ೭೫). ಕರ್ನಾಟಕ ರಾಷ್ಟ್ರೀಯತೆ ಎಂಬ ನುಡಿಯನ್ನು ಅದರ ಸೈದ್ಧಾಂತಿಕ ನೆಲೆಯಲ್ಲಿ ಮೊದಲು ಬಳಸಿದವರೇ ಆಲೂರರು. ಕರ್ನಾಟಕವೆಂಬುದು ಅವರಿಗೆ ಕೇವಲ ಭಾರತೀಯ ಒಕ್ಕೂಟದೊಳಗಿನ ಒಂದು ಘಟಕವಾಗಿರಲಿಲ್ಲ. ಪರಿಪೂರ್ಣವಾದ ರಾಷ್ಟ್ರೀಯತೆಯ ವ್ಯಕ್ತಿತ್ವವನ್ನು ಪಡೆದುಕೊಂಡಿದ್ದ ನಾಡು ಕರ್ನಾಟಕ. ಈ ಬಗ್ಗೆ ಅವರು ಕರ್ನಾಟಕತ್ವವನ್ನು ಪರಿಭಾವಿಸಿಕೊಂಡ ಬಗೆಯನ್ನು ಪರಿಶೀಲಿಸಿದರೆ ಅವರ ಕರ್ನಾಟಕ ರಾಷ್ಟ್ರೀಯತೆಯ ಅರ್ಥ ತಿಳಿಯುತ್ತದೆ. ಅವರು ಈ ಬಗ್ಗೆ ಹೀಗೆ ಬರೆಯುತ್ತಾರೆ:

"ಕರ್ನಾಟಕತ್ವದ ನನ್ನ ಕಲ್ಪನೆಯು ಸರ್ವವ್ಯಾಪಿಯಾಗಿದೆ. ಹಲವರು ತಿಳಿಯುವಂತೆ ಅದು ಸಂಕುಚಿತವಾಗಿಲ್ಲ. ನಮ್ಮ ಕರ್ನಾಟಕವು ಭರತಖಂಡಕ್ಕಿಂತಲೂ ದೊಡ್ಡದಾಗಿದೆ. ಏಷ್ಯಾ ಖಂಡವನ್ನು ಮೀರಿದೆ, ವಿಶ್ವವನ್ನು ವ್ಯಾಪಿಸಿದೆ. ಇದನ್ನು ಕೇಳಿ ಅನೇಕರು ಆಶ್ಚರ್ಯ ಗೊಳ್ಳಬಹುದು. ಭರತಖಂಡದ ಭಾವೈಕ್ಯ ಮಾತ್ರವಾದ ಕರ್ನಾಟಕವು ಭರತಖಂಡ ಕ್ಕಿಂತಲೂ ದೊಡ್ಡದಿರುವುದು ಎಂದಿಗಾದರೂ ಸಂಭವನೀಯವೇ ಎಂದು ಅವರು ಶಂಕಿಸ ಬಹುದು. ಅಹುದು. ಅದು ನಿಜವಾಗಿಯೂ ದೊಡ್ಡದಾಗಿದೆ. ಏಕೆಂದರೆ, ಕರ್ನಾಟಕದ ಸ್ಥೂಲ ಶರೀರವು ಸಂಕುಚಿತವಾಗಿದ್ದರೂ ಸೂಕ್ಷ್ಮ ಶರೀರವು ಅತಿ ವಿಸ್ತಾರವಾದುದಾಗಿದೆ. ಕರ್ನಾಟಕದಿಂದ ಪ್ರಸ್ತುತವಾದ ವಿಚಾರಗಳು ಇಂದಿಗೆ ಇಡೀ ಪ್ರಪಂಚದಲ್ಲಿ ಹರಡಿ ಕೊಂಡಿವೆ. ಕರ್ನಾಟಕ ಸಂಸ್ಕೃತಿಯು ಇಡೀ ಪ್ರಪಂಚವನ್ನು ಕೈವಶ ಮಾಡಿಕೊಂಡಿದೆ... ಕರ್ನಾಟಕವು ಭರತಖಂಡದ ಸಂಸ್ಕೃತಿಯನ್ನೆಲ್ಲ ಪಚನ ಮಾಡಿಕೊಂಡಿರುವುದಲ್ಲದೆ, ತನ್ನ ವಿಶಿಷ್ಟ ಸಂಸ್ಕೃತಿಯನ್ನು ಅದರಲ್ಲಿ ಬೆರೆಸಿ ಅದನ್ನು ಮತ್ತಷ್ಟು ಪುಷ್ಟಿಯನ್ನಾಗಿಯೂ, ವ್ಯಾಪಕ ವನ್ನಾಗಿಯೂ ಮಾಡಿರುವುದು" (ಪು. ೧೪೯). ಆಲೂರರ ಕರ್ನಾಟಕತ್ವದ ವಿಚಾರ ಗಳನ್ನು ಇಷ್ಟೊಂದು ದೀರ್ಘವಾಗಿ ಉಲ್ಲೇಖಿಸಿರುವುದಕ್ಕೆ ಕಾರಣವಿದೆ. ಇವೆಲ್ಲವೂ ಅವರ ಬೀಜ ನುಡಿಗಳು. ಕರ್ನಾಟಕವನ್ನು ಅಖಿಲ ಭಾರತ ಚೌಕಟ್ಟಿನಲ್ಲಿ ಪರಿಭಾವಿಸಿಕೊಳ್ಳುವು ದಕ್ಕಷ್ಟೆ ನಾವು ಪ್ರಯತ್ನ ಮಾಡುತ್ತಿದ್ದೇವೆ. ಆದರೆ ಆಲೂರರು ಅದನ್ನು ಜಾಗತಿಕ ಮಟ್ಟದಲ್ಲಿ ನಿಲ್ಲಿಸಲು ಪ್ರಯತ್ನಿಸಿದರು. ಸ್ಥೂಲ-ಸೂಕ್ಷ್ಮ-ಕಾರಣವೆಂಬ ಶರೀರಕ್ಕೆ ಸಂಬಂಧಿಸಿದ ಆಧ್ಯಾತ್ಮಿಕ ತತ್ವವನ್ನು ಆಲೂರರು ರಾಷ್ಟ್ರಕ್ಕೆ ಅಂದರೆ ಕರ್ನಾಟಕಕ್ಕೆ ಅನ್ವಯಿಸಿ ತಮ್ಮ ವಿಚಾರ ಬೆಳೆಸಿದ್ದಾರೆ.

### ಭಾರತೀಯ ಸಂಸ್ಕೃತಿ – ಕರ್ನಾಟಕ ಸಂಸ್ಕೃತಿ

ಆಲೂರರು ಕರ್ನಾಟಕ ಸಂಸ್ಕೃತಿಯನ್ನು ಕಲ್ಪಿಸಿಕೊಂಡಿರುವ ಬಗೆಯು ವಿನೂತನ ವಾದುದಾಗಿದೆ-ವಿಶಿಷ್ಟವಾದುದಾಗಿದೆ. ಭಾರತೀಯ ಮತ್ತು ಕರ್ನಾಟಕ ಸಂಸ್ಕೃತಿಗಳ ಸಂಬಂಧವನ್ನು ಸಾಮಾನ್ಯವಾಗಿ ನಾವು ತಿಳಿದುಕೊಂಡಿರುವುದಕ್ಕಿಂತ ಭಿನ್ನವಾದ ನೆಲೆಯಲ್ಲಿ ಅವರು ಪರಿಭಾವಿಸಿಕೊಂಡಿದ್ದಾರೆ. ಇವರೆಡರ ಸಂಬಂಧವನ್ನು ತಿರುವುಮುರುವು ಮಾಡಿ ಅವರು ತಮ್ಮ ಕರ್ನಾಟಕತ್ವದ ವಿಚಾರವನ್ನು ಬೆಳೆಸಿದ್ದಾರೆ. ಈ ಬಗ್ಗೆ ಅವರ ವಿಚಾರ ಹೀಗಿದೆ:

"ಕರ್ನಾಟಕ ಸಂಸ್ಕೃತಿಯೆಂಬುದು ಬೇರೆ ಸಂಸ್ಕೃತಿಯೇ ಅಲ್ಲ. ಇಡಿ ಭಾರತಕ್ಕೆಲ್ಲ ಒಂದೇ ಸಂಸ್ಕೃತಿ ಅದೆ. ಆದಂದರೆ ಅಧ್ಯಾತ್ಮ ಸಂಸ್ಕೃತಿ ಎಂದು ಹಲವರ [illegible] ಏಕೆಂದರೆ, ಭಾರತೀಯ ಸಂಸ್ಕೃತಿ[illegible] ಇಡೀ ಭರತಖಂಡಕ್ಕೆ[illegible] ಒಂದೇ [illegible] ಎಂಬುದನ್ನು ನಾನೂ ಒಪ್ಪುತ್ತೇನೆ. ಆದರೆ ಆ ಸಂಸ್ಕೃತಿಗೆ ಕರ್ನಾಟಕವು ತನ್ನ [illegible]

ಬೆರೆಸಿ ಅದನ್ನು ಪುಷ್ಟಿಗೊಳಿಸುತ್ತದೆಂಬುದನ್ನೂ ವಿಶಿಷ್ಟ ಸ್ವರೂಪವನ್ನು ಕೊಡುತ್ತದೆಂಬುದನ್ನೂ ಯಾರೂ ಮರೆಯಬಾರದು.''

ಮುಂದುವರಿದು, ''ಕರ್ನಾಟಕ ಸಂಸ್ಕೃತಿಯೆಂಬುದು ಭಾರತ ಸಂಸ್ಕೃತಿಯನ್ನು ಒಳಗೊಂಡಿರುವುದಲ್ಲದೆ ಅದನ್ನು ತನ್ನ ವಿಶಿಷ್ಟ ಸಂಸ್ಕೃತಿಯಿಂದ ಪುಷ್ಟಿಗೊಳಿಸಿದೆ'' (ಪು. ೧೧) ಎಂದಿದ್ದಾರೆ.

ಇಂದಿಗೂ ಆಸ್ಫೋಟಕಾರಿಯೆನ್ನಬಹುದಾದ ಅವರ ಕರ್ನಾಟಕತ್ವ, ಕರ್ನಾಟಕ ಸಂಸ್ಕೃತಿ ಕುರಿತ ವಿಚಾರಗಳ ತಾತ್ವಿಕ-ದಾರ್ಶನಿಕ ಮೇರೆಗಳನ್ನು ಹಿಡಿದಿಡುವುದು ನಮಗೆ ಇನ್ನೂ ಸಾಧ್ಯವಾಗಿಲ್ಲ. ಭಾರತೀಯವೆನ್ನುವುದು ಕರ್ನಾಟಕತ್ವವನ್ನು ಒಳಗೊಂಡಿದೆಯೆಂಬ ಜನಪ್ರಿಯ ವ್ಯಾಪಕ ನಂಬಿಕೆಗೆ ಭಿನ್ನವಾದ ರೀತಿಯಲ್ಲಿ ಕರ್ನಾಟಕತ್ವವೆನ್ನುವುದು ಭಾರತೀಯತೆಯನ್ನು ಒಳಗೊಂಡಿದೆಯೆಂಬ ಅವರ ವಿಚಾರವು ಬೀಜ ಸದೃಶವಾದ ನುಡಿಯಾಗಿದೆ. ರಾಜಕೀಯವಾಗಿ ಒಕ್ಕೂಟ ವ್ಯವಸ್ಥೆಗೆ ಹೊಸ ವ್ಯಾಖ್ಯೆಯನ್ನು ನೀಡುವಷ್ಟು ಅವರ ವಿಚಾರಗಳು ಸೃಜನಶೀಲವಾಗಿವೆ. ಕೇಂದ್ರ-ರಾಜ್ಯ ಸಂಬಂಧದ ಬಗ್ಗೆ ಆಲೂರರ ವಿಚಾರಗಳ ಹಿನ್ನೆಲೆಯಲ್ಲಿ ಹೆಚ್ಚಿನ ಅಧ್ಯಯನ ನಡೆಯುವ ಅಗತ್ಯವಿದೆ.

**ಕನ್ನಡ ಸಾಹಿತ್ಯ ಪರಿಷತ್ತು/ಕರ್ನಾಟಕ ಸಾಹಿತ್ಯ ಪರಿಷತ್ತು**

ಈ ಸಂಸ್ಥೆಯ ಉಗಮದ ಬಗ್ಗೆ ಅವರು ಹೀಗೆ ಬರೆದಿದ್ದಾರೆ: ''ಕರ್ನಾಟಕ ಸಾಹಿತ್ಯ ಪರಿಷತ್ತಿನ ಮೂಲ ಸಂಸ್ಥಾಪಕನು ನಾನು. ನಾನೊಬ್ಬನೆ ಎಂದು ಹೆಮ್ಮೆಯಿಂದ ಹೇಳಬಯಸುತ್ತೇನೆ. ಏಕೆಂದರೆ ಅದನ್ನು ಸ್ಥಾಪಿಸುವುದಕ್ಕೆ ೮-೧೦ ವರ್ಷ ಎಡೆಬಿಡದೆ ಸ್ವಂತ ಖರ್ಚಿನಿಂದ ಬೆಂಗಳೂರು-ಮೈಸೂರುಗಳಿಗೆ ಎಡತಾಕಿದ್ದೇನೆ.'' (ಪು.೧೫೫)

ಇದು ಉಗಮವಾದಾಗ (೧೯೧೫) ಅದರ ಹೆಸರು ಕರ್ನಾಟಕ ಸಾಹಿತ್ಯ ಪರಿಷತ್ತು ಎಂದೇ ಇತ್ತು. ಆದರೆ ಇದಕ್ಕೆ ಮೈಸೂರಿನವರ (ಮುಖ್ಯವಾಗಿ ಬಿ.ಎಂ.ಶ್ರೀ.) ವಿರೋಧವಿತ್ತು. ಅವರು ಅದನ್ನು ಕನ್ನಡ ಸಾಹಿತ್ಯ ಪರಿಷತ್ತನ್ನಾಗಿ ಮಾಡಿದರು. ಇದರಿಂದ ಬೇಸತ್ತು ಆಲೂರರು ೧೯೩೮ರಲ್ಲಿ ತಾವೇ ಹುಟ್ಟುಹಾಕಿದ್ದ ಸಂಸ್ಥೆಯಿಂದ ಹೊರಬರುತ್ತಾರೆ. ಆಲೂರರ ಕರ್ನಾಟಕತ್ವವು ಎಷ್ಟೊಂದು ವಿಸ್ತೃತವಾಗಿತ್ತು ಎಂಬುದು (ಪು. ೧೫೭) ಇದರಿಂದ ತಿಳಿದುಬರುತ್ತದೆ. ಅವರು ಭಾಷಾವಾರು ಪ್ರಾಂತಗಳ ಬಗ್ಗೆ ಚಿಂತಿಸುತ್ತಿದ್ದ ರೀತಿಯು ನಿಜಕ್ಕೂ ಕುತೂಹಲಕಾರಿಯಾಗಿತ್ತು. ಕರ್ನಾಟಕಕ್ಕೆ ಕನ್ನಡವೆಂಬ ಅರ್ಥ ಕೊಡುವುದಕ್ಕೆ ಅವರು ವಿರೋಧಿಯಾಗಿದ್ದರು. ಅವರ ಕರ್ನಾಟಕತ್ವವು ಸಾರ್ವತ್ರಿಕ-ಸಾರ್ವಜನಿಕವಾದ ಒಂದು ವಿಚಾರಕಲ್ಪವಾಗಿತ್ತು.

ಅವರ ಕೆಥೋಲಿಕ್ ಗುಣಗಳ ಬಗ್ಗೆ ದಂಡಿಯಾಗಿ ನಮಗೆ ನಿದರ್ಶನಗಳು ದೊರೆಯುತ್ತವೆ. ಅವರು ಕರ್ನಾಟಕವು ಉದಯವಾದ ೦೧-೧೧-೧೯೫೬ರಂದು ನೀಡಿದ ಸಂದೇಶದಲ್ಲಿ ಕೆಳಗಿನ ಮಾತುಗಳಿವೆ :

''ರಾಜ್ಯವು ಸುಪ್ರಜಾರಾಜ್ಯವೆನಿಸುವುದಕ್ಕೆ ಬಹುಸಂಖ್ಯಾತರ ತುಷ್ಟಿಪುಷ್ಟಿಗಳಿಗಿಂತಲೂ ಅಲ್ಪಸಂಖ್ಯಾತರ ತುಷ್ಟಿಪುಷ್ಟಿಗಳೇ ಹೆಚ್ಚಿನ ಮಾಪಕಗಳು.'' (ಪು. ೧೬)

ಅತ್ಯಂತ ಕುತೂಹಲಕಾರಿಯಾದ ಮೇಲಿನ ಮಾತುಗಳನ್ನು ೨೦೦೬ರಲ್ಲಿ ಯಾರಾದರೂ ನುಡಿದಿದ್ದರೆ ಆಶ್ಚರ್ಯವುಂಟಾಗುತ್ತಿರಲಿಲ್ಲ. ಆದರೆ ಆಲೂರರು ೨೦೦೬ರ ಪರಿಭಾಷೆಯನ್ನು ೧೯೫೬ರಲ್ಲಿ ನುಡಿದಿದ್ದಾರೆ. ಆಲೂರರ ವಿಚಾರಗಳಲ್ಲಿನ ಕೆಥೋಲಿಕ್ ಗುಣಗಳು ನಿಜಕ್ಕೂ ಅಚ್ಚರಿ ಮೂಡಿಸುತ್ತವೆ. ಏಕೆಂದರೆ ಅವರು ಮೂಲತಃ ಧಾರ್ಮಿಕ ವ್ಯಕ್ತಿಗಳು. ಅವರು ಅಧ್ಯಾತ್ಮವಾದಿಗಳು. ತಮ್ಮ ಕೃತಿಯ ಮುನ್ನುಡಿಯಲ್ಲಿ ತನ್ನ ಆಯುಷ್ಯದ ಮುಖ್ಯ ಧ್ಯೇಯಗಳು ಸ್ವಾತಂತ್ರ್ಯ, ಅಖಂಡ ಕರ್ನಾಟಕ ಮತ್ತು ಅಧ್ಯಾತ್ಮ ಸಾಧನೆ (ಪು. X) ಎಂದು ಘೋಷಿಸಿಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ ಅವರ ಮೇಲಿನ ಮಾತುಗಳನ್ನು ಗಮನಿಸಿದಾಗ ಅವರ ಪ್ರಜಾಪ್ರಭುತ್ವವಾದಿ ಧೋರಣೆಯು ತಿಳಿಯುತ್ತದೆ. ಎಲ್ಲರನ್ನು ಒಳಗೊಳ್ಳುವ ಅವರ ಕರ್ನಾಟಕತ್ವ ಮೀಮಾಂಸೆಯ ಚೌಕಟ್ಟಿನಲ್ಲಿ ಅವರು ತಮ್ಮ ವಿಚಾರಗಳನ್ನು ಮಂಡಿಸಿದ್ದಾರೆ. ಅಲ್ಪಸಂಖ್ಯಾತರ ಬಗ್ಗೆ ಅವರ ಮೀಮಾಂಸೆಯು 'ಒಳಗೊಳ್ಳುವ' ಸ್ವರೂಪದ್ದಾಗಿತ್ತೇ ವಿನಾ ಹೊರಗೆ ಹಾಕುವ ಸ್ವರೂಪದ್ದಾಗಿರಲಿಲ್ಲ.

**ವಿಚಾರ-ವಿಮರ್ಶೆ**

ಈ ಭಾಗದಲ್ಲಿ ಆಲೂರು ವೆಂಕಟರಾಯರ ಕರ್ನಾಟಕತ್ವದ ಮೂಲದಲ್ಲಿರುವ ಸೈದ್ಧಾಂತಿಕ ಸಂಗತಿಗಳನ್ನು ಚರ್ಚಿಸಲಾಗಿದೆ ಮತ್ತು ಅದರ ಇತಿಮಿತಿ ಹಾಗೂ ಮಹತ್ವವನ್ನು ವಿಶ್ಲೇಷಿಸಲಾಗಿದೆ. ಆಲೂರರು ತಮ್ಮ ರಾಷ್ಟ್ರೀಯತೆ (ಭಾರತೀಯ-ಕರ್ನಾಟಕ)ಯ ಸಿದ್ಧಾಂತವನ್ನು ಧಾರ್ಮಿಕ ಅಂದರೆ ಸನಾತನ ಧರ್ಮದ ನೆಲೆಗಟ್ಟಿನಲ್ಲಿ ಕಟ್ಟಿದ್ದಾರೆ. ಇದನ್ನು ಧಾರ್ಮಿಕ ರಾಷ್ಟ್ರೀಯತೆಯೆಂದು ಕರೆಯಬಹುದು (ಡಾ॥ ಡಿ. ಆರ್. ನಾಗರಾಜ್ ಇದನ್ನು

## ನಾನು, ಅವಳು ಮತ್ತು ಕಡಲು

ಅಣುಕಿಸುವಂತಿರುವ ಅವಳ ಕಪ್ಪು ಬುರ್ಖಾವನ್ನು ಲೆಕ್ಕಿಸದೆ
ನಾನು, ಅವಳೊಂದಿಗೆ ಎಷ್ಟೋ ಬಾರಿ
ಕಡಲಂಚಿನಲ್ಲಿ ವಿಹರಿಸಿದ್ದೇನೆ;
ಮನಸ್ಸು ಆರ್ದ್ರಗೊಂಡಾಗಲೆಲ್ಲಾ, ಕಣ್ಣ ಸಂಜ್ಞೆಯಲ್ಲೇ ಸುಖಿಸಿದ್ದೇನೆ...

ಈ ಭೂಮಿ, ಮುಗಿಲು, ಮನುಷ್ಯ, ಪ್ರೀತಿ,
ಸಂಬಂಧಗಳೆಂದರೆ ಅವಳಿಗೀಗ ಅಲರ್ಜಿ...

ಈಗೀಗ ಕಡಲು ಕೂಡ ಅವಳ ಗುಲಾಮನಂತೆ
ತನ್ನೊಡಲ ಅಲೆಗಳ ನಿಯಂತ್ರಣ ಮರೆತು
ಸದಾ ಅವಳನ್ನೇ ಕನವರಿಸುತ್ತದೆ ;
ಪಾದಗಳಡಿಗೆ ಮೃದು ಅಲೆಗಳ ನೂಕಿ
ಅವಳನ್ನು ಹೊತ್ತು ಮೆರೆದಂತೆ ಭ್ರಮಿಸುತ್ತದೆ...

ಮೊನ್ನೆ ಅವಳು ಒಂಟಿಯಾಗಿ ದಡದಲ್ಲಿ ವಿರಮಿಸುತ್ತಿದ್ದಳು
ದುತ್ತನೆ ಎರಗಿದ ಸುನಾಮಿಯ ಆಲಿಂಗನಕ್ಕೆ
ಅವಳೂ ಅಲೆಯಾದಳು
ಕಡಲು ಕಪ್ಪಾಯಿತು
ನಾನೋ ಕಥೆಯಾದೆ...



**ಮಂಜು ಶೆಟ್ಟರ್**
ಕೇರಾಫ್ ಈರಪ್ಪ ಎಂ. ಕಂಬಳಿ, ಡಿ - ೧೫೪, ಜೀವನ ಬೀಮಾ ನಗರ
ಬೆಂಗಳೂರು - ೫೬೦ ೦೭೫

ಅಧ್ಯಾತ್ಮಿಕ ರಾಷ್ಟ್ರೀಯತೆ ಎಂದು ಕರೆದಿದ್ದಾರೆ). ಇದರಲ್ಲಿ ಅವರು ಮಧ್ವಾಚಾರ್ಯರ ದ್ವೈತ ಸಿದ್ಧಾಂತವನ್ನು ಹಾಗೂ ಗೀತೆಯ ಸಾರವನ್ನು ಸಂಪನ್ಮೂಲವನ್ನಾಗಿ ಬಳಸಿಕೊಂಡಿದ್ದಾರೆ. ಡಾ|| ಡಿ.ಆರ್. ನಾಗರಾಜ್ ಮತ್ತು ಡಾ|| ಕೆ. ರಾಘವೇಂದ್ರ ರಾವ್ ಅವರು ಸರಿಯಾಗಿ ಗುರುತಿಸಿರುವಂತೆ ಆಲೂರರ ಧಾರ್ಮಿಕ-ಆಧ್ಯಾತ್ಮಿಕ ರಾಷ್ಟ್ರೀಯತೆಯನ್ನು ಬಹಳ ಎಚ್ಚರಿಕೆಯಿಂದ ಪರಿಗಣಿಸಬೇಕಾಗಿದೆ. ಇಂದು ವ್ಯಾಪಕವಾಗಿ ಕೇಳಿಬರುತ್ತಿರುವ ಸಾಂಸ್ಕೃತಿಕ ರಾಷ್ಟ್ರೀಯತೆಗಿಂತ ತೀವ್ರ ಭಿನ್ನವಾದ ವಿಚಾರ ಪ್ರಣಾಳಿಕೆ ಅವರದಾಗಿತ್ತು. ಅವರ ರಾಷ್ಟ್ರೀಯತೆಯು ಯಾವುದೋ ಒಂದು ಧಾರ್ಮಿಕ ಸೂತ್ರದ ಚೌಕಟ್ಟಿಗೆ ಕಟ್ಟಿದ ವಿಚಾರ ಪ್ರಣಾಳಿಕೆಯಾಗಿರಲಿಲ್ಲ. ಇದಕ್ಕಿಂತ ಭಿನ್ನವಾಗಿ ಅವರ ರಾಷ್ಟ್ರೀಯತೆಯು ಆಧುನಿಕತೆ ಹಾಗೂ ಸನಾತನತೆಗಳೆರಡನ್ನೂ ಒಳಗೊಂಡ ಒಂದು ಸೂತ್ರವಾಗಿತ್ತು (ಡಾ|| ಡಿ. ಆರ್. ನಾಗರಾಜ್, ಸಾಹಿತ್ಯ ಕಥನ, ೧೯೯೬, ಪು. ೨೭೬). ಆಧುನಿಕ ಪರಿಭಾಷೆಯಲ್ಲಿ ಹೇಳುವುದಾದರೆ ಅವರ ರಾಷ್ಟ್ರೀಯತೆಯು ಉದಾರವಾದಿ ಪ್ರಜಾಪ್ರಭುತ್ವ ಚೌಕಟ್ಟನ್ನು ಹೊಂದಿತ್ತು. ಆಲೂರರ ವಿಚಾರ ಪ್ರಣಾಳಿಕೆಯ ಎರಡು ಪ್ರಮುಖ ಲಕ್ಷಣಗಳನ್ನು ಕೆ. ರಾಘವೇಂದ್ರ ರಾವ್ ಗುರುತಿಸಿದ್ದಾರೆ:

ಮೊದಲನೆಯದು ಅದರ ಸಂಬಂಧವಾದಿ ನೆಲೆ. ಕರ್ನಾಟಕತ್ವ, ಭಾರತೀಯತೆ, ಜಾಗತಿಕತೆ, ಧಾರ್ಮಿಕತೆ ಮುಂತಾದವನ್ನು ಪರಸ್ಪರ ಅವಲಂಬಿತವಾದ ಮತ್ತು ಪರಸ್ಪರ ಸಂಬಂಧವುಳ್ಳ ಸಂಗತಿಗಳನ್ನಾಗಿ ಅವರು ಪರಿಭಾವಿಸಿಕೊಂಡಿದ್ದರು. ಇವುಗಳಲ್ಲಿ ಯಾವುದಕ್ಕೂ ಪ್ರತ್ಯೇಕವಾದ ನಿರಂಕುಶವಾದ ಸ್ಥಾನವಿರಲು ಅವರ ವೈಚಾರಿಕತೆಯಲ್ಲಿ ಅವಕಾಶವಿರಲಿಲ್ಲ. ಸಂಬಂಧವಾದಿತ್ವವು ಅವರ ವಿಚಾರ ಪ್ರಣಾಳಿಕೆಯ ಒಂದು ಪ್ರಮುಖ ಲಕ್ಷಣವಾಗಿತ್ತು. ತಮ್ಮ 'ಕರ್ನಾಟಕತ್ವದ ವಿಕಾಸ' ಕೃತಿಯ 'ಸಮರ್ಪಣ'ದಲ್ಲಿ ಹೀಗೆ ಅವರು ಬರೆದುಕೊಂಡಿದ್ದಾರೆ :

''ಕರ್ನಾಟಕಾಂತರ್ಯಾಮಿಯಾದ ಭಾರತೀದೇವಿಗೆ

ಭಾರತಾಂತರ್ಯಾಮಿಯಾದ ಭೂದೇವಿಗೆ

ಭಕ್ತಪೂರ್ವಕ ಸಮರ್ಪಣ'' – ಕರ್ನಾಟಕ 'ಸುಧಾಮ' ಆಲೂರು ವೆಂಕಟರಾಯ.

ಎರಡನೆಯದಾಗಿ ಎಲ್ಲರನ್ನೂ ಒಳಗೊಳ್ಳುವಂತಹ ಕೆಥೋಲಿಕ್ ಗುಣ. ಅವರದು ಮಾರ್ಕ್ಸ್‌ವಾದಿ ವಿಚಾರ ಪ್ರಣಾಳಿಕೆಯಾಗಿರಲಿಲ್ಲ. ಅವರದು ಬಹಿಷ್ಕೃತವಾದಿ ರಾಷ್ಟ್ರೀಯತೆ ಯಾಗಿರಲಿಲ್ಲ. ಅದು ಬಹುತ್ವದಿಂದ ಕೂಡಿದ ಸಿದ್ಧಾಂತವಾಗಿತ್ತು. ಎಲ್ಲರನ್ನೂ - ಎಲ್ಲವನ್ನೂ ಒಳಗೊಳ್ಳುವ ಗುಣ ಅದಕ್ಕಿತ್ತು.

ಈಗಾಗಲೇ ತಿಳಿಸಿರುವಂತೆ ದ್ವೈತ ಸಿದ್ಧಾಂತವನ್ನು ತಮ್ಮ ಅಧ್ಯಾತ್ಮ ಸಾಧನೆಯ ಮಾರ್ಗ ವನ್ನಾಗಿ ಆಲೂರರು ಮಾಡಿಕೊಂಡಿದ್ದರು. ಅವರು ರೂಪಿಸಿದ್ದ ಕರ್ನಾಟಕತ್ವವೆಂಬ ರಾಜಕೀಯ ವಿಚಾರ ಪ್ರಣಾಳಿಕೆಗೂ ಮತ್ತು ದ್ವೈತ ಸಿದ್ಧಾಂತಕ್ಕೂ ನಡುವೆ ಸಂಬಂಧವನ್ನು ಗುರುತಿಸಬಹುದು.

ಕೇಂದ್ರ-ರಾಜ್ಯಗಳ ನಡುವಣ ಸಂಬಂಧದ ಬಗ್ಗೆ ಅವರ ವಿಚಾರಗಳು ಇಂದಿಗೂ ಕ್ರಾಂತಿಕಾರಕವಾಗಿ ಕಾಣುತ್ತವೆ. ಒಕ್ಕೂಟ ವ್ಯವಸ್ಥೆಯನ್ನು -ಕೇಂದ್ರ-ಭಾಷಾವಾರು ಪ್ರಾಂತಗಳ ನಡುವಣ ಸಂಬಂಧವನ್ನು ಅವರು ಪರಿಭಾವಿಸಿಕೊಂಡಿದ್ದ ರೀತಿಗೂ ಮತ್ತು ಆತ್ಮ-ಪರಮಾತ್ಮಗಳ ಭಿನ್ನ ಅಸ್ತಿತ್ವವನ್ನು ಮನ್ನಿಸಿದ ದ್ವೈತ ಸಿದ್ಧಾಂತಗಳ ನಡುವೆಯೂ ಸಂಬಂಧವನ್ನು ಗುರುತಿಸಲು ಸಾಧ್ಯ. ಅವರ ವಿಚಾರ ಪ್ರಣಾಳಿಕೆಯಲ್ಲಿ ಪ್ರಾಂತಕ್ಕೆ ಸ್ವತಂತ್ರ ಸ್ವಾಯತ್ತ ಸ್ಥಾನ-ಅಧಿಕಾರವಿತ್ತು. ಅದು ಕೇಂದ್ರದ ಬಾಲಂಗೋಚಿಯಲ್ಲ. ಅಭಿನ್ನದೊಳಗೆ ಭಿನ್ನತೆಯನ್ನು ತುಂಬಾ ಆರೋಗ್ಯಕಾರಿ ನೆಲೆಯಲ್ಲಿ ಪರಿಭಾವಿಸಿಕೊಳ್ಳುವುದು ಆಲೂರರಿಗೆ ಸಾಧ್ಯವಾಗಿತ್ತು. ಈ ಒಂದು ಶಕ್ತಿ-ಪ್ರೇರಣೆ ದಿಶೆಯು ಅವರಿಗೆ ದ್ವೈತ ಸಿದ್ಧಾಂತದಿಂದ ಬಂದಂತೆ ಕಾಣುತ್ತದೆ.

### ಅನನ್ಯತೆಯ ರಾಜಕಾರಣ

ಆಲೂರರ ಕರ್ನಾಟಕತ್ವ ವಿಚಾರ ಪ್ರಣಾಳಿಕೆಯನ್ನು ಅನನ್ಯತೆಯ ರಾಜಕಾರಣದ ಚೌಕಟ್ಟಿನಲ್ಲಿಯೂ ಅಧ್ಯಯನ ಮಾಡಬಹುದು. ಈಗಾಗಲೇ ತಿಳಿಸಿರುವಂತೆ ಅವರ ವಿಚಾರ ಪ್ರಣಾಳಿಕೆಯಲ್ಲಿ ಕರ್ನಾಟಕಕ್ಕೆ ಭಾರತೀಯತೆಯ ಒಂದು ನೆಲೆಯೂ ಇದೆ ಮತ್ತು ತನ್ನ ವಿಶಿಷ್ಟತೆಯ ನೆಲೆಯೂ ಇದೆ. ಅದೇ ರೀತಿ ಭಾರತೀಯತೆಗೆ ಜಾಗತಿಕವಾದ ಒಂದು ನೆಲೆಯಿದೆ ಹಾಗೂ ಅದಕ್ಕೆ ಕರ್ನಾಟಕತ್ವದ ಒಂದು ನೆಲೆಯಿದೆ. ಆಲೂರರ ರಾಷ್ಟ್ರೀಯತೆ ಸಿದ್ಧಾಂತದಲ್ಲಿ ಕರ್ನಾಟಕತ್ವವಿಲ್ಲದೆ ಭಾರತೀಯತೆಗೆ ಅಸ್ತಿತ್ವವಿಲ್ಲ. ಆಲೂರರ ಕರ್ನಾಟಕತ್ವವು ಭಾರತೀಯತೆಯು ತಿಂದು ತೇಗಿ ಅರಗಿಸಿಕೊಂಡುಬಿಡುವ ಸ್ವರೂಪದ್ದಾಗಿರಲಿಲ್ಲ. ಕರ್ನಾಟಕತ್ವದಿಂದ ಭಾರತೀಯತೆಯು ಭಾರತೀಯತೆಯಿಂದ ಕರ್ನಾಟಕತ್ವವು ಅಸ್ತಿತ್ವವನ್ನು ಪಡೆದುಕೊಂಡ ಸಂಗತಿಗಳನ್ನಾಗಿ ಅವರು ಅವುಗಳನ್ನು ಪರಿಭಾವಿಸಿ ಕೊಂಡಿದ್ದಾರೆ. ಇದನ್ನು ಏಕತೆ-ಅನೇಕತೆಯೆಂಬ ಕ್ಲೀಷೆಯ ಚೌಕಟ್ಟಿನಲ್ಲಿ ಪರಿಶೀಲಿಸಲು ಸಾಧ್ಯವಿಲ್ಲ. ಭಾರತೀಯ ಸಂಸ್ಕೃತಿಯ ಏಕತೆ-ಅನೇಕತೆಗಳ ನಡುವಣ ಸಂಬಂಧವನ್ನು ಅವರು ಮರು ಪರಿಶೋಧಕ್ಕೆ ಒಳಪಡಿಸಿದರು. ಇವೆರಡರ ನಡುವಣ ಸಂಬಂಧವನ್ನು ಅವರು ಚಲನಶೀಲವಾದ ಹಾಗೂ ಸಂಕೀರ್ಣವಾದ ನೆಲೆಯಲ್ಲಿ ಪರಿಭಾವಿಸಿಕೊಂಡಿದ್ದರು. ಇವೆರಡೂ ಪರಸ್ಪರ ಪೂರಕವಾದ ಸಂಗತಿಗಳಾಗಿವೆಯೆ ವಿನಾ ಪರಸ್ಪರ ಪರ್ಯಾಯವಾದ ಸಂಗತಿಗಳಲ್ಲ. ಈ ಬಗೆಯ ಚಿಂತನೆಯ ಕಾರಣದಿಂದಾಗಿಯೇ ಅವರಿಗೆ ಭಾರತದ ಸ್ವಾತಂತ್ರ್ಯ ಹೋರಾಟ ಮತ್ತು ಕರ್ನಾಟಕ ಏಕೀಕರಣ ಹೋರಾಟಗಳ ನಡುವೆ ವೈರುಧ್ಯ ಕಾಣಲಿಲ್ಲ. ಭಾರತೀಯ ಸ್ವಾತಂತ್ರ್ಯ ಅಥವಾ ಕರ್ನಾಟಕ ಏಕೀಕರಣವೆಂಬುದು ಅವರ ಮುಂದಿದ್ದ ಗುರಿಯಲ್ಲ. ಅವರ ಮುಂದಿದ್ದ ಗುರಿ ಸ್ವಾತಂತ್ರ್ಯ ಹಾಗೂ ಏಕೀಕರಣ. ಆಲೂರರಿಗೆ ಇವೆರಡೂ ಸಾವಯವವಾಗಿ ಪರಸ್ಪರ ಬೆಸೆದುಕೊಂಡ ಸಂಗತಿಗಳಾಗಿದ್ದವು.

ಆಲೂರರು ತಮ್ಮ ವಿಚಾರ ಪ್ರಣಾಳಿಕೆಯನ್ನು ಕಟ್ಟುವ ದಿಶೆಯಲ್ಲಿ ಅನೇಕ ಸಮಸ್ಯೆ ಗಳನ್ನು ಹಾಗೂ ಪ್ರಶ್ನೆಗಳನ್ನು ಎದುರಿಸಿದಂತೆ ಕಾಣುತ್ತದೆ. ಏಕೆಂದರೆ ವಸಾಹತುಶಾಹಿ ಸಂದರ್ಭದಲ್ಲಿ ರಾಷ್ಟ್ರೀಯತೆಯನ್ನು ಅಥವಾ ಕರ್ನಾಟಕ ಏಕೀಕರಣವನ್ನು ಸ್ವಾತಂತ್ರ್ಯ ಹೋರಾಟಕ್ಕೆ ಅತೀತವಾದ ನೆಲೆಯಲ್ಲಿ ಊಹಿಸಿಕೊಳ್ಳುವುದು ಸಾಧ್ಯವಿರಲಿಲ್ಲ. ಆದರೆ ಅವರಿಗೆ ಇವೆರಡನ್ನು ಸಂಯೋಜಿಸುವಂತಹ ಸಿದ್ಧಾಂತವೊಂದರ ಅಗತ್ಯವಿತ್ತು. ಇದರಿಂದಾಗಿ ಅವರಿಗೆ ಭಾರತೀಯ ರಾಷ್ಟ್ರೀಯತೆಯನ್ನು ಅಥವಾ ಭಾರತೀಯ ಸಂಸ್ಕೃತಿಯನ್ನು ಪುನರ್ ಪರಿಶೋಧಿಸುವ ಪ್ರಮೇಯ ಉಂಟಾಯಿತು.

ಇದಕ್ಕೆ ಅವರು ಕಂಡುಕೊಂಡ ಪರಿಹಾರವು ತುಂಬಾ ಕುತೂಹಲಕಾರಿಯಾಗಿದೆ. ಅವರ ಮೀಮಾಂಸೆಯಲ್ಲಿ ಭಾರತೀಯತೆ ಹಾಗೂ ಕರ್ನಾಟಕತ್ವ ಇವೆರಡನ್ನೂ ಅವರು ಜಾಗತಿಕತೆಯ ಚೌಕಟ್ಟಿನಲ್ಲಿ ಅಸ್ತಿತ್ವ ಪಡೆದ ಸಂಗತಿಗಳನ್ನಾಗಿ ಪರಿಭಾವಿಸಿಕೊಂಡರು. ಭಾರತೀಯತೆ-ಕರ್ನಾಟಕತ್ವ, ಜಾಗತಿಕತೆ-ಸನಾತನತೆ ಇವುಗಳ ಸಂಬಂಧವನ್ನು ಅವರು ಪುನರ್‌ವ್ಯಾಖ್ಯಾನಕ್ಕೆ ಒಳಪಡಿಸಿದರು. ಕರ್ನಾಟಕತ್ವದ ಹಾಗೂ ಭಾರತೀಯತೆಗಳ ಪ್ರತ್ಯೇಕ ಅಸ್ತಿತ್ವವನ್ನು ಒಪ್ಪುತ್ತಲೇ ಅವುಗಳ ನಡುವಣ ಸಂಬಂಧವನ್ನು ಅವರು ಹೊಸ ರೀತಿಯಲ್ಲಿ ಕಟ್ಟಿಕೊಳ್ಳಲು ಪ್ರಯತ್ನಿಸಿದರು. ಅವರ ಮೀಮಾಂಸೆಯಲ್ಲಿ ಕರ್ನಾಟಕತ್ವವು ಒಂದು ಪ್ರತ್ಯೇಕವಾದ ಅನನ್ಯತೆ. ಆದರೆ ಅದು ಪ್ರತ್ಯೇಕವಾದ ಒಂದು ಸಂಗತಿಯಾದರೂ ಅವರ ಮೀಮಾಂಸೆಯಲ್ಲಿ ಇತರೆ ಅನನ್ಯತೆಗಳಿಗೂ ಅವಕಾಶವಿತ್ತು. ಕನ್ನಡಿಗ, ಕರ್ನಾಟಕಸ್ಥ, ಭಾರತೀಯ ಹಾಗೂ ಜಾಗತಿಕ ನಾಗರಿಕ ಹೀಗೆ ಎಲ್ಲವೂ ಏಕಕಾಲದಲ್ಲಿ ಅಸ್ತಿತ್ವದಲ್ಲಿರಬಲ್ಲವು ಮತ್ತು ಇರಬೇಕು ಹಾಗೂ ಇರುತ್ತವೆ ಎಂಬುದು ಆಲೂರರ ಸಿದ್ಧಾಂತವಾಗಿತ್ತು. ಇದೆಲ್ಲವೂ ಏಕಕಾಲದಲ್ಲಿ ಅಸ್ತಿತ್ವದಲ್ಲಿರಲು ಸಾಧ್ಯವೆಂಬ ಸಂಗತಿಯನ್ನು ಅವರು ಪ್ರತಿಪಾದಿಸಿದರು.

ಪಶ್ಚಿಮದಲ್ಲಿ ದೈತ್ಯರೂಪದಲ್ಲಿ ಬೆಳೆಯುತ್ತಿರುವ ಸಾಮ್ರಾಜ್ಯಶಾಹಿ ರಾಷ್ಟ್ರೀಯತೆಯನ್ನು ಅವರು ತಿರಸ್ಕರಿಸಿದರು. ಅವರದು ಎಲ್ಲರನ್ನೂ ಒಳಗೊಳ್ಳುವ ಮೀಮಾಂಸೆಯಾಗಿತ್ತು. ಈಗಾಗಲೇ ತಿಳಿಸಿರುವಂತೆ ವರ್ಜ್ಯವಾದಿ ಅಥವಾ ತಿರಸ್ಕಾರವಾದಿ ವಿಚಾರ ಪ್ರಣಾಳಿಕೆ ಅದಾಗಿರಲಿಲ್ಲ. ಕರ್ನಾಟಕತ್ವದ ಬಗ್ಗೆ ಅವರು ಮಾತನಾಡುತ್ತಿದ್ದರೂ ಅವರ ವಿಚಾರಗಳು ಕರ್ನಾಟಕತ್ವದ ವ್ಯಾಪ್ತಿಯನ್ನು ಮೀರಿದ ನೆಲೆಯನ್ನು ಪಡೆದುಕೊಂಡಿದ್ದವು. ಅವರ ಪ್ರಾದೇಶಿಕ ರಾಜಕಾರಣ ಸಿದ್ಧಾಂತವು ಕರ್ನಾಟಕವನ್ನು ಬಿಟ್ಟು ಉಳಿದ ಪ್ರಾಂತಗಳಿಗೂ ಅನ್ವಯವಾಗುವ ಸೈದ್ಧಾಂತಿಕ ಗುಣವನ್ನು ಪಡೆದಿತ್ತು. ತಾವು ರಚಿಸಿದ ಕರ್ನಾಟಕತ್ವದ ಸೂತ್ರಗಳ ಬಗ್ಗೆ ಬರೆಯುತ್ತಾ ಅವರು, ''ಈ ಸೂತ್ರಗಳು ಕರ್ನಾಟಕಕ್ಕೆ ಮಾತ್ರ ಅನ್ವಯಿಸದೆ, ತಕ್ಕ ಅದಲುಬದಲುಗಳಿಂದ ಮಿಕ್ಕ ಪ್ರಾಂತಗಳಿಗೂ ಅನ್ವಯಿಸುವವು. ಎಲ್ಲ ಪ್ರಾಂತಗಳು ಕೂಡಿ ಒಟ್ಟಾರೆ ಪ್ರಯತ್ನಿಸಬೇಕೆಂಬುದೇ ನನ್ನ ಉದ್ದೇಶ'' ಎಂಬ ವಿಚಾರವನ್ನು ಮಂಡಿಸುತ್ತಾರೆ (ಪು. ೧೮೯). ಬಹುರೂಪಿ ಅಸ್ತಿತ್ವಕ್ಕೆ ಸಂಬಂಧಿಸಿದ ಘರ್ಷಣೆಗಳಿಗೆ ಆಲೂರರು ತಮ್ಮ ಮೀಮಾಂಸೆಯಲ್ಲಿ ಪರಿಹಾರದ ಮಾರ್ಗಗಳನ್ನು ರೂಪಿಸಿದ್ದರು. ಈ ಬಗೆಯ ಕಾರ್ಯತಂತ್ರವನ್ನು ಕೆ. ರಾಘವೇಂದ್ರ ರಾವ್ 'ಬಹುರೂಪಿ ಅಸ್ತಿತ್ವದ ನಿರ್ವಹಣೆ ಕಾರ್ಯತಂತ್ರ'ವೆಂದು ಕರೆದಿದ್ದಾರೆ. ಭಾರತೀಯ ರಾಷ್ಟ್ರೀಯತೆ-ಕರ್ನಾಟಕತ್ವಗಳ ಸಂಬಂಧ ಕುರಿತಂತೆ ಬರೆಯುವಾಗ ಆಲೂರರು ತಮ್ಮನ್ನು ತಾವು ಕನ್ನಡಿಗನನ್ನಾಗಿ, ಕರ್ನಾಟಕಸ್ಥನನ್ನಾಗಿ, ಭಾರತೀಯನನ್ನಾಗಿ, ಜಾಗತಿಕ ನಾಗರಿಕನನ್ನಾಗಿ ಪರಿಭಾವಿಸಿ ಕೊಳ್ಳುತ್ತಾರೆ. ಇವೆಲ್ಲ ಅಸ್ತಿತ್ವಗಳ ಜೊತೆಯಲ್ಲಿ ಅವರು ಆಧುನಿಕ ನಾಗರಿಕನ ವ್ಯಕ್ತಿತ್ವವನ್ನು ತಬ್ಬಿಕೊಳ್ಳಲು ಪ್ರಯತ್ನಿಸುತ್ತಾರೆ.

### ಅಭಿನ್ನ ಕರ್ನಾಟಕ

ಆಲೂರರ ಕರ್ನಾಟಕತ್ವವು ಅಭಿನ್ನವಾದ-ಅಖಂಡವಾದ ವಿಚಾರ ಪ್ರಣಾಳಿಕೆ ಯಾಗಿರಲಿಲ್ಲ. ಇದಕ್ಕೆ ಪ್ರತಿಯಾಗಿ ಭಿನ್ನತೆಯನ್ನು ಒಳಗೊಂಡೂ ಅಭಿನ್ನವಾಗುವ,

ಏಕಭಾಷೆಯನ್ನು ಮೀರಿಯೂ ಭಾಷಾ ಪ್ರಾಂತವಾದ, ಅಂದರೆ ಭಿನ್ನ ಧರ್ಮಗಳು, ಜಾತಿಗಳು, ಭಾಷೆಗಳ ಜನರನ್ನು ಒಟ್ಟಿಗೆ ಒಳಗೊಳ್ಳುವ ಒಂದು ರಾಜಕೀಯ ಚಿಂತನೆ ಅದಾಗಿತ್ತು. ಕರಾವಳಿ ಕರ್ನಾಟಕ, ಕೊಡಗು ಕರ್ನಾಟಕ, ಹೈದರಾಬಾದ್-ಕರ್ನಾಟಕ, ಮಲೆಗಳ ಕರ್ನಾಟಕ, ದಕ್ಷಿಣ ಕರ್ನಾಟಕ, ಮುಂಬೈ ಕರ್ನಾಟಕ – ಹೀಗೆ ಹಲವು ಕರ್ನಾಟಕಗಳ ಸಂಯೋಜಿತ ಪ್ರಾಂತ ಕರ್ನಾಟಕ. ಈ ಬಗೆಯ ಭಿನ್ನತೆಗಳನ್ನು ಒಪ್ಪಿಕೊಳ್ಳದೆ - ಮನ್ನಿಸದೆ ಬೇರೆ ಮಾರ್ಗವಿರಲಿಲ್ಲ. ಇಡೀ ಕರ್ನಾಟಕವನ್ನು ಗ್ರಹಿಸುವ ಮಾರ್ಗವೆಂದರೆ ಅದರ ಭಿನ್ನತೆಯನ್ನು ಮನ್ನಿಸುವುದೇ ಆಗಿತ್ತು. ತಮ್ಮ ಕರ್ನಾಟಕತ್ವ ಮೀಮಾಂಸೆಯು ಕರ್ನಾಟಕವನ್ನೂ ಭಾರತವನ್ನೂ ಮೀರಿದ ಜಾಗತಿಕ ವಿಚಾರ ಪ್ರಣಾಳಿಕೆಯೆಂದು ಆಲೂರರು ಪ್ರತಿಪಾದಿಸಿದಾಗ ಇದೇ ಅರ್ಥದಲ್ಲಿ ಎಂಬುದನ್ನು ನಾವು ಗಮನಿಸಬೇಕು. ಇದೊಂದು ತಾತ್ವಿಕ ಪ್ರಣಾಳಿಕೆ. ಅದೊಂದು ಮೀಮಾಂಸೆ. ಭಾರತದ ಒಕ್ಕೂಟ ವ್ಯವಸ್ಥೆಯ ಸಂದರ್ಭದಲ್ಲಿ ರಾಷ್ಟ್ರೀಯತೆಯನ್ನು, ಭಾರತೀಯತೆಯನ್ನು, ಪರಿಭಾವಿಸಿಕೊಳ್ಳಲು ಅಗತ್ಯವಾದ ಸೈದ್ಧಾಂತಿಕ ಕ್ರಮವೊಂದನ್ನು ಆಲೂರರು ತಮ್ಮ ಕರ್ನಾಟಕತ್ವ ಮೀಮಾಂಸೆಯಲ್ಲಿ ಪ್ರತಿಪಾದಿಸಿದ್ದಾರೆ. ಭಾಷಾವಾರು ಪ್ರಾಂತ ಕುರಿತಂತೆ ಪ್ರಬಲ ಹೋರಾಟವನ್ನು ಸಂಘಟಿಸುತ್ತಲೇ, ಅಂತಹ ವಿಚಾರವನ್ನು ಪ್ರತಿಪಾದಿಸುತ್ತಲೇ ಅವರು ಅದನ್ನು ಮೀರುವ ದಾರಿಗಳನ್ನು ಕಂಡುಕೊಂಡಿದ್ದರು.

**ಪದಾರ್ಥ ಮತ್ತು ಪರಮಾರ್ಥ**

ಈ ಹಿಂದೆ ನೋಡಿದಂತೆ ಆಲೂರರು ಮೂಲತಃ ಧಾರ್ಮಿಕ ವ್ಯಕ್ತಿ. ತಮ್ಮ ಬದುಕಿನ ಮೂರು ಧ್ಯೇಯಗಳಲ್ಲಿ ಅಧ್ಯಾತ್ಮ ಸಾಧನೆಯನ್ನು ಅವರು ಸೇರಿಸುತ್ತಾರೆ. ಆದರೆ ಅವರ ಬದುಕನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಅವರು ಲೌಕಿಕವನ್ನು ಹೇಗೆ ತಬ್ಬಿಕೊಂಡಿದ್ದರು ಎಂಬುದು ತಿಳಿಯುತ್ತದೆ. ರಾಷ್ಟ್ರೀಯತೆ-ಪ್ರಾದೇಶಿಕತೆ, ಆಧುನಿಕತೆ-ಸನಾತನತೆಗಳನ್ನು ಹೇಗೆ ಸಂಯೋಜಿಸಲು ಅವರು ಪ್ರಯತ್ನಿಸಿದರೋ ಅದೇ ರೀತಿ ಅವರು ಪದಾರ್ಥ ಮತ್ತು ಪರಮಾರ್ಥಗಳನ್ನು ಸಂಯೋಜಿಸಲು ಪ್ರಯತ್ನಿಸಿದರು. ಅವರು ಬೆಂಕಿಪೊಟ್ಟಣ ಕಾರ್ಖಾನೆ, ಸೀಸದಕಡ್ಡಿ ಕಾರ್ಖಾನೆ, ಬಟ್ಟೆ ಕಾರ್ಖಾನೆಗಳನ್ನು ಆರಂಭಿಸುತ್ತಾರೆ. ಚಿತ್ರಕಲಾ ಶಾಲೆ ತೆರೆಯುತ್ತಾರೆ. ಸಕ್ಕರೆ ಕಾರ್ಖಾನೆ ಶುರು ಮಾಡುತ್ತಾರೆ. ಮಂಗಳೂರು ಹೆಂಚಿನ ಕಾರ್ಖಾನೆ ತೆಗೆಯುತ್ತಾರೆ. ಹತ್ತಿ ನೂಲಿನ ಗಿರಣಿ ಸ್ಥಾಪಿಸುತ್ತಾರೆ. ಜವಳಿ ಅಂಗಡಿ ಪ್ರಾರಂಭಿಸುತ್ತಾರೆ. ಪರಸ್ಪರ ಸ್ವಸಹಾಯ ಹಣಕಾಸು ಸೊಸೈಟಿಯನ್ನು ತೆರೆಯುತ್ತಾರೆ. ಅವರು ಹತ್ತಾರು ವ್ಯಾಪಾರ-ವಾಣಿಜ್ಯ ಸಾಹಸಗಳಿಗೆ ಕೈ ಹಾಕುತ್ತಾರೆ. ಅವುಗಳಲ್ಲಿ ಅವರು ಯಶಸ್ವಿಯಾಗಲಿಲ್ಲವೆಂಬುದು ಬೇರೆ ಮಾತು. ಈ ಎಲ್ಲ ಪ್ರಯತ್ನ-ಪ್ರಯೋಗಗಳನ್ನು ಕೇವಲ ಸಂಪತ್ತಿನ ಸಂಗ್ರಹದ ಸಂಗತಿಯಾಗಿ ನೋಡಲು ಸಾಧ್ಯವಿಲ್ಲ. ಆಧುನಿಕತೆ-ಕೈಗಾರಿಕೆ-ವಾಣಿಜ್ಯ ಮನೋಭಾವವನ್ನು ಬೆಳೆಸಿಕೊಳ್ಳಲು ಮತ್ತು ಅಂತಹ ಸಂಗತಿಗಳಿಗೆ ನಾಡು ತೆರೆದುಕೊಳ್ಳಬೇಕು ಎಂಬುದನ್ನು ತೋರಿಸಿಕೊಡಲು ಅವರು ಇಂತಹ ಸಾಹಸಗಳನ್ನು ಕೈಗೊಂಡಂತೆ ಕಾಣುತ್ತದೆ. ಈ ಎಲ್ಲ ಪ್ರಯತ್ನಗಳ ಮೂಲಕ ಅವರು ಕಂಡುಕೊಂಡ ತಥ್ಯವೆಂದರೆ ಕರ್ನಾಟಕ ಏಕೀಕರಣವಿಲ್ಲದೆ ಅದರ ಅಭಿವೃದ್ಧಿ, ಕೈಗಾರಿಕಾ ಪ್ರಗತಿ ಸಾಧ್ಯವಿಲ್ಲವೆಂಬುದಾಗಿತ್ತು. ಆಲೂರರು ಆಧುನಿಕತೆಯನ್ನು ಸೈದ್ಧಾಂತಿಕ ಹಾಗೂ ಆಚರಣೆ ಮಟ್ಟದಲ್ಲಿ ಮೈಗೂಡಿಸಿಕೊಳ್ಳಲು ಪ್ರಯತ್ನಿಸಿದರು. ಆದರೆ ಅವರ ವಿಚಾರಗಳ ಮೂಲಬೇರು ಧಾರ್ಮಿಕ ನಂಬಿಕೆಯಲ್ಲಿತ್ತು ಎಂಬುದನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಆಲೂರರು ಕರ್ನಾಟಕತ್ವವನ್ನು ಭಾಷೆಗಿಂತ ಮಿಗಿಲಾಗಿ ಜನರ ಬದುಕಿನ ನೆಲೆಯಲ್ಲಿ ಪರಿಭಾವಿಸಿಕೊಳ್ಳಲು ಪ್ರಯತ್ನಿಸಿದ್ದರು. ಆಧುನಿಕತೆ ಹಾಗೂ ಆಧ್ಯಾತ್ಮಿಕತೆಗಳ ನಡುವೆ ಒಂದು ಬಗೆಯ ಸಮತೋಲನ ಸಾಧಿಸಿಕೊಳ್ಳುವ ಪ್ರಯತ್ನ ಅವರದಾಗಿತ್ತು.




ಗದಗದ ಗಾಂಧಿ ವೃತ್ತದಲ್ಲಿರುವ ಕಾರ್ಡೋಜ್ ಗ್ರಂಥಾಲಯ ಆವರಣದಲ್ಲಿ ನವಕರ್ನಾಟಕ ಪುಸ್ತಕ ಪ್ರದರ್ಶನ ಮತ್ತು ಮಾರಾಟ ಮಳಿಗೆಯ ಉದ್ಘಾಟನೆ ದಿನಾಂಕ: ೭.೧.೨೦೦೭ರಂದು ನೆರವೇರಿತು. ಖ್ಯಾತ ಸಾಹಿತಿ ಶೇಖರ ಲದವಾ ಅವರು ಪುಸ್ತಕ ಪ್ರದರ್ಶನವನ್ನು ಉದ್ಘಾಟನೆ ಮಾಡಿದರು.

**ಕವಿರಾಜಮಾರ್ಗಕಾರನ ಕನ್ನಡ ಜಗತ್ತು ಮತ್ತು ಆಲೂರರ ಕರ್ನಾಟಕತ್ವ**

ಆಲೂರರ ಕರ್ನಾಟಕತ್ವ ಹಾಗೂ ಕವಿರಾಜಮಾರ್ಗಕಾರನ ಕನ್ನಡ ಜಗತ್ತುಗಳ ನಡುವೆ ಸಂಬಂಧವನ್ನು ಕಲ್ಪಿಸುವುದು ಅರ್ಥರಹಿತವಾದ ಪ್ರಯತ್ನವಾದರೂ ತುಂಬಾ ಕುತೂಹಲಕರ ಸಂಗತಿಯಾಗಿದೆ. ಕವಿರಾಜಮಾರ್ಗಕಾರನು ಕನ್ನಡವನ್ನು, ಕನ್ನಡ ಜಗತ್ತನ್ನು ವಸುಧೆಯೊಳಗೆ ಒಂದು ಸ್ವಾಯತ್ತ ಘಟಕವಾಗಿ ಕಲ್ಪಿಸಿಕೊಂಡಿರುವುದನ್ನು ಅನೇಕ ವಿದ್ವಾಂಸರು ಗುರುತಿಸಿದ್ದಾರೆ. ಈ ಬಗ್ಗೆ ಕೆ.ವಿ. ಸುಬ್ಬಣ್ಣ ಹೀಗೆ ಬರೆಯುತ್ತಾರೆ (೨೦೦೦):

''ಕವಿರಾಜಮಾರ್ಗವೆಂಬ ಈ ಗ್ರಂಥವು, ತನ್ನ ಕಿರು ಭಾಷೆಯ ಅಂಗೈನೆಲದಲ್ಲಿ ಪ್ರಪಂಚ ಜಗತ್ತನ್ನು ಆವಾಹಿಸಿ ಅರಗಿಸಿಕೊಂಡು ಕನ್ನಡವೆಂಬ ನಿಸ್ಸೀಮೆಯ ಪ್ರತಿ ಜಗತ್ತನ್ನು ಹೇಗೆ ಸೃಷ್ಟಿಸಿಕೊಳ್ಳಬೇಕೆಂಬುದನ್ನು ಕುರಿತು ಚಿಂತಿಸುತ್ತದೆ.'' ಕವಿರಾಜಮಾರ್ಗದಲ್ಲಿನ ಒಂದು ಕಿರು ಕಂದ ಪದ್ಯವು ಅದನ್ನು ಮನೋಜ್ಞವಾಗಿ ಬಣ್ಣಿಸುತ್ತದೆ.

ಆ ಕಂದ ಪದ್ಯ ಇದು :

ಕಾವೇರಿಯಿಂದ ಮಾ ಗೋ<br>
ದಾವರಿವರಮಿರ್ಪ ನಾಡದಾ ಕನ್ನಡದೊಳ್<br>
ಭಾವಿಸಿದ ಜನಪದಂ ವಸು<br>
ಧಾವಳಯ ವಿಲೀನ ವಿಶದ ವಿಷಯ ವಿಶೇಷಂ

ಕೆ.ವಿ. ಸುಬ್ಬಣ್ಣ ಪ್ರಸ್ತುತ ಪದ್ಯವನ್ನು ಹೀಗೆ ವಿವರಿಸಿದ್ದಾರೆ: ''ಈ ನಾಡು ಮತ್ತು ಜನಪದವು ತತ್ಕಾಲದಲ್ಲಿ ಕಾಣಿಸುತ್ತಿದ್ದ ಭೌಗೋಳಿಕ ಘಟಕವಷ್ಟೇ ಅಲ್ಲ, ಅದು ಭಾವಿತವಾದದ್ದು. ಅಂದರೆ 'ಕನ್ನಡ'ವೆಂಬುದು ಒಂದು ಚಿತ್ ಜಗತ್ತು, ಒಂದು ಕಣಸು, ದರ್ಶನ ಮತ್ತು ಇದು ವಸುಧಾ-ವಲಯ-ವಿಲೀನ-ವಿಶದ-ವಿಷಯ-ವಿಶೇಷಂ''.

''ವಸುಧಾ (ಭೂಮಿ) ಎನ್ನುವುದು ಅನಂತ ಬ್ರಹ್ಮಾಂಡದೊಳಗಿನ ಒಂದು 'ವಲಯ' ಅಷ್ಟೇ; ಮತ್ತು 'ಕನ್ನಡ'ವೆಂಬ 'ವಿಷಯ' (ನಾಡು)ವು ಆ ವಸುಧಾ ವಲಯದಲ್ಲಿ 'ವಿಲೀನ' ವಾಗಿದೆ. ಸಮರಸವಾಗಿ ಬೆರೆತುಕೊಂಡಿದೆ. ಹಾಗೆಂದ ಮಾತ್ರಕ್ಕೆ ಇದು ಸ್ವಂತಿಕೆಯ ಚಹರೆಯಿಲ್ಲದೆ ವಸುಧೆಯಲ್ಲಿ ಗುರುತು ಸಿಗದಂತೆ ಮುಳುಗಿಹೋದುದಲ್ಲ; ತನ್ನದೇ 'ವಿಶೇಷಂ' (ವೈಶಿಷ್ಟ್ಯ) ಇರುವ ನಾಡು. ಅಷ್ಟೇ ಅಲ್ಲ– ಇದು 'ವಿಶದ'ವಾದದ್ದು; ವಸುಧೆ ಅಥವಾ ಬ್ರಹ್ಮಾಂಡದಷ್ಟೇ ವ್ಯಾಪಕವಾದದ್ದು. ವಸುಧೆಯೊಳಗಿನ ಒಂದು ಕಿರು ಬಿಂದುವಾಗಿದ್ದೂ ತನ್ನೊಳಗೆ ಆ ವಸುಧೆಯನ್ನೇ ಅರಗಿಸಿಕೊಂಡಿರುವ 'ಕನ್ನಡ'ದ ಇಂಥ ಪ್ರತಿಮೆಯನ್ನು 'ಕವಿರಾಜಮಾರ್ಗ'ವು ಕಂಡರಿಸಿದೆ''. ಕನ್ನಡದೊಳಗೆ ವಸುಧೆಯು ವಿಲೀನವಾಗಿರುವ ಸಂಗತಿಯನ್ನು ಕವಿರಾಜಮಾರ್ಗಕಾರ ಹೇಳಿದ್ದರೆ ಆಲೂರರು ''ಕರ್ನಾಟಕ ಸಂಸ್ಕೃತಿಯು ಇಡೀ ಪ್ರಪಂಚವನ್ನು ಕೈವಶಮಾಡಿಕೊಂಡಿದೆ'' ಎಂದೂ ''ಕರ್ನಾಟಕವು ಭರತಖಂಡದ ಸಂಸ್ಕೃತಿಯನ್ನೆಲ್ಲ ಪಚನ ಮಾಡಿಕೊಂಡಿದೆ'' ಎಂದೂ ಹೇಳುತ್ತಾರೆ.

ಸರಿಸುಮಾರು ಸಾವಿರ ವರ್ಷಗಳ ಹಿಂದೆ ಕನ್ನಡವನ್ನು, ಕನ್ನಡವನ್ನಾಡುತ್ತಿದ್ದ ಪ್ರದೇಶವನ್ನು ಸ್ವಾಯತ್ತವಾಗಿ ಪರಿಭಾವಿಸಿಕೊಳ್ಳುವ ಚಿಂತನೆ ಇಲ್ಲಿನ ನೆಲದಲ್ಲಿ ನಡೆದಿತ್ತು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. 'ಕವಿರಾಜಮಾರ್ಗ'ದಲ್ಲಿನ ವಿಚಾರ ಮತ್ತು ಅದನ್ನು ಕೆ.ವಿ. ಸುಬ್ಬಣ್ಣ ಪರಿಭಾವಿಸಿಕೊಂಡಿರುವ ಬಗೆಗಳನ್ನು ಹಾಗೂ ಆಲೂರು ವೆಂಕಟರಾಯರು ಕರ್ನಾಟಕತ್ವ ಹಾಗೂ ಕರ್ನಾಟಕ ಸಂಸ್ಕೃತಿ ಬಗ್ಗೆ ಆಡಿರುವ ಮಾತುಗಳ ನಡುವಿನ ಸಾದೃಶ್ಯವು ನನಗೆ ಕುತೂಹಲಕಾರಿಯಾಗಿ ಕಾಣುತ್ತದೆ. ಕರ್ನಾಟಕ ಸಂಸ್ಕೃತಿ ಮತ್ತು ಭಾರತೀಯ ಸಂಸ್ಕೃತಿಗಳ ನಡುವಣ ಸಂಬಂಧ ಕುರಿತಂತೆ ಆಲೂರರು ಹೇಳುವ ಮಾತು ಹಾಗೂ ಅವರು ಕರ್ನಾಟಕತ್ವವನ್ನು ನಿರ್ವಚಿಸುವ ರೀತಿಯನ್ನು ನಾವು ಇದಕ್ಕೆ ನಿದರ್ಶನವಾಗಿ ನೋಡಬಹುದು. ಭಾರತೀಯ ಸಂಸ್ಕೃತಿಯೆಂಬುದನ್ನು ಒಪ್ಪಿಕೊಳ್ಳುವ ಆಲೂರರು ಅದು ಕರ್ನಾಟಕ ಸಂಸ್ಕೃತಿಯಿಂದ ಪುಷ್ಟಿಗೊಂಡಿದೆಯೆಂದು ತಿಳಿಯುತ್ತಾರೆ. ಅವರ ಮಾತುಗಳು ಹೀಗಿವೆ:

''ಆ (ಭಾರತೀಯ)ಸಂಸ್ಕೃತಿಗೆ ಕರ್ನಾಟಕವು ತನ್ನ 'ವಿಶಿಷ್ಟ' ಸಂಸ್ಕೃತಿಯನ್ನು ಬೆರೆಸಿ ಅದನ್ನು ಪುಷ್ಟಿಗೊಳಿಸುತ್ತದೆಯೆಂಬುದನ್ನೂ 'ವಿಶಿಷ್ಟ' ಸ್ವರೂಪವನ್ನು ಕೊಡುತ್ತದೆಂಬುದನ್ನೂ

ಯಾರೂ ಮರೆಯಕೂಡದು'' (ಪು. ೧೧). ಮುಂದುವರಿದು ಅವರು ಹೀಗೆ ಬರೆಯುತ್ತಾರೆ:

''ಕರ್ನಾಟಕವು ಭರತಖಂಡದ ಸಂಸ್ಕೃತಿಯನ್ನೆಲ್ಲ ಪಚನ ಮಾಡಿಕೊಂಡಿರುವುದಲ್ಲದೆ, ತನ್ನ 'ವಿಶಿಷ್ಟ' ಸಂಸ್ಕೃತಿಯನ್ನು ಅದರಲ್ಲಿ ಬೆರೆಸಿ ಅದನ್ನು ಮತ್ತಷ್ಟು ಪುಷ್ಟವನ್ನಾಗಿಯೂ ವ್ಯಾಪಕವನ್ನಾಗಿಯೂ ಮಾಡಿರುವುದು.'' (ಪು. ೧೬೯)

ಆಲೂರರ ಉಲ್ಲೇಖಗಳಲ್ಲಿ ಮತ್ತೆ ಮತ್ತೆ ಬರುವ 'ವಿಶಿಷ್ಟ'ವೆಂಬ ನುಡಿ ಹಾಗೂ ಕವಿರಾಜಮಾರ್ಗದಲ್ಲಿನ ಕಂದ ಪದ್ಯದಲ್ಲಿನ 'ವಿಶೇಷ'ಗಳು ಒಂದೇ ಅರ್ಥವನ್ನು ಸೂಚಿಸುತ್ತಿರುವಂತೆ ಕಾಣುತ್ತದೆ.

ಕವಿರಾಜಮಾರ್ಗಕಾರನಂತೆ ಆಲೂರರು ಕರ್ನಾಟಕವನ್ನು ವಸುಧೆಯೊಳಗೆ ಗುರುತಿಸಲು ಪ್ರಯತ್ನಿಸುತ್ತಾರೆ. ಏಕೆಂದರೆ, ಅವರ ಕರ್ನಾಟಕವು ಭರತಖಂಡವನ್ನೂ ಮತ್ತು ವಿಶ್ವವನ್ನೂ ವ್ಯಾಪಿಸಿಕೊಂಡಿರುವ ಜ್ಞಾನಕಲ್ಪವಾಗಿದೆ. ವಸುಧೆಯೊಳಗೆ ವಿಲೀನವಾಗಿದ್ದು ಕನ್ನಡ-ಕರ್ನಾಟಕವು ತನ್ನ ವಿಶೇಷ ವ್ಯಕ್ತಿತ್ವ-ಅಸ್ತಿತ್ವವನ್ನು ಉಳಿಸಿಕೊಂಡಿರುವುದನ್ನು ಕವಿರಾಜಮಾರ್ಗಕಾರನು ಹೇಳುತ್ತಿದ್ದಾನೆ ಮತ್ತು ಅದನ್ನೇ ಮತ್ತೊಂದು ಬಗೆಯಲ್ಲಿ ಆಲೂರರು ಹೇಳುತ್ತಿದ್ದಾರೆ.




ಕವಿರಾಜಮಾರ್ಗ ಮತ್ತು ಆಲೂರರ ಕರ್ನಾಟಕತ್ವದ ಮೀಮಾಂಸೆಗಳು ಇಂದಿನ ಕೇಂದ್ರ-ರಾಜ್ಯ ಸಂಬಂಧಗಳನ್ನು, ಭಾಷಾವಾರು ಪ್ರಾಂತದ ಪ್ರಶ್ನೆಯನ್ನು ಭಿನ್ನವಾದ ನೆಲೆಯಲ್ಲಿ ಅರ್ಥಮಾಡಿಕೊಳ್ಳಲು ನೆರವಾಗುತ್ತವೆ. ಆಲೂರರಾಗಲಿ ಅಥವಾ ಕವಿರಾಜ ಮಾರ್ಗದಲ್ಲಿನ ಕನ್ನಡ ಜಗತ್ತನ್ನು ಗುರುತಿಸಲು ಪ್ರಯತ್ನಿಸಿದ ಕೆ.ವಿ. ಸುಬ್ಬಣ್ಣ ಅವರಾಗಲಿ ನೇರವಾಗಿ ಒಕ್ಕೂಟ ವ್ಯವಸ್ಥೆಯ ಪ್ರಶ್ನೆಯನ್ನು ಎತ್ತುವುದಿಲ್ಲ. ಆಲೂರರು ಮತ್ತು ಕವಿರಾಜ ಮಾರ್ಗಕಾರರಿಬ್ಬರೂ ಕನ್ನಡವನ್ನೂ ಕರ್ನಾಟಕವನ್ನೂ ಭಾರತದ ಒಕ್ಕೂಟ ಹಾಗೂ ಜಾಗತಿಕ ಚೌಕಟ್ಟಿನಲ್ಲಿ ಗುರುತಿಸಲು ಪ್ರಯತ್ನಿಸಿದ್ದಾರೆ. ಇದು ತುಂಬಾ ಮುಖ್ಯ. ಕನ್ನಡ-ಕರ್ನಾಟಕದ ವಿಶಿಷ್ಟತೆ ಬಗ್ಗೆ ಇಬ್ಬರೂ ಮಾತನಾಡುತ್ತಿದ್ದಾರೆ. ಒಂದು ಪ್ರದೇಶದ ಜನಜೀವನದ ಅನನ್ಯತೆಯನ್ನು ಹೀಗೆ ರಾಜಕಾರಣದ ಚೌಕಟ್ಟಿನಲ್ಲಿ ನೋಡಿದ ಪ್ರಯತ್ನಗಳು ತುಂಬಾ ಅರ್ಥಪೂರ್ಣವಾಗಿವೆ.

ಆಲೂರರ ಕರ್ನಾಟಕತ್ವದ ಬಗ್ಗೆ ಚರ್ಚಿಸುತ್ತಾ ಡಿ. ಆರ್. ನಾಗರಾಜ್ ಅವರು ಅದರ ಮಹತ್ವವನ್ನು ಗುರುತಿಸಿದ್ದಾರೆ ('ಕನ್ನಡ ರಾಷ್ಟ್ರೀಯತೆಯ ಸ್ವರೂಪ', ಸಾಹಿತ್ಯ ಕಥನ : ೧೯೯೬:೨೭೯-೨೮೯). ಈಗಾಗಲೇ ಗುರುತಿಸಿರುವಂತೆ ಕವಿರಾಜಮಾರ್ಗಕಾರ, ಕೆ.ವಿ. ಸುಬ್ಬಣ್ಣ, ಆಲೂರು ವೆಂಕಟರಾಯರು ಒತ್ತಿ ಹೇಳಿರುವ ಕನ್ನಡ-ಕರ್ನಾಟಕದ ವಿಶಿಷ್ಟತೆಯನ್ನು ನಾಗರಾಜ್ ಅವರೂ ತಮ್ಮ ಲೇಖನದಲ್ಲಿ ಚರ್ಚಿಸಿದ್ದಾರೆ. ವಿಶಿಷ್ಟವಾಗುತ್ತಲೇ ವಿಶ್ವಾತ್ಮಕವಾಗುವ ಬಗೆಯನ್ನು ಕುರಿತಂತೆ ಡಿ. ಆರ್. ಬರೆದಿದ್ದಾರೆ. ಅವರ ಲೇಖನದ ಕೊನೆ ವಾಕ್ಯ ಹೀಗಿದೆ:

''ವಿಶಿಷ್ಟವಾಗುವ ಮೂಲಕವೇ ವಿಶ್ವಾತ್ಮಕವಾಗುವುದು ಕಷ್ಟದ ದಾರಿ. ಆದರೆ, ತಕ್ಷಣದ ಆರೋಗ್ಯಕಾರಿ ರಾಜಕಾರಣದ ದೃಷ್ಟಿಯಿಂದ ಮಾತ್ರವಲ್ಲ, ನಿಜವಾದ ಮಾನವೀಯ ವಿಕಾಸದ ದೃಷ್ಟಿಯಿಂದ ಕೂಡ ಇದು ಸರಿಯಾದ ದಾರಿ'' (೧೯೯೬:೨೮೯). ಇದು ಕೇಂದ್ರ-ರಾಜ್ಯಗಳ ನಡುವಣ ಸಂಬಂಧವನ್ನು ಸರಿಯಾಗಿ ನೋಡುವ ದೃಷ್ಟಿಕೋನ ಎಂಬುದನ್ನು ಡಿ.ಆರ್. ಇಲ್ಲಿ ಸೂಚಿಸುತ್ತಿದ್ದಾರೆ.

ಆಲೂರರ ಕರ್ನಾಟಕತ್ವ ಮೀಮಾಂಸೆಯನ್ನು ಡಿ.ಆರ್. ಆಧ್ಯಾತ್ಮಿಕ ರಾಷ್ಟ್ರೀಯತೆಯೆಂದು ಕರೆದಿದ್ದಾರೆ. ಯಾವುದೇ ಕಾರಣಕ್ಕೂ ಆಲೂರರ ವಿಚಾರಗಳನ್ನು ಹಿಂದೂ ರಾಷ್ಟ್ರೀಯತೆ ಅಥವಾ ಸಾಂಸ್ಕೃತಿಕ ರಾಷ್ಟ್ರೀಯತೆಯ ಚೌಕಟ್ಟಿನಲ್ಲಿ ಗುರುತಿಸಲು ಸಾಧ್ಯವಿಲ್ಲ. ಹಿಂದುತ್ವದ ಬಗ್ಗೆ ಆಲೂರರು ಮಾತನಾಡಿದರೂ ಅದು ಆನುಷಂಗಿಕವಾದುದು. ಸಾಮ್ರಾಜ್ಯದ ಹಂಬಲದಲ್ಲಿ ರಾಷ್ಟ್ರೀಯತೆ ಹುಟ್ಟುತ್ತದೆ ಎಂಬ ಡಿ.ಆರ್. ನಾಗರಾಜರ ಪ್ರಮೇಯವನ್ನು ಒಪ್ಪಿಕೊಂಡರೂ ಆಲೂರರ ಹಂಪಿಯ ವಿಜಯನಗರದ ಹಂಬಲವು ಸಾಮ್ರಾಜ್ಯಶಾಹಿ ಸ್ವರೂಪದ್ದಲ್ಲವೆಂಬುದು ಅವರ ಕೃತಿಯ ಸೂಕ್ಷ್ಮ ಅಧ್ಯಯನದಿಂದ ತಿಳಿಯುತ್ತದೆ. ಈ ಬಗ್ಗೆ ಡಿ.ಆರ್. ಅವರೇ ಹೇಳುವ ಮಾತುಗಳು ಅರ್ಥಪೂರ್ಣವಾಗಿವೆ. ಅವರು ಹೀಗೆ ಬರೆಯುತ್ತಾರೆ : ''...ಆಲೂರರ ಮುಖ್ಯ ಗುಣವೆಂದರೆ ತಮ್ಮ ಉಳಿದ ವಿಶಾಲ ಹಾಗೂ ಸೂಕ್ಷ್ಮ ಪರಿಕಲ್ಪನೆಗಳ ಮೂಲಕ ಆ ಹಿಂದುತ್ವವನ್ನು ಮುಚ್ಚಲು ಪ್ರಯತ್ನಿಸುತ್ತಾರೆ. ಅವರಲ್ಲಿ ಹಿಂದುತ್ವವೆಂಬುದು ವಿಶಿಷ್ಟ ಅಸ್ತಿತ್ವದ ಒಂದು ರೂಪವೇ ಹೊರತು ಏಕಮಾತ್ರ ರೂಪವಲ್ಲ'' (ಪು. ೨೮೭). ಏಕೆಂದರೆ, ಆಲೂರರು ೧೯೫೬ರಲ್ಲಿ ಕನ್ನಡಿಗರಿಗೆ ನೀಡಿದ ಸಂದೇಶದಲ್ಲಿ ನಾಡಿನ ಅಲ್ಪಸಂಖ್ಯಾತರ ಬಗ್ಗೆ ಮಾತನಾಡುತ್ತಾರೆ. ಇದನ್ನು ಡಿ.ಆರ್. ಸಹ ಗುರುತಿಸಿದ್ದಾರೆ. ಕರ್ನಾಟಕ ಸಂಸ್ಕೃತಿಗೆ ಮುಸ್ಲಿಮರ ಹಾಗೂ ಕ್ರೈಸ್ತರ ಕೊಡುಗೆ ಕುರಿತಂತೆ ಆಲೂರರು ಚರ್ಚಿಸುವುದಿಲ್ಲ ನಿಜ. ಆದರೆ ಅವರ ಕರ್ನಾಟಕತ್ವವು ಅವುಗಳನ್ನು ಒಳಗೊಳ್ಳಬಲ್ಲ ವಿಸ್ತೃತವಾದ ಪರಿಭಾವನೆಯಾಗಿದೆ. ಏಕೆಂದರೆ, ಈಗಾಗಲೇ ತಿಳಿಸಿರುವಂತೆ ಅವರ ಕರ್ನಾಟಕತ್ವ ಮೀಮಾಂಸೆಯ ಎರಡು ಪ್ರಮುಖ ಪಕ್ಷಣಗಳೆಂದರೆ ಸಂಬಂಧವಾದಿತ್ವ ಮತ್ತು ಎಲ್ಲರನ್ನೂ ಒಳಗೊಳ್ಳುವ ಗುಣ (ಕೆ. ರಾಘವೇಂದ್ರ ರಾವ್ : ೨೦೦೦: ಪು. ೧೦೮). ಬಹಳ ಕುತೂಹಲಕಾರಿಯಾದ ಸಂಗತಿಯೆಂದರೆ ಆಲೂರರು ಆ ಕಾಲಕ್ಕೆ ಕರ್ನಾಟಕತ್ವದ ಮೀಮಾಂಸೆಯನ್ನು ಕಟ್ಟುವ ದಿಶೆಯಲ್ಲಿ ಮಹಿಳೆಯರನ್ನು ತೊಡಗಿಸಲು ಪ್ರಯತ್ನಿಸುತ್ತಾರೆ (ನೋಡಿ: ಪು. ೧೨೨-೧೨೩). ಧಾರವಾಡದಲ್ಲಿ ಕರ್ನಾಟಕತ್ವವನ್ನು ಜನರಲ್ಲಿ ಒಡಮೂಡಿಸುವ ಕಾರ್ಯದಲ್ಲಿ ಮಹಿಳೆಯರನ್ನು ತೊಡಗಿಸುವ ಕೆಲಸವನ್ನು ಆಲೂರರು ೨೦ನೆಯ ಶತಮಾನದ ಆರಂಭದ ದಶಕಗಳಲ್ಲೇ ಮಾಡಲು ಪ್ರಯತ್ನಿಸಿದ್ದು ಕಂಡುಬರುತ್ತದೆ. ಕರ್ನಾಟಕ ಮಹಿಳಾ ವಿದ್ಯಾಲಯವೆಂಬ ಸಂಸ್ಥೆಯನ್ನು ಕಟ್ಟಿ ಅದರ ಕಾರ್ಯಕ್ರಮಗಳಲ್ಲಿ ಅನೇಕ ಮಹಿಳೆಯರನ್ನು ತೊಡಗಿಸುವ ಕ್ರಮ ಕಂಡುಬರುತ್ತದೆ. ಅದರ ವಾರ್ಷಿಕ ಸಮಾರಂಭಗಳಿಗೆ ಅನೇಕ ಮಹಿಳೆಯರನ್ನು ಕರೆಸಿದ್ದು ಅವರ ಲಿಂಗಸ್ಪಂದಿ ಗುಣವನ್ನು ತೋರಿಸುತ್ತದೆ. ತಮ್ಮ ಕೃತಿಯ ಉಪಸಂಹಾರ ಭಾಗದಲ್ಲಿ ಆಲೂರರು ತಮ್ಮ ಕರ್ನಾಟಕತ್ವ ಕುರಿತ ಚಳವಳಿಯಲ್ಲಿ ತಮ್ಮ ಹೆಂಡತಿ ಲಕ್ಷ್ಮೀಬಾಯಿ ಹೇಗೆ ನೆರವಾದರು ಎಂಬುದನ್ನು ಎರಡು ಪುಟಗಳಲ್ಲಿ ವಿವರಿಸಿದ್ದಾರೆ. ಅವರು ಅಲ್ಲಿ ನುಡಿದಿರುವ ''ಅವಳು ನನ್ನನ್ನು ದೇಶ ಕಾರ್ಯಕ್ಕೆ ಮೀಸಲಾಗಿ ಬಿಟ್ಟು ತಾನೇ ಬಡತನದಿಂದ ಸಂಸಾರ ಸಾಗಿಸುವ ಭಾರ ಹೊತ್ತಳು'' (ಪು. ೧೮೨) ಎಂಬ ಮಾತು ತುಂಬಾ ಅರ್ಥಪೂರ್ಣವಾಗಿದೆ. ತಾವು ಕೈಗೊಂಡ ಎಲ್ಲ ಚಟುವಟಿಕೆಗಳ ಹಿಂದಿನ ಶಕ್ತಿಯೆಂದು ಅವರು ತಮ್ಮ ಹೆಂಡತಿಗೆ ಕೃತಜ್ಞತೆಯನ್ನು ಸಲ್ಲಿಸುತ್ತಾರೆ (ಪು. ೧೮೩). ಇದು ತುಂಬಾ ಔಪಚಾರಿಕ ಸಂಗತಿಯಂತೆ ಕಂಡರೂ ಅಂದಿನ ದಿನಮಾನದಲ್ಲಿ ಬಹಳ ಅರ್ಥಪೂರ್ಣವಾದ ಸಂಗತಿಯಾಗಿ ಕಂಡುಬರುತ್ತದೆ. 'ಕನ್ನಡ ಸಂಸ್ಕೃತಿ: ನಮ್ಮ ಹೆಮ್ಮೆ' ಎಂಬ ರೀತಿಯ ಪರಿಭಾವನೆ ಅದಲ್ಲ. ''ಕರ್ನಾಟಕವೆಂದರೆ ಬೇರೆ ಬೇರೆ ಭಾಷೆಗಳನ್ನು ಮಾತನಾಡುವ ಅಲ್ಪಸಂಖ್ಯಾತರಿದ್ದಾರೆ. ಅವರ ಹಿತರಕ್ಷಣೆಯಲ್ಲೇ ಈ ರಾಜ್ಯದ ಹಿತವಿದೆ'' ಎಂಬ ಸಂಗತಿಯನ್ನು ಡಿ. ಆರ್. ಅವರು ಲಂಕೇಶ್‌ರಿಗೆ ಸಂಬಂಧಿಸಿದಂತೆ ಚರ್ಚಿಸುತ್ತಾರೆ. ಆಲೂರರೂ ಇದೇ ನೆಲೆಯಲ್ಲಿ ಕರ್ನಾಟಕತ್ವವನ್ನು ಪರಿಭಾವಿಸಿಕೊಂಡಿದ್ದಾರೆ. ಈ ಕಾರಣಕ್ಕೆ ಅವರು ಅಲ್ಪಸಂಖ್ಯಾತರ ಬಗ್ಗೆ ೧೯೫೬ರಲ್ಲಿ ಮಾತನಾಡುತ್ತಾರೆ.

**ಸಂಗ್ರಹ**

ಕರ್ನಾಟಕತ್ವವೆಂಬ ಪರಿಭಾವನೆಯನ್ನು ಹುಟ್ಟುಹಾಕಿ, ಅದಕ್ಕೆ ಸಂಬಂಧಿಸಿದ ಮೀಮಾಂಸೆಯನ್ನು ಕಟ್ಟಿ, ಅದಕ್ಕೆ ಸಂಬಂಧಿಸಿದಂತೆ ಅಕ್ಷರಶಃ ಹತ್ತಾರು ಚಳುವಳಿಗಳನ್ನು ಸಂಘಟಿಸಿ, ಅದರ ಅಮೂರ್ತ ಹಾಗೂ ಮೂರ್ತರೂಪವನ್ನು ಕಡೆದಿರಿಸಿ, ಅದನ್ನು ತಪಸ್ಸಿನಂತೆ ಧ್ಯಾನಿಸಿದ ವ್ಯಕ್ತಿ ಆಲೂರು ವೆಂಕಟರಾಯರು. ಕರ್ನಾಟಕತ್ವದ ವಿವಿಧ ಆಯಾಮಗಳನ್ನು ಕುರಿತಂತೆ ಮೊಟ್ಟಮೊದಲ ಬಾರಿಗೆ ಚಿಂತನೆ ನಡೆಸಿದವರು ಅವರು. ಅವರು ತಮ್ಮ ಕೃತಿಯಲ್ಲಿ ಈ ಬಗ್ಗೆ ವಿವರವಾಗಿ ಚರ್ಚಿಸಿದ್ದಾರೆ. ರಾಜಕಾರಣದಲ್ಲಿ ಕರ್ನಾಟಕತ್ವ, ವಾಙ್ಮಯದಲ್ಲಿ ಕರ್ನಾಟಕತ್ವ, ಧರ್ಮದಲ್ಲಿ ಕರ್ನಾಟಕತ್ವ ಮುಂತಾದ ಶೀರ್ಷಿಕೆಗಳಲ್ಲಿ ಕರ್ನಾಟಕತ್ವವನ್ನು ಒಂದು ಜ್ಞಾನ ಕಲ್ಪವಾಗಿ ಕಟ್ಟುವಲ್ಲಿ ಅವರು ನಡೆಸಿದ ಪ್ರಯತ್ನವನ್ನು ಗುರುತಿಸಬಹುದಾಗಿದೆ. ಕರ್ನಾಟಕವು ತನ್ನ ಏಕೀಕರಣದ ೫೦ನೆಯ ವರ್ಷಾಚರಣೆ ಮಾಡುತ್ತಿರುವ ಸಂದರ್ಭದಲ್ಲಿ ಆಲೂರರ ಕರ್ನಾಟಕತ್ವ ಮೀಮಾಂಸೆಯನ್ನು ಕುರಿತಂತೆ ತುಂಬಾ ವಿಸ್ತೃತವಾಗಿ ಚರ್ಚಿಸುವ ಅಗತ್ಯವಿದೆ. ಅಂತಹ ಚರ್ಚೆಗೆ ಪ್ರಸ್ತುತ ಪ್ರಬಂಧವು ಅನುವು ಮಾಡಿಕೊಡುತ್ತದೆ ಎಂದು ಭಾವಿಸಲಾಗಿದೆ.

ಡಾ|| ಟಿ. ಆರ್. ಚಂದ್ರಶೇಖರ
ಪ್ರಾಧ್ಯಾಪಕರು, ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ - ೫೮೩ ೨೭೬

# ರಂಗಭೂಮಿಯ ಅನನ್ಯ ಪ್ರತಿಭೆ ಸಿ.ಜಿ.ಕೆ.



ಬಹುಮುಖ ಪ್ರತಿಭೆಯ ಸಿ.ಜಿ.ಕೆ. ಕಳೆದ ವರ್ಷ ಸತ್ತಾಗ ಕೇವಲ ೫೮ ವರ್ಷದವರಾಗಿದ್ದರು. ಇನ್ನೂ ಸಾಧಿಸುವುದು ಬಹಳ ಇತ್ತಾದರೂ ಅದು ಸಾಕಾರಗೊಳ್ಳಲಿಲ್ಲ. ಜವರಾಯನಿಗೆ ಕರುಣೆ ಎಂಬುದಿರಲಿಲ್ಲ. ಶರಣರ ಸಾವನ್ನು ಮರಣದಲ್ಲಿ ಕಾಣು ಎಂಬಂತೆ ಚಿತ್ರದುರ್ಗದ ಸಿರಿಗೆರೆಯ ಮಠದಲ್ಲಿ ಅವರು ಸತ್ತಾಗ ಇಡೀ ನಾಡೇ ಶೋಕಿಸಿತು. 'ಬೆಲ್ಚಿ' ನಾಟಕದಿಂದ ಆರಂಭವಾಗಿ 'ಇಗೋ ಮುಗಿಲು ಆಗೋ ಪಂಜರ'ಕ್ಕೆ ಅವರ ಯಾತ್ರೆಯು ಮುಗಿಯಿತು ! ಶರೀಫರನ್ನು ಕುರಿತ 'ನಡಿಯೋ ದೇವರ ಚಾಕರಿಗೆ' ಅಲ್ಲಮಪ್ರಭುವನ್ನು ಕುರಿತ 'ಅಲ್ಲಮನಿಗೆ ನಮಸ್ಕಾರ' ನಾಟಕಗಳನ್ನು ರಂಗಕ್ಕೆ ತರಲು ಹಾತೊರೆಯುತ್ತಿದ್ದ ವೇಳೆಯಲ್ಲೇ ಜೀವನರಂಗದಿಂದ ಅವರು ನಿರ್ಗಮಿಸಿದ್ದು ವಿಷಾದದ ವಿಚಾರ. ರಾಜ್ಯ ಸಿ.ಜಿ.ಕೆ.ಯಂತಹ ಪ್ರತಿಭೆಯನ್ನು 'ಸುವರ್ಣ ಕರ್ನಾಟಕ' ವರ್ಷದಲ್ಲೇ ಕಳೆದುಕೊಂಡು ಆ ಮೂಲಕ ಬಡವಾಯಿತೇನೋ ಅನ್ನಿಸುತ್ತದೆ.

**ಹ**ವ್ಯಾಸಿ ರಂಗಭೂಮಿಯ ಚೈತನ್ಯ, ಮಿನುಗುತಾರೆ, ಸಾಮಾಜಿಕ ಸಮಸ್ಯೆಗಳ ಸ್ಪಂದನ, ಒಡಲಾಳ, ಮಹಾಚೈತ್ರಗಳ ಆಂತರಿಕ ಶಕ್ತಿಯೊಂದು ಕಣ್ಮರೆಯಾಗಿದೆ. ನಮ್ಮ ನಿಮ್ಮ ನಡುವೆಯೇ ಇದ್ದುಕೊಂಡು, ನಮ್ಮೆಲ್ಲರ ಸುಪ್ತಪ್ರಜ್ಞೆಯ ಪ್ರತೀಕವಾಗಿದ್ದ ಸಿ.ಜಿ.ಕೆ. ಇನ್ನಿಲ್ಲ ಎಂದು ಅಂದುಕೊಳ್ಳಲೇ ಆಗದ ತಬ್ಬಲಿ ಮನೋಭಾವ ಉಂಟಾಗಿದೆ.

'ಖಂಡ-'ತುಂಡ ಮಾತು'ಗಳಿಗೆ ಹೆಸರಾಗಿದ್ದ, ಯಾರನ್ನೂ ಯಾವುದನ್ನೂ ಅಪ್ಪಿಕೊಳ್ಳದ ಅಪ್ಪಿಕೊಳ್ಳದೆಯೂ ಇರದ ನಿಷ್ಠುರವಾದಿ, ಸಿ. ಜಿ. ಕೃಷ್ಣಸ್ವಾಮಿ ಮಂಡ್ಯ ನೆಲದ ನಂಟಿನೊಂದಿಗೆಯೇ ಬೆಳೆದವರು. ಅವರ ಮೂಲ ಬೇರೆಯಾಗಿದ್ದರೂ ಅವರು ಬೆಳೆದಿದ್ದು ಈ ಮಣ್ಣಿನ ಒಡಲಾಳದಲ್ಲಿ. ಹಾಗಾಗಿ ಅವರ ವ್ಯಕ್ತಿತ್ವದಲ್ಲಿ ಮಂಡ್ಯದ ಒರಟು, ನಿಷ್ಠುರತೆ ಲೀನವಾಗಿಬಿಟ್ಟತ್ತು. ಜೀವಿತದ ಕೊನೆಯವರೆವಿಗೂ ತಾನು ಕಂಡುಕೊಂಡ ಸತ್ಯದ ಮೇಲೆಯೇ ತನ್ನ ನಿಲುವುಗಳನ್ನು ಪ್ರತಿಪಾದಿಸುತ್ತಲೇ ಬಂದ ಸಿ.ಜಿ.ಕೆ. ಕೆಲವರ ಪಾಲಿಗೆ ಗಾಡ್ ! ಮತ್ತೆ ಕೆಲವರ ಪಾಲಿಗೆ ಡೆವಿಲ್ !!

ಸಮಕಾಲೀನ ಕನ್ನಡ ಹವ್ಯಾಸಿ ರಂಗಭೂಮಿಯ ನಿರ್ದೇಶಕರುಗಳಲ್ಲಿ ಸಿ.ಜಿ.ಕೆ.ಯವರಷ್ಟು ಗಮನ ಸೆಳೆದವರು ಬಹಳ ಕಡಿಮೆ. ಹೆಗ್ಗೋಡಿನ 'ನೀನಾಸಂ'ನ ಕೆ.ವಿ. ಸುಬ್ಬಣ್ಣನವರ ನಂತರ ನಾಟಕ ತಂಡವೊಂದನ್ನು ಕಟ್ಟಿ ಅದರ ಮೂಲಕ ಕನ್ನಡ, ಇಂಗ್ಲಿಷ್, ಮರಾಠಿ, ಹಿಂದಿ ಸೇರಿದಂತೆ ಹಲವು ಭಾಷೆಯ ಯಶಸ್ವಿ ರಂಗ ಪ್ರಯೋಗಗಳನ್ನು ಜನ-ಮನಕ್ಕೆ ತಲುಪಿಸಿದವರು. ಹೆಸರಿಗೆ ತಕ್ಕಂತೆ ಅವರ ನಾಟಕ ತಂಡ 'ಶಿವ ಸಂಚಾರ' ಕನ್ನಡ ರಂಗಭೂಮಿಯಲ್ಲಿ ತಾಂಡವನೃತ್ಯವನ್ನೇ ಆಡಿತು. ಆ ಮೂಲಕ ಸಿ.ಜಿ.ಕೆ. ನಾಡಿನ ಉದ್ದಗಲಕ್ಕೂ ಸಾಹಿತ್ಯಾಸಕ್ತರ, ರಂಗಭೂಮಿ ಆಸಕ್ತರ ನಾಲಿಗೆಯಲ್ಲಿ ಕುಣಿದಾಡಿದರು.

ಬ್ರೆಕ್ಟ್, ಕಾರ್ಲ್ ಮಾರ್ಕ್ಸ್, ಗಾಂಧೀಜಿ, ಅಂಬೇಡ್ಕರ್ ಅವರುಗಳ ಚಿಂತನೆಗಳಿಂದ ಪ್ರಭಾವಿತರಾಗಿದ್ದ ಸಿ.ಜಿ.ಕೆ. ಸಮಾಜವಾದಿ ಚಿಂತನೆಗಳನ್ನು ಕನ್ನಡ ಹವ್ಯಾಸಿ ರಂಗಭೂಮಿಯಲ್ಲಿ ಅಳವಡಿಸಲು ಪ್ರಯತ್ನಿಸಿದವರು. ಬಿ.ವಿ. ಕಾರಂತ, ಗಿರೀಶ್ ಕಾರ್ನಾಡರ ಅಭಿವ್ಯಕ್ತಿಗಳಿಗೆ ವಾಸ್ತವಿಕತೆಯನ್ನು ತರಲು ಅವರು ಪ್ರಯತ್ನಿಸುತ್ತಲೇ ಹೋದರು. ಹೀಗಾಗಿ ಹವ್ಯಾಸಿ ನಾಟಕ ಪರಂಪರೆಯಲ್ಲಿ ಬಿ.ವಿ. ಕಾರಂತರ ನಂತರ ಸಿ.ಜಿ.ಕೆ. ಹೆಸರು ಗಟ್ಟಿಯಾಗಿ ಕೇಳಿಬರುವಂತಾಯಿತು. ತಮ್ಮ ಸುತ್ತಲಿನ ಗಂಭೀರ ಸಮಸ್ಯೆಗಳಿಗೆ ಹಲವರನ್ನು ಕಾಡುವ, ಬಾಯಿ ಬಿಡಲಾಗದೆ ಒದ್ದಾಡುವ ಹತ್ತಾರು ಪ್ರಶ್ನೆಗಳಿಗೆ ಉತ್ತರ ನೀಡಲು ಅವರು ಪ್ರಯತ್ನಿಸಿದರು. ೭೦ರ ದಶಕದ ಸಮಾಜವಾದಿ ಚಳುವಳಿಯ ಬಿಸಿಯ ಕಾವನ್ನು ೨೧ನೇ ಶತಮಾನದ ಆದಿಯಲ್ಲೂ ತರಲು ಪ್ರಯತ್ನಿಸಿದ್ದೇ ಈ ಕಾರಣಕ್ಕಾಗಿ! ಸಮಾಜವಾದಿ ಸೋವಿಯತ್ ರಷ್ಯಾ ಪತನಗೊಂಡಿದ್ದರೂ, ಚೀನಾ ಮುಕ್ತ ಮಾರುಕಟ್ಟೆಗೆ ತೆರೆದುಕೊಳ್ಳುತ್ತಿರುವಾಗ, ಅಮೆರಿಕಾದ ಕೊಳ್ಳುಬಾಕು ಸಂಸ್ಕೃತಿಯ ವಿರುದ್ಧ, ಸಾಮ್ರಾಜ್ಯಶಾಹಿ ನೀತಿಯ ವಿರುದ್ಧ ತಮ್ಮ ರಂಗಪ್ರಯೋಗಗಳಲ್ಲಿ ಅವರು ತಮ್ಮ ಆಶಯಗಳನ್ನು ಮಂಡಿಸುತ್ತಾ ಹೋದರು.

ಹೊಸ ಚಳುವಳಿಗಳು ಹುಟ್ಟಬೇಕು, ಆಗ ಯುವ ಜನಾಂಗದಲ್ಲಿ ಹೊಸ ಆಶಯಗಳು ಹುಟ್ಟಿಕೊಳ್ಳಲು ಸಾಧ್ಯ ಎಂಬುದು ಅವರ ವಿಚಾರವಾಗಿತ್ತು. ಮನುಷ್ಯನ ಬದುಕನ್ನು ವಾಸ್ತವದ ನೆಲೆಯಲ್ಲಿ ಅರ್ಥೈಸಿಕೊಂಡಿದ್ದ ಗಾಂಧೀಜಿ ಯವರನ್ನು ಈ ದೇಶದ ಜನ ಚೆನ್ನಾಗಿ ಅರ್ಥೈಸಿಕೊಂಡಿಲ್ಲವೆಂಬುದು ಅವರ ಅಭಿಮತವಾಗಿತ್ತು. ಐಷಾರಾಮದ ಬದುಕೇ ನಿಜವಾದ ಬದುಕು, ಎಂಬ ವ್ಯವಸ್ಥೆಯ ದೋಷವನ್ನು ಸರಿಪಡಿಸದ ಹೊರತು ಯುವಕರಿಗೆ ಜ್ಞಾನದ ಹಸಿವು ಹೆಚ್ಚಾಗಲಾರದೆಂದು ಅವರು ಪ್ರತಿಪಾದಿಸುತ್ತಿದ್ದರು. ಈ ಹಿನ್ನೆಲೆಯಲ್ಲಿ ಅವರು ಮಂಡ್ಯದ ಶಿವಪುರ ಧ್ವಜ ಸತ್ಯಾಗ್ರಹದ ಸ್ಥಳದಿಂದ ಬೆಂಗಳೂರಿನವರೆಗೆ 'ಅಂದು ದಂಡಿಯಾತ್ರೆ ಇಂದು ಸ್ನೇಹಯಾತ್ರೆ' ಎಂಬ ಕಾರ್ಯಕ್ರಮವನ್ನು ರೂಪಿಸಿದ್ದರು.

೧೯೭೭ರಲ್ಲಿ ಜನ್ಮತಳೆದ 'ಶಿವಸಂಚಾರ' ನಾಟಕ ತಂಡದ ಮೂಲಕ ತಮ್ಮ ಅಭಿವ್ಯಕ್ತಿಯನ್ನು ಸಾಕಾರಗೊಳಿಸಲು ಅವರು ಯತ್ನಿಸಿದರು. ದೈಹಿಕವಾಗಿ ಸಿ.ಜಿ.ಕೆ. ಅಂಗವಿಕಲರಾಗಿದ್ದರು, ಆದರೆ ಮಾನಸಿಕವಾಗಿ, ಬೌದ್ಧಿಕವಾಗಿ ಆರೋಗ್ಯಪೂರ್ಣರಾಗಿದ್ದರು. ಅವರ ಉತ್ಸಾಹ, ಚಿಂತನೆಯ ಧಾಟಿ, ಕ್ರಿಯಾಶೀಲತೆ, ತಾಯ್ತನ, ಸಂಘಟನಾ ಚಾತುರ್ಯ, ಕನಸುಗಾರಿಕೆ ಎಲ್ಲರನ್ನೂ ಬೆರಗುಗೊಳಿಸುವಂತಿತ್ತು. ಆದ್ದರಿಂದ ಅವರನ್ನು ಹತ್ತಿರದಿಂದ ಕಂಡವರೆಲ್ಲರೂ 'ಸಿ.ಜಿ.ಕೆ.' ಎಂದಾಗ ಹೇಳುತ್ತಿದ್ದುದು. ''C, for Courage, 'G' for Genius and 'K' for Kindness ಎಂದು ಧೈರ್ಯ, ಜಾಣ್ಮೆ, ದಯಾಳು ಗುಣದ ಮೂರ್ತಿಯಾಗಿದ್ದರು ಅವರು. ಸಾಣೇಹಳ್ಳಿಯ ಪಂಡಿತಾರಾಧ್ಯ ಶ್ರೀಗಳ ಒಡನಾಟ ಹೆಚ್ಚಾದ ಮೇಲಂತೂ ಅವರು ಸ್ವಾಮೀಜಿಗಳಲ್ಲಿದ್ದ ದಯಾಗುಣಗಳನ್ನು ತಮ್ಮಲ್ಲಿ ಮೈದುಂಬಿಸಿ ಕೊಂಡಿದ್ದರು. 'ಸಿ.ಜಿ.ಕೆ.' ಅವರ ಆತ್ಮಕಥನ 'ಕತ್ತಲೆ ಬೆಳದಿಂಗಳೊಳಗೆ...!' ಓದಲೇಬೇಕಾದ ಒಂದು ಕಥನ ಕಾವ್ಯ. ಬದುಕಿನ ವಿಭಿನ್ನ ಸವಾಲುಗಳನ್ನು ಛಲತೊಟ್ಟು ಎದುರಿಸಿದ ರಂಗತಂತ್ರಜ್ಞನ ಆತ್ಮಕಥನವದು ! ಅಂಗವಿಕಲನೊಬ್ಬನ ಮನಃಸ್ಥಿತಿಯನ್ನು ಸಾದರಗೊಳಿಸುವ ಕೃತಿ ಅದು. ಆದ್ದರಿಂದಲೇ ಸಿ.ಜಿ.ಕೆ. ಇನ್ನಿಲ್ಲವಾದ ಆ ದಿನ ಬಹುತೇಕ ಪತ್ರಿಕೆಗಳು 'ಕತ್ತಲೊಳಗೆ ಲೀನವಾದ ಸಿ.ಜಿ.ಕೆ.' ಎಂದೇ ವ್ಯಾಖ್ಯಾನಿಸಿದವು.

ಬಲ್ಲೇನಹಳ್ಳಿ ಮಂಜುನಾಥ್

ವಿದ್ಯಾರ್ಥಿದೆಸೆಯಿಂದಲೇ ಮುಂದಾಳತ್ವ ಪ್ರವೃತ್ತಿಯನ್ನು ಅವರು ರೂಢಿಸಿಕೊಂಡಿದ್ದರು. ೧೯೭೪ರಲ್ಲಿ ನೋಡಿದ 'ಹುತ್ತವ ಬಡಿದರೆ' ಎಂಬ ನಾಟಕ ಅವರ ಮೇಲೆ ಪ್ರಭಾವ ಬೀರಿತು. ಇದರ ಪ್ರಭಾವದಿಂದ ನಾಟಕರಂಗಕ್ಕೆ ಬಂದ ಸಿ.ಜಿ.ಕೆ. ಮುಂದೆ ಹತ್ತು ಹಲವಾರು ರಂಗಪ್ರಯೋಗ ನಡೆಸಿದರು. ಕಾರಂತ, ಕಾರ್ನಾಡ, ಲಂಕೇಶ, ಕೆ.ವಿ.ನಾರಾಯಣ ಸೇರಿದಂತೆ ಹಲವರೊಂದಿಗೆ ಆರೋಗ್ಯಪೂರ್ಣ ಜಗಳ ನಡೆಸಿದರು. ಗುಂಡಿನ ವ್ಯಾಮೋಹಕ್ಕೆ ಬಲಿಯಾಗಿ, ಸಿಗರೇಟಿನ ಹೊಗೆಗೆ ಶರಣಾಗಿ ಅದರಿಂದ ಹೊರಬರಲಾರದೆ ಒದ್ದಾಡಿದರು. ಹಾಗೆಯೇ ನೂರಾರು ತಂತ್ರಜ್ಞರನ್ನು, ನಟರನ್ನು ಕಲಾವಿದರನ್ನು ಕಲಾಕ್ಷೇತ್ರಕ್ಕೆ ತಂದುಬಿಟ್ಟು ನಡೆದೇಬಿಟ್ಟರು!

ಸಿ.ಜಿ.ಕೆ. ಹುಟ್ಟಿದ್ದು ಮಂಡ್ಯ ನಗರದಲ್ಲಿ. ೧೯೫೦ರ ಜೂನ್ ೨೭ರಂದು ಜನಿಸಿದ ಅವರ ಪ್ರಾಥಮಿಕ ಅಭ್ಯಾಸ ಮಂಡ್ಯದಲ್ಲಿಯೇ ನಡೆಯಿತು. ಮೂರು ವರ್ಷದ ಮಗುವಾಗಿದ್ದಾಗ ಪೋಲಿಯೋ ರೋಗಕ್ಕೆ ತುತ್ತಾದರೂ, ಛಲಬಿಡದ ಅವರ ಮನೋಭಾವ ಅವರನ್ನು ಎತ್ತರೆತ್ತರಕ್ಕೆ ಕೊಂಡೊಯ್ದಿತು, ಬೆಂಗಳೂರು ವಿಶ್ವವಿದ್ಯಾಲಯದ ಪ್ರಭಾವಶಾಲಿ ಅಧ್ಯಾಪಕರನ್ನಾಗಿ, ಅವರನ್ನು ರೂಪಾಂತರಿಸಿತು. ನಾಟಕದ ಗೀಳು, ಗಾಂಧಿ, ಮಾರ್ಕ್ಸ್ ಮೇಲಿನ ಪ್ರೇಮ ಚಿಂತಕನನ್ನಾಗಿ ಮಾಡಿತು!

ಸಿ.ಜಿ.ಕೆ. ರಚಿಸಿದ ನಾಟಕಗಳು ಹಲವಾರು. ರಂಗ ಪ್ರಯೋಗಗಳನ್ನು ಕಂಡಂಥವು ನೂರಾರು! ಅವರು ನಿರ್ದೇಶಿಸಿದ ರಂಗದಲ್ಲಿ ಭಾರೀ ಜನಮನ್ನಣೆ ಗಳಿಸಿದ ಮಹಾಚೈತ್ರ, ಒಡಲಾಳ, ಯಯಾತಿ, ಸುಲ್ತಾನ್ ಟಿಪ್ಪು, ಶೇಕ್ಸ್‌ಪಿಯರ್‌ನ ಸ್ವಪ್ನನೌಕೆ, ಜೂಲಿಯಸ್ ಸೀಸರ್, ತುಘಲಕ್, ಕುಸುಮಬಾಲೆ, ವೈಶಂಪಾಯನ ತೀರ, ಅಂಬೇಡ್ಕರ್, ರುಡಾಲಿ, ಶೋಕಚಕ್ರ, ಒಥೆಲೊ, ದಂಡ... ಅವರಿಗೆ ಅಪಾರ ಪ್ರಮಾಣದ ಯಶಸ್ಸು ಕೀರ್ತಿ, ಹಣ, ಪ್ರಶಸ್ತಿ ತಂದುಕೊಟ್ಟವು.

ಸಿ.ಜಿ.ಕೆ. ಬರೆದಿದ್ದೂ ಕೂಡ ಬಹಳ : ೧೯೭೮ರಲ್ಲಿ ಬರೆದ 'ಬೆಲ್ಚಿ' ನಾಟಕ ಅವರ ಪ್ರಥಮ ನಾಟಕ. ಬೀದಿ ನಾಟಕಗಳಾದ ಸೈಕ್ಲೋನ್, ಪಂಚತಾರ, ಮೇ ಡೇ, ಅಲ್ಲೇ ಇದ್ದೋರು, ದೇವನೂರು ಮಹಾದೇವರ ನೀಳ್ಗತೆ ಒಡಲಾಳದ ರೂಪಾಂತರ ನಾಟಕ ಒಡಲಾಳ, ಯಶವಂತ ಚಿತ್ತಾಲರ ಕತೆಯ ರೂಪಾಂತರ ಅಬೋಲಿನ... ಹೀಗೆ ಹತ್ತು ಹಲವು! 'ಶಿವಸಂಚಾರ' ತಂಡ ಉದಯಿಸಿದ ನಂತರವಂತೂ ಅವರು ನಾಟಕಗಳನ್ನು ಬರೆದರು, ರೂಪಾಂತರಿಸಿದರು, ಪ್ರದರ್ಶಿಸಿದರು, 'ಬೆಳ್ಳಿ'ಯಂತೆ ಬಾನಂಗಳದಲ್ಲಿ ಕಂಗೊಳಿಸುತ್ತಲೇ ಇಹಲೋಕ ತ್ಯಜಿಸಿದರು.

ಸಿನಿಮಾರಂಗದೊಂದಿಗೂ ನಿಕಟ ಸಂಬಂಧ ಹೊಂದಿದ್ದರು. ಸೂಪರ್‌ಹಿಟ್ ಚಿತ್ರಗಳಾದ ಸಾಂಗ್ಲಿಯಾನ, ವೀರಪ್ಪನ್ ಚಿತ್ರಗಳಿಗೆ ಕಥೆ, ಚಿತ್ರಕಥೆ, ಸಂಭಾಷಣೆಯನ್ನೂ ಅವರು ಬರೆದಿದ್ದರು ಎಂಬುದು ಬಹುತೇಕ ಜನರಿಗೆ ತಿಳಿದಿಲ್ಲ. 'ಭುಜಂಗಯ್ಯನ ದಶಾವತಾರ' ಚಿತ್ರಕ್ಕೆ ಸಹನಿರ್ದೇಶಕರಾಗಿಯೂ ಅವರು ಕೆಲಸ ಮಾಡಿದ್ದರು.

ಸಿ.ಜಿ.ಕೆ.ಯವರಿಗೆ ಹತ್ತು ಹಲವು ಪ್ರಶಸ್ತಿಗಳು ಅರಸಿಕೊಂಡು ಬಂದಿದ್ದವು. ೧೯೯೬ರಲ್ಲಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ೧೯೯೦ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿ, ಶಿವರಾಮ ಕಾರಂತ ಪ್ರಶಸ್ತಿ, ಸಾಹಿತ್ಯ ಅಕಾಡೆಮಿ ಪ್ರಶಸ್ತಿ... ಹೀಗೆ ಅದರ ಉದ್ದನೆಯ ಪಟ್ಟಿ ಬೆಳೆಯುತ್ತಾ ಹೋಗುತ್ತದೆ.

ಇಂತಹ ಬಹುಮುಖ ಪ್ರತಿಭೆಯ ಸಿ.ಜಿ.ಕೆ. ಕಳೆದ ವರ್ಷ ಸತ್ತಾಗ ಕೇವಲ ೫೪ ವರ್ಷದವರಾಗಿದ್ದರು. ಇನ್ನೂ ಸಾಧಿಸುವುದು ಬಹಳ ಇತ್ತಾದರೂ ಅದು ಸಾಕಾರಗೊಳ್ಳಲಿಲ್ಲ. ಜವರಾಯನಿಗೆ ಕರುಣೆ ಎಂಬುದಿರಲಿಲ್ಲ. 'ಶರಣರ ಸಾವನ್ನು ಮರಣದಲ್ಲಿ ಕಾಣು' ಎಂಬಂತೆ ಚಿತ್ರದುರ್ಗದ ಸಿರಿಗೆರೆಯ ಮಠದಲ್ಲಿ ಅವರು ಸತ್ತಾಗ ಇಡೀ ನಾಡೇ ಶೋಕಿಸಿತು. 'ಬೆಲ್ಚಿ' ನಾಟಕದಿಂದ ಆರಂಭವಾಗಿ 'ಇಗೋ ಮುಗಿಲು ಅಗೋ ಪಂಜರ'ಕ್ಕೆ ಅವರ ಯಾತ್ರೆಯು ಮುಗಿಯಿತು! ಶರೀಫರನ್ನು ಕುರಿತ 'ನಡಿಯೋ ದೇವರ ಚಾಕರಿಗೆ' ಅಲ್ಲಮಪ್ರಭುವನ್ನು ಕುರಿತ 'ಅಲ್ಲಮನಿಗೆ ನಮಸ್ಕಾರ' ನಾಟಕ ಗಳನ್ನು ರಂಗಕ್ಕೆ ತರಲು ಹಾತೊರೆಯುತ್ತಿದ್ದ ವೇಳೆಯಲ್ಲೇ ಜೀವನರಂಗದಿಂದ ಅವರು ನಿರ್ಗಮಿಸಿದ್ದು ವಿಷಾದದ ವಿಚಾರ. ರಾಜ್ಯ ಸಿ.ಜಿ.ಕೆ.ಯಂತಹ ಪ್ರತಿಭೆಯನ್ನು 'ಸುವರ್ಣ ಕರ್ನಾಟಕ' ವರ್ಷದಲ್ಲೇ ಕಳೆದುಕೊಂಡು ಆ ಮೂಲಕ ಬಡವಾಯಿತೇನೋ ಅನ್ನಿಸುತ್ತದೆ.

**ಬಲ್ಲೇನಹಳ್ಳಿ ಮಂಜುನಾಥ್**
ಕೆ. ಆರ್. ಪೇಟೆ, ಬಲ್ಲೇನಹಳ್ಳಿ ಅಂಚೆ
ಬೂಕಿನಕೆರೆ ಮಾರ್ಗ, ಮಂಡ್ಯ ಜಿಲ್ಲೆ



# ಉದುರಿದ ಎಲೆಗಳು

ಹೌದು
ನಾನು ನಿನ್ನ
ಮದುವೆಗೆ ಬರುವುದಿಲ್ಲ.
ಏಕೆಂದರೆ ನನ್ನ ಕಣ್ಣೀರಿನಲ್ಲಿ
ನೆನೆದ ಅಕ್ಷತೆಯ ನಿನ್ನ ಮೇಲೆರಚಲು
ನನಗೆ ಇಷ್ಟವಿಲ್ಲ!

ಹೌದು
ನೀನು ಹೀಗಳೆಯುತ್ತೀಯ ಎಂದು
ನನಗೆ ಗೊತ್ತು
ನನ್ನ ಕಣ್ಣೀರಿನಲಿ ನಿನ್ನ
ಪ್ರತಿಬಿಂಬವನು ನೋಡಲಿಕ್ಕಾದರೂ...

ಹೌದು
ಬರಬಹುದಿತ್ತು ನನ್ನ
ಚೂರುಚೂರಾದ ಮನದಲಿ
ನಿನ್ನ ಅಸಂಖ್ಯಾತ ಮುಖಗಳು ನಕ್ಕು
ಗುಟ್ಟು ರಟ್ಟಾದೀತೆಂಬ ಭಯ

ಇರಲಿ,
ನಿನ್ನ ಮನದಲಿ ಬೇರುಬಿಟ್ಟು
ಮತ್ತಾರಲ್ಲೊ ಚಿಗುರುತ್ತಿದ್ದೇನೆ
ಆದರೆ
ಅದು ಮರವಾಗಿಬಿಡುವ
ಫಲ ಮಾತ್ರ ನಿನ್ನದು

ವೈ. ಎಂ. ಶರಣಬಸವ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಕಮಲಾಪುರ - ೫೮೩ ೨೭೬



# ಅಂಬೂತಾಯಿ ಪುರಾಣೋಪಾಖ್ಯಾನ

ನನ್ನ ಕೇಳೋದಾದ್ರೆ ನೀವಿಬ್ರೂ ಒಂದು ಸಲ ಅಂಬೂರಿಗೆ ಹೋಗಿ ಆ ತಾಯಿಯ ದರ್ಶನ ಮಾಡಿಕೊಂಡು ಬರೋದು ಒಳ್ಳೆಯದು'' ಅಂದ ಲೋಕೇಶ್. ಅವನು ಇಂದೂನ ಅಣ್ಣ. ಅವಳ ತಳಮಳ ನೋಡಲಾಗದೆ ಹೀಗೆ ಹೇಳಿರಬಹುದು ಎಂಬುದು ನರಹರಿಯ ಊಹೆ. ಅಂಬೂರು ಸದ್ಯ ತುಂಬ ಪ್ರಸಿದ್ಧಿ ಪಡೆದ ಕ್ಷೇತ್ರ. ಅಲ್ಲಿಯ ಅಧಿದೇವತೆ ಅಂಬೂತಾಯಿ. ಗೆಳೆಯ ಸುರೇಶ ಹೇಳುವಂತೆ ಒಂದೊಂದು ಸಲ ಒಬ್ಬೊಬ್ಬ ದೇವರು ಜಾಕ್‌ಪಾಟ್ ಹೊಡೆಯುತ್ತಾರೆ. ಹಾಗೆ ಈಗ ಅಂಬೂತಾಯಿ ಎಲ್ಲ ದೇವರನ್ನೂ ಹಿಂದೆ ಹಾಕಿ ಸದ್ಯ ಚಲಾವಣೆಯಲ್ಲಿರುವ ದೇವತೆ. ಜನ ಸಹ ಅಂಬೂತಾಯಿಯನ್ನು ಯಾವ ಪರಿ ನಂಬಿದ್ದಾರೆಂದರೆ ತಮ್ಮದೊಂದು ಸಣ್ಣ ಸಮಸ್ಯೆಯನ್ನೂ ಆಕೆ ಪರಿಹರಿಸಬಲ್ಲಳು ಎಂದುಕೊಂಡಿದ್ದಾರೆ. ಹಾಗಾಗಿ ಕೆಟ್ಟ ಕನಸು ಬಿದ್ರೂ ಸಾಕು ಅಮ್ಮಾ-ತಾಯಿ ಎಂದೇ ಒರಲುತ್ತ ಅಂಬೂರಿಗೆ ಹೊರಟೇಬಿಡುತ್ತಾರೆ. ಈ ಜನಗಳು ಅತಿಯಾದ ಸ್ವಾರ್ಥಿಗಳೋ ಅಥವಾ ದೇವರೇ ಮಾನವ ಕೋಟಿಯನ್ನು ಉದ್ಧರಿಸಲಿಕ್ಕಾಗಿ ಈಗಲೂ ಜನ್ಮ ಎತ್ತುತ್ತಲೇ ಇದ್ದಾನೋ, ಅವನ ಒಂದೊಂದು ಜನ್ಮಕ್ಕೂ ಅವನದೇ ಆದ ಹಳೆಯ ಅವತಾರಗಳು ಜನರಿಗೆ ಮರೆತುಹೋಗುತ್ತ ಹೊಸ ದೇವರನ್ನು ಆರಾಧಿಸುವ ಪ್ರವೃತ್ತಿ ಬೆಳೆಯುತ್ತಿದೆಯೋ ಅಥವಾ ದೇವರ ಮೇಲಿನ ನಿಷ್ಠೆಯನ್ನು ಪದೇಪದೇ ಬದಲಾಯಿಸುವುದೇ ನಮ್ಮವರ ಸ್ವಭಾವವೋ – ಒಂದೂ ಅರ್ಥವೇ ಆಗದೆ ಈಗ ನರಹರಿ ಯಾವ ದೇವರನ್ನೂ ನಂಬದಂತಹ ಪರಿಸ್ಥಿತಿಗೆ ಬಂದು ತಲುಪಿಬಿಟ್ಟಿದ್ದಾನೆ.

ಅಂಬೂರು ಅಂದ್ರೆ ಅಂಬೂತಾಯಿ ಊರು. ಈಗ ಬರೀ ಹತ್ತು-ಹನ್ನೆರಡು ವರ್ಷಗಳ ಹಿಂದೆ ಕುಗ್ರಾಮ ಎನಿಸಿಕೊಂಡಿದ್ದ ಅಂಬೂರು ಈ ಕ್ಷಿಪ್ರ ಅವಧಿಯೊಳಗೆ ದೊಡ್ಡ ಊರಾಗಿ ಬೆಳೆಯಲು ತಾಯಿಯ ಮಹಿಮೆಯೇ ಕಾರಣ ಎಂದು ನಂಬಿಕೆ ಗಾಢವಾಗಿ ಹರಡುವಷ್ಟರಮಟ್ಟಿಗೆ ಆಕೆಯ ಪ್ರಭಾವ ವಲಯ ವಿಸ್ತರಿಸಿದೆ. ಈಗ ಅಲ್ಲಿ ದಕ್ಷ ಪುರಸಭೆ ಇದೆ. ಕ್ಷೇತ್ರದ ಅಭಿವೃದ್ಧಿಗೆ ಶ್ರಮಿಸುತ್ತಿದೆ. ವಿಶಾಲವಾದ ಬಸ್‌ನಿಲ್ದಾಣ. ಆಸ್ಪತ್ರೆಗಳು ಹೊಸದಾಗಿ ನಿರ್ಮಾಣಗೊಂಡಿವೆ. ನದಿಗೆ ಈಗ ಸೇತುವೆ ಆಗಿರುವುದರಿಂದ ವರ್ಷವಿಡೀ ಯಾತ್ರಿಕರು ವಾಹನಗಳಲ್ಲಿ ಅಂಬೂರಿಗೆ ಧಾವಿಸುತ್ತಿದ್ದಾರೆ. ನಿಯಮಿತ ಬಸ್‌ಗಳಲ್ಲದೆ ವಿಶೇಷ ದಿನಗಳಲ್ಲಿ ಹೆಚ್ಚುವರಿ ಬಸ್‌ಗಳನ್ನು ಸಂಯೋಜಿಸಲಾಗುತ್ತಿದೆ. ತೆವಲಿದ್ದಾಗ ರಾಜಕಾರಣಿಗಳಿಗೂ ತಾಯಿಯ ಆಶೀರ್ವಾದ ಬೇಕು.

ಈಗ ಯಾರು ತಮಗೆ ಏನು ಬೇಕೆನಿಸಿದರೂ ಅಂಬೂತಾಯಿಗೆ ಮೊರೆಹೋಗುತ್ತಾರೆ. ಎಲ್ಲರ ಮನೆಗಳಲ್ಲಿ ಹಳೆಯ ದೇವರುಗಳೆಲ್ಲ ಆಚೀಚೆ ಸರಿದು ಅಂಬೂತಾಯಿಯ ಫೋಟೋಕ್ಕೆ ವಿಗ್ರಹಕ್ಕೆ ಸ್ಥಳದಾನ ಮಾಡಿವೆ. ಮನೆಮನೆಗಳಲ್ಲಿ ತಾಯಿಯ ಭಜನೆ, ವ್ರತ ಸಾಗಿದೆ. ತಾಯಿಯ ಜೀವನ ಚರಿತ್ರೆ ಆಧರಿಸಿ ಬರೆದ ಅಂಬೂತಾಯಿ ಪುರಾಣ ಮಹಾತ್ಮೆಯನ್ನು ಜನ ಶ್ರದ್ಧಾಭಕ್ತಿಗಳಿಂದ ಪಾರಾಯಣ ಮಾಡುತ್ತಾರೆ. ಇತ್ತೀಚೆಗೆ ಕ್ಷೇತ್ರಕ್ಕೆ

**ರಾಮಚಂದ್ರ ಭಾವೆ**

ಭಕ್ತಾದಿಗಳನ್ನು ಆಹ್ವಾನಿಸುವ ಜಾಹೀರಾತುಗಳು ಪತ್ರಿಕೆಗಳಲ್ಲಿ, ಟಿವಿಗಳಲ್ಲಿ ಒಂದೇ ಸಮ ಕಾಣಿಸಿಕೊಳ್ಳುತ್ತಲೇ ಇವೆ. ತಾಯಿಯ ಮಹಿಮೆ ಊರಿಂದ ಊರಿಗೆ ಹರಡುತ್ತ ಅಂಬೂರು ಹೊರರಾಜ್ಯಗಳ ಭಕ್ತರುಗಳನ್ನು ಸೂಜಿಗಲ್ಲಿನಂತೆ ಸೆಳೆಯತೊಡಗಿದೆ.

''ನಾವು ಇಷ್ಟು ಹತ್ತಿರವಿದ್ರೂ ಒಂದುಸಲವೂ ಅಂಬೂರಿಗೆ ಹೋಗಿಲ್ಲ. ಸಾವಿರಾರು ಜನ ತಾಯಿಯ ದರ್ಶನ ಮಾಡಿ ತಮ್ಮ ಬಯಕೆಗಳನ್ನು ಈಡೇರಿಸಿಕೊಳ್ತಿದಾರೆ. ನಾವೂ ಹೋಗಿ ನಮ್ಮ ನೋವು ನಿವೇದಿಸಿಕೊಂಡ್ರೆ ತಪ್ಪೇನು !'' ಇಂದೂದು ಒಂದೇ ರಾಗ. ಅವಳೂ ಸಹ ಈಗ ದೇವರ ಮೇಲಿನ ನಿಷ್ಠೆಯನ್ನು ಬದಲಾಯಿಸುವ ತರಾತುರಿಯಲ್ಲಿರುವಂತೆ ನರಹರಿಗೆ ಭಾಸ.

''ನೋಡು, ಯಾವ್ಯಾವ ದೇವರಿಗೆ ಅಂತ ಹರಕೆ ಹೊರ್ತೀಯ ! ಮಕ್ಕಳಾಗೋದು ನಮ್ಮ ಯೋಗದಲ್ಲಿದ್ರೆ ಆಗುತ್ತೆ ಬಿಡು. ಆಗುತ್ತೆ ಅಂತ ಡಾಕ್ಟರೂ ಭರವಸೆ ಕೊಟ್ಟಿದ್ದಾರಲ್ಲ.''

ಗಂಡನ ಉಪೇಕ್ಷೆ ಅವಳಿಂದ ಸಹಿಸಲಾಗಲಿಲ್ಲ. 'ಊಹುಂ ಹೋಗೋಣ' ಅವಳದು ಒಂದೇ ಹಟ.

''ನೋಡು - ನನಗೆ ಇಂಥಾದ್ರಲ್ಲೆಲ್ಲ ನಂಬಿಕೆ ಇಲ್ಲ'' ಅವನು ಸಮಾಧಾನದಿಂದ ಹೇಳಿದ.

''ನೀವು ದೇವರಲ್ಲಿ ನಂಬಿಕೆ ಇಡಿ ಅಂತ ನಾನು ಕೇಳೋದಿಲ್ಲ. ನನ್ನ ಜತೆ ದೇವಸ್ಥಾನಕ್ಕೆ ಬನ್ನಿ ಸಾಕು.''

''ನೀನು ಬೇಕಾದ್ರೆ ನಿನ್ನ ಅಣ್ಣ ಅತ್ತಿಗೆ ಜತೆ ಹೋಗಿ ಬಾ.''

''ಊಹುಂ - ಮಕ್ಕಳು ಬೇಕೆನ್ನುವವರು ದಂಪತಿ ಸಮೇತಾನೇ ಅಂಬೂರಿಗೆ ಹೋಗಬೇಕಂತೆ.''

ನರಹರಿ ಮರುಮಾತಾಡದೆ ನಿಂತ. ಇಷ್ಟೆಲ್ಲ ಮಾತಾಡಲು ಇಂದೂಗೆ ಕಲಿಸಿದವರ್‍ಯಾರು ! ಒಂದುಸಲ ಈ ಹೆಂಗಸರಿಗೆ ಹಟಮಾಡೋದು ರೂಢಿಯಾಗಿಬಿಟ್ಟಿತೆಂದರೆ ಆಮೇಲೆ ಅವರು ಯಾವ ಮಾತಿಗೂ ಬಗ್ಗೋರೇ ಅಲ್ಲ ಎನ್ನುವ ಅಂಶ ಮಾತ್ರ ಮನದಟ್ಟಾಯಿತು. ಸುಮ್ಮನಾದ. ಅವನ ಮೌನ ಅವಳ ಭಾವನೆಗಳನ್ನು ಕೆಣಕಿರಬೇಕು. ತಲೆತಗ್ಗಿಸಿ ಬಿಕ್ಕಿದಳು. ಅವಳ ದುಗುಡ ಕಂಡವನೇ ನರಹರಿ ತಕ್ಷಣ ಮೃದುವಾದ. ಅವಳನ್ನು ಸಮಾಧಾನಗೊಳಿಸಲು ಅವನು ಅನುವಾಗುವ ಮೊದಲೇ ದುಃಖದ ನಡುವೆ ಇಂದು ಹೇಳಿದಳು, ''ನಿಮ್ಮ ಈ ಮನೋಭಾವದಿಂದಲೇ ನಮಗೆ ಮಕ್ಕಳಾಗ್ತಾ ಇಲ್ಲವೋ ಏನೋ.''

ನರಹರಿ ಅಧೀರನಾದ. ಇಂದು ಎಂದೂ ಹೀಗೆ ಮಾತಾಡಿದವಳೇ ಅಲ್ಲ. ಅವಳತ್ತ ಕರುಣೆಯಿಂದ ನೋಡಿದ. ಈ ಮಾತು ಅವಳ ಮನಸ್ಸಿನಿಂದ ಆಡಿದ್ದಲ್ಲ, ಅಸಹಾಯಕತೆಯಿಂದ, ನಿಯಂತ್ರಣಮೀರಿ ಬಂದದ್ದು ಎಂದವನಿಗೆ ಗೊತ್ತಾಗದೆ ಇಲ್ಲ. ಹಾಗಾಗಿ ಹೆಂಡತಿಯ ಮೇಲೆ ಅವನಿಗೆ ಬೇಸರವೇನೂ ಆಗಲಿಲ್ಲ. ಪಾಪ, ಅವಳದೇನು ತಪ್ಪು - ಒಂದು ಮಗುವನ್ನು ಹೊಂದಲಾಗದ ತಪ್ಪಿಗೆ ಎಷ್ಟೆಲ್ಲ ಬಾಯಿಗಳಿಗೆ ಇಂದು ಆಹಾರವಾಗಿದ್ದಾಳೋ ಎಷ್ಟೆಲ್ಲ ಮೂದಲಿಕೆಗಳನ್ನು ಸಹಿಸಿದ್ದಾಳೋ.

ದೇವರ ಬಗ್ಗೆ ತನಗಿರುವ ಕಲ್ಪನೆಗಳೇ ಬೇರೆ ಎಂದು ಇವಳಿಗೆ ಯಾವ ರೀತಿ ತಿಳಿಸಿ ಹೇಳುವುದೋ ನರಹರಿಗೆ ಗೊಂದಲ. ಅವನ ದೃಷ್ಟಿಯಲ್ಲಿ ದೇವರು ಅನ್ನುವುದು ಒಂದು ಅಪಾಯಕಾರಿ ಅಸ್ತ್ರ. ಅದೀಗ ಜನರ ಕೈಗೆ ಸುಲಭವಾಗಿ ಸಿಗುತ್ತಿದೆ. ಅಂತಲೇ ಇಷ್ಟೆಲ್ಲ ಅನಾಹುತಗಳು, ಅಪಘಾತಗಳು ಆಗ್ತಿರೋದು. ಆತ್ಮವಿಶ್ವಾಸದ ಕೊರತೆ ಇರೋರಿಗೆ ನಿಲ್ಲಲು ದೇವರ ಆಧಾರ ಬೇಕಾಗುತ್ತದೆ ಎನ್ನುವುದೇನೋ ಸರಿ. ದೇವರಿಗೆ ಶರಣಾಗ ಬೇಕು ಅನ್ನೋದನ್ನೂ ಒಪ್ಪಬಹುದು. ತಲೆ ಬೋಳಿಸಿಕೊಳ್ಳೋದು, ಅಂಗಿ ತೆಗೆಯೋದು ಇತ್ಯಾದಿ ಎಲ್ಲ ಅಹಂಕಾರ ತ್ಯಜಿಸುವುದರ ಸಂಕೇತವಾಗಿದ್ದರೆ ಈಗ ಅವೇ ಆಚರಣೆಗಳಾಗಿ ಅಡಚಣೆಗಳೂ, ದಬ್ಬಾಳಿಕೆಗಳೂ ಆಗಿಬಿಟ್ಟಿವೆ. ದೇವರು - ಭಕ್ತರ ನಡುವೆ ಮಧ್ಯವರ್ತಿಗಳ ಕಾಟ, ದೇವರನ್ನು ವೈಭವೀಕರಿಸಿ ಅಮಾಯಕರನ್ನು ಮರುಳುಗೊಳಿಸುವುದನ್ನು, ನಯವಾಗಿ ಸುಲಿಯುವುದನ್ನು ಅವನು ಸಹಿಸಲಾರ. ಆದ್ದರಿಂದ ದೇವರ ಹತ್ತಿರ ಹೋಗುವುದಕ್ಕಿಂತ ಅದರ ಗೊಡವೆಗೆ ಹೋಗದಿರುವುದೇ ವಾಸಿ ಎಂಬುದು ನರಹರಿಯ ನಂಬಿಕೆ.

ಆದರೆ ಭಾವ ಅಡ್ಡದಾರಿ ಹಿಡಿದಿದ್ದಾನೆ ಎನ್ನುವುದು ಲೋಕೇಶನ ತೀರ್ಮಾನ. ''ಮನುಷ್ಯನಿಗೆ ಅಲ್ಪಸ್ವಲ್ಪವಾದರೂ ಧಾರ್ಮಿಕತೆ ಬೇಕು'' ಎನ್ನುತ್ತಾನೆ ಅವನು.

''ಧಾರ್ಮಿಕತೆ ಎಂದರೇನು? ವಿಗ್ರಹವನ್ನು ಪೂಜಿಸುವುದೇ? ನನ್ನ ಪ್ರಕಾರ ಮನುಷ್ಯನಾದವನು ಸಜ್ಜನನಾಗಿದ್ದರೆ ಬೇಕಾದಷ್ಟಾಯಿತು.''

''ಎಲ್ಲರೂ ನಿನ್ನದೇ ಮನೋಭಾವ ಹೊಂದಿರಬೇಕೆಂದರೆ ಹೇಗೆ? ಇಂದೂಗೂ ಒಂದು ಭಾವನೆ ಅಂತ ಇದೆಯಲ್ಲ ಅದನ್ನು ಗೌರವಿಸದಿದ್ದರೆ ನೀನೆಂಥ ಸಜ್ಜನ?''

ಲೋಕೇಶನ ತರ್ಕಕ್ಕೆ ನರಹರಿ ತಲೆಬಾಗಲೇಬೇಕಾಯಿತು.

* * *

''ಹುಣ್ಣಿಮೆಯ ದಿನ ಹೋಗೋದು ಬೇಡ. ವಿಪರೀತ ಜನದಟ್ಟಣೆ ಇರುತ್ತಂತೆ'' ಎಂಬ ನರಹರಿಯ ಸಲಹೆಗೆ ಇಂದುವಿನಿಂದ ಮಾನ್ಯತೆ ಸಿಗಲಿಲ್ಲ. ''ಅವತ್ತು ಹೋದರೇನೇ ಶ್ರೇಷ್ಠವಂತೆ. ಬಯಕೆಗಳು ಕೈಗೂಡುತ್ತವಂತೆ'' ಎಂಬ ಅಂತೆಕಂತೆಗಳ ವಾದ ಅವಳದು. ತನ್ನ ಪಾಂಡಿತ್ಯವಾಗಲೀ, ತರ್ಕವಾಗಲೀ ಅವಳ ಹಟದ ಮುಂದೆ ಉಪಯೋಗಕ್ಕೆ ಬಾರದು ಅನಿಸಿದ್ದರಿಂದ ಅವನು ಮತ್ತೆ ಅವಳ ಮನನೋಯಿಸಲು ಇಷ್ಟಪಡಲಿಲ್ಲ.

ಅಂಬೂರಿಗೆ ರೈಲು ಸೌಕರ್ಯವೂ ಇದೆ. ''ಮೊದಲು ಪ್ಯಾಸೆಂಜರ್ ರೈಲಷ್ಟೇ ಇಲ್ಲಿ ನಿಲ್ಲುತ್ತಿತ್ತು. ಈಗ ಜನರ ಆಗ್ರಹದ ಕಾರಣ ಎಲ್ಲ ಎಕ್ಸ್‌ಪ್ರೆಸ್ ರೈಲುಗಳೂ ನಿಲ್ಲುವಂತಾಗಿದೆ'' ಎಂದು ಲೋಕೇಶ ತಮ್ಮಿಬ್ಬರನ್ನು ಕಳಿಸಲು ಪ್ಲಾಟ್‌ಫಾರ್ಮಿಗೆ ಬಂದವನು ಹೇಳಿದ. ಬೋಗಿಯಲ್ಲಿ ಜನ ತುಂಬಿದ್ದರೂ ಅವನ ಸಾಹಸದಿಂದಾಗಿ ಎರಡು ಸೀಟುಗಳು ದಕ್ಕಿದ್ದರಿಂದ ನರಹರಿಗೆ ಅವನನ್ನು ಅಭಿನಂದಿಸದೆ ಇರಲು ಆಗಲಿಲ್ಲ. ''ಹುಷಾರಾಗಿ ಹೋಗಿಬನ್ನಿ'' ಎಂದು ಕೈಯಾಡಿಸಿ ಹಾರೈಸಿದ. ''ಗಲಾಟೆಯಲ್ಲಿ ಭಾವ ಕಳೆದುಹೋಗಿ ಬಿಟ್ಟಾನು. ಮುಜುಗರ ಮಾಡಿಕೊಳ್ಳದೇ ಅವನ ಕೈ ಗಟ್ಟಿಯಾಗಿ ಹಿಡಿದುಕೋ'' ಎಂದು ತಂಗಿಗೂ ಎಚ್ಚರಿಸಿದ. ಅವಳು ಘಲ್ಲನೆ ನಕ್ಕದ್ದರಿಂದ ಮುಖ ಕೆಂಪಾಗಿ ನರಹರಿಯ ಕಣ್ಣಿಗೆ ಇಂದು ಮತ್ತಷ್ಟು ಮಾದಕವಾಗಿ ಕಂಡಳು.

ರೈಲು ಹೊರಟ ಸ್ವಲ್ಪಹೊತ್ತಿಗೆ ಜನಗಳ ಗುಜುಗುಜು, ಗಡಿಬಿಡಿ ಎಲ್ಲ ಹಿಡಿತಕ್ಕೆ ಬಂದು ಮೊದಲು ಜಾಗ ಸಿಗದೆ ಹುಡುಕಾಡಿ ಚಡಪಡಿಸುತ್ತಿದ್ದವರೆಲ್ಲ ಅದು ಹೇಗೊ ಎಲ್ಲೆಲ್ಲೋ ಹೊಂದಾಣಿಕೆ ಮಾಡಿಕೊಂಡು ಕೂತು ಹಾಯಿ ಅನುಭವಿಸುತ್ತಿದ್ದಾರೆ. ಹೊರಗಿನ ದೃಶ್ಯಗಳನ್ನು ನೋಡುವ ಆತುರದಲ್ಲಿ ಕೊರಳು ಚಾಚಿ ಕಣ್ಣಗಲಿಸಿದ ಅನೇಕರು ಈಗ ಧೂಳೋ ಮತ್ತೊಂದೋ ಬಿದ್ದದ್ದಕ್ಕೋ ಏನೋ ಹಿಂಜರಿದು ಕಣ್ಣು ತಿಕ್ಕಿಕೊಳ್ಳುತ್ತಿದ್ದರೆ ಕೆಲವರು ಆವತ್ತಿನ ಪತ್ರಿಕೆಯಲ್ಲಿ ಮಗ್ನರು. ನರಹರಿ ನಿಶ್ಚಿಂತೆಯಿಂದ ಕೂತು ತನ್ನೆದುರು ಇದ್ದವರನ್ನು ಗಮನಿಸತೊಡಗಿದ.

ಮುಂದಿನ ಇಡೀ ಸೀಟನ್ನು ಒಂದು ಸಂಸಾರವೇ ವ್ಯಾಪಿಸಿದಂತಿದೆ. ಅಜ್ಜಿಯಾಗಿ ಕಾಣುವವಳು ಆ ಯಜಮಾನರ ತಾಯಿಯೋ ಅತ್ತೆಯೋ ಆಗಿರಬಹುದು. ಯಜಮಾನರಿಗೆ ಅರವತ್ತಿರಬೇಕು. ಹೆಂಡತಿ ಯಾಕೋ ಸೊರಗಿದ್ದಾರೆ. ಇನ್ನಿಬ್ಬರು ಮಗಳು-ಮೊಮ್ಮಗಳೇನೋ - ಮಗಳು ಅಥವಾ ಆ ಹೆಂಗಸಿನ ಚೆಲುವು ಅಸಾಧಾರಣ ಅನ್ನಿಸಿ ನರಹರಿ ಬೆರಗಾಗಿಬಿಟ್ಟ. ಕದ್ದುಕದ್ದಾದರೂ ಅವಳತ್ತ ನೋಡದೆ ಇರಲು ಅವನಿಂದ ಸಾಧ್ಯವೇ ಆಗಲಿಲ್ಲ.

''ನೀವೂ ಅಂಬೂರಿಗೆ ಹೋಗ್ತಾ ಇದೀರಾ?'' ಥಟ್ಟನೆ ಯಜಮಾನರು ಮಾತಾಡಿಸಿದ್ದರಿಂದ ತನ್ನ ಕಳ್ಳತನವನ್ನು ಅವರು ಗಮನಿಸಿಬಿಟ್ಟರೇನೋ ಎಂದು ನರಹರಿ ಅಂಜಿದ. ''ಹೌದೌದು...'' ಎಂದು ತೊದಲಿದವನು ತಾನು ಸಭ್ಯ, ಸಾಚಾ ಎಂದು ತೋರಿಸಿಕೊಳ್ಳುವ ಉದ್ದೇಶದಿಂದ ಪಕ್ಕದಲ್ಲಿದ್ದ ಇಂದುವನ್ನು ತೋರಿಸಿ, ''ನನ್ನ ಹೆಂಡತಿಯೊಂದಿಗೆ'' ಎಂದೂ ಸೇರಿಸಲು ಮರೆಯಲಿಲ್ಲ.

ಆ ಯಜಮಾನರು ದೇಸಾಯಿ ಅಂತ. ಲೋಕೋಪಯೋಗಿ ಇಲಾಖೆಲಿ ಕೆಲಸ ಮಾಡಿ ಈಗ ನಿವೃತ್ತಿಯ ನಂತರ ಹರಿಹರಕ್ಕೆ ಬಂದು ನೆಲೆಸಿದ್ದಾರೆ. ತಾಯಿಗೆ, ಹೆಂಡತಿಗೆ ದೇವರಲ್ಲಿ ಅಪರಿಮಿತ ಭಕ್ತಿ, ಶ್ರದ್ಧೆ. ಮಗಳು ರತ್ನಾಗೆ ಅಂಬೂರು ಸಂದರ್ಶಿಸುವ ಬಯಕೆ. ಅಳಿಯನಿಗೆ ಬೆಂಗಳೂರಿನಲ್ಲಿ ಸಚಿವಾಲಯದಲ್ಲಿ ಕೆಲಸ. ಆತನಿಗೆ ರಜ ಸಿಕ್ಕಿಲ್ಲ.

ಇಂದೂಗೂ ಸಹಜವಾಗಿ ಅವರಲ್ಲಿ ಆಸಕ್ತಿ ಕುದುರಿದಂತೆ ಭಾಸ. ಮಾತಾಡುವ ಚಪಲವೂ ಇದ್ದೀತು. ಸ್ವಾಭಾವಿಕ. ''ಬರೀ ನೋಡೋದಕ್ಕೆ ಹೋಗ್ತಿದೀರಾ ಅಥವಾ ಏನಾದ್ರೂ ಹರಕೆ ಸಲ್ಲಿಸೋದು ಇದೆಯಾ?'' ಅವಳು ಥಟ್ಟನೆ ರತ್ನಾಳ ಮುಖ ನೋಡುತ್ತ ಕೇಳಿದ್ದು ನೋಡಿ ನರಹರಿಗೆ ಒಂಥರಾ ಆಯಿತು. ಬೇರೆಯವರ ವಿಷಯದಲ್ಲಿ ಈ ಹೆಂಗಸರಿಗೆ ಈ ಪರಿ ಕುತೂಹಲ ಯಾಕೋ ಅಂದುಕೊಂಡ. ರತ್ನಾ ಮಾತ್ರ ಆ ಪ್ರಶ್ನೆ ತನಗೆ ಅಂತ ಗೊತ್ತಾದ ಮೇಲೆ ಆಕೆಯ ಪ್ರತಿಕ್ರಿಯೆ ಮಾತ್ರ ವಿಚಿತ್ರವಾಗಿದೆ.

''ಯಾರು ನಾನೇ - ಹರಕೆ ಸಲ್ಲಿಸೋದು?''

ಆಕೆಯ ಮಾತು, ನಗು ನರಹರಿಗೆ ಅರ್ಥವಾಗಲಿಲ್ಲ. ಇಂದೂ ಸಹ ಈ ಬಗೆಯ ಉತ್ತರ ನಿರೀಕ್ಷಿಸದೆ ಇದ್ದುದರಿಂದ ತುಸು ಅಪ್ರತಿಭಳಾಗಿದ್ದಳೆ.

ಅಷ್ಟುಹೊತ್ತಿಗೆ ಒಂದು ನಿಲ್ದಾಣದಲ್ಲಿ ರೈಲು ನಿಂತಿತು. ದೇಸಾಯರು ಎದ್ದು ಹೊರಟರು. ತಗೋ, ಕಿಟಕಿಯಲ್ಲಿ ನಾನಾ ನಮೂನೆಯ ತಿಂಡಿ, ಚಹಾ, ಕಾಫಿ ಮಾರಾಟಗಾರರ ಗದ್ದಲ. ಆ ಪುಟ್ಟ ಹುಡುಗಿ 'ಅಜ್ಜಿ ನಂಗೆ ಕ್ಯಾಡ್‌ಬರೀ...' ಎಂದು ಒಂದೇಸಮ ದುಂಬಾಲು ಬಿದ್ದಿದ್ದಾಳೆ. ನರಹರಿ ಅದೇನೋ ಪ್ರೀತಿಯಿಂದ ಆ ಮಗುವಿನತ್ತ ನೋಡಿದ. ಅವಳಿಗೆ ತಾಯಿಗಿಂತ ಅಜ್ಜಿಯೊಂದಿಗೇನೇ ಒಡನಾಟ ಹೆಚ್ಚು ಅನ್ನಿಸಿತು. ಹಾಗೆ ನೋಡುತ್ತ, ನೋಡುತ್ತ, 'ತಮ್ಮ ಮದುವೆಯಾಗಿ ಈಗಾಗಲೇ ಏಳುವರ್ಷ. ಇದ್ದಿದ್ದರೆ ಇಂಥ ಮಗಳು ಇರ್ತಿದ್ದಳು' ಎಂದು ಉಸಿರು ಭಾರವಾಗದೆ ಇರಲಿಲ್ಲ.

ಕಿಟಕಿಯಲ್ಲಿ ದೇಸಾಯರ ಮುಖ ಕಂಡಿತು. ''ಬರ್ತೀರೇನು?'' ಎಂದವರು ನರಹರಿಯನ್ನು ಕರೆದು ಮತ್ತೆ ಹೇಳಿದರು: ''ಕ್ರಾಸಿಂಗ್ ಇದೆಯಂತೆ. ರೈಲು ಈಗಲೇ ಹೊರಡೋದಿಲ್ಲ'' ಇಂದು ಕಡೆ ನೋಡುತ್ತ ನರಹರಿ ಎದ್ದ.

ಸಣ್ಣ ನಿಲ್ದಾಣ. ರೈಲಿನಿಂದಿಳಿದವರು ಬೇರೆ ಕೆಲಸವಿಲ್ಲದೆ ಸುಮ್ಮನೆ ಅಲ್ಲಿಂದಿಲ್ಲಿಗೆ ಠಳಾಯಿಸುತ್ತಿದ್ದಾರೆ. ಹೊರಗೆ ಗುಬುರಾಗಿ ಬೆಳೆದ ಮರಗಳ ಕಡೆಯಿಂದ ಬೀಸುವ ಗಾಳಿ ಚೇತೋಹಾರಿಯಾಗಿದೆ. ನರಹರಿ ಬೋಗಿಯೊಳಗಿನ ಅಸಹನೀಯ ಒತ್ತಡದಿಂದ ಬಿಡುಗಡೆಯಾಗಿ ಹೊರಗೆ ಗಾಳಿಯ ತಂಪು ಅನುಭವಿಸುತ್ತ ನಿಂತವನು ದೇಸಾಯರಿಗಾಗಿ ಅತ್ತಿತ್ತ ನೋಡಿದ. ಅವರು ತುಸುದೂರದಲ್ಲಿ ಕಂಬದ ಮರೆಗೆ ನಿಂತು ಸಿಗರೇಟು ಹಚ್ಚಿದ್ದಾರೆ. ನರಹರಿ ಹತ್ತಿರ ಬಂದೊಡನೆ 'ನೀವು?' ಎಂದು ಪ್ಯಾಕ್ ಅವನತ್ತ ಚಾಚಿದರು. 'ಎಸ್, ನಿಮ್ಮ ಸಂತೋಷಕ್ಕೆ' ಎಂದು ಒಂದನ್ನು ಎಳೆದುಕೊಂಡ. ಒಂದು ನಿಮಿಷದ ನಂತರ ಅವರು ಇನ್ನಷ್ಟು ಸಮೀಪಿಸಿ ಹೇಳಿದರು.

''ಇನ್ನು ಹದಿನೈದು ನಿಮಿಷವಾದರೂ ಬೇಕು ಆ ರೈಲು ಬರೋದಕ್ಕೆ.''

''ಹುಂ'' – ಅವನು ತಲೆ ಆಡಿಸಿದ.

''ನನ್ನ ಮಗಳು ರತ್ನಾಳನ್ನು ಗಮನಿಸಿದಿರಾ ನೀವು?''

ಥಟ್ಟನೆ ಕೆನ್ನೆಗೆ ಹೊಡೆಸಿಕೊಂಡಂತೆ ನರಹರಿ ಬೆಚ್ಚಿದ. ಆಕೆಯ ಚೆಲುವನ್ನು ತಾನು ಕಣ್ಣರಳಿಸಿ ನೋಡಿದ್ದನ್ನೇ ಇವರು ಅಪರಾಧವೆಂದು ಪರಿಗಣಿಸಿದ್ದರೇ...

''ಊ.. ಊಂ... ಏನು ಹೇಳುತ್ತಿದ್ದೀರಿ?'' ಗೊಂದಲದ ಮಧ್ಯೆ ಅಷ್ಟು ಮಾತಾಡಿದ್ದಕ್ಕೇ ಅವನಿಗೆ ಏದುಸಿರುಬಂದಂತಾಗಿದೆ. ದೇಸಾಯರು ಇನ್ನಷ್ಟು ಆಕ್ಷೇಪಣೆಗೆ ತೊಡಗುವ ಮೊದಲೇ ಮೆಲ್ಲಗೆ ಅವರೆದುರಿನಿಂದ ಪಲಾಯನ ಮಾಡುವ ಸನ್ನಾಹ ತೋರಿದ. ಆದರೆ ತೊಲಗುವುದು ಅಷ್ಟು ಸುಲಭವಾಗಿರಲಿಲ್ಲ.

''ನನಗೆ ಅವಳದ್ದೇ ಒಂದು ಸಮಸ್ಯೆಯಾಗಿ ಬಿಟ್ಟಿದೆ.'' ಇವನೊಳಗಿನ ತುಮುಲದ ಅರಿವಿಲ್ಲದ ದೇಸಾಯರು ನಿಟ್ಟುಸಿರುಬಿಟ್ಟರು. ''ದೇವರು ನನಗೆ ಜೀವನದಲ್ಲಿ ಎಲ್ಲ ಸುಖ ಕೊಟ್ಟ. ಆದರೆ ಈಗ ಇಳಿಗಾಲದಲ್ಲಿ ನೆಮ್ಮದಿ ಕಿತ್ತುಕೊಂಡುಬಿಟ್ಟ.''

ನರಹರಿ ಈಗ ಚೇತರಿಸಿಕೊಂಡ. ಹಗುರಾಗಿ ಉಸಿರಾಡಿದ. ಸದ್ಯ ತನ್ನ ಮೇಲೇನೂ

ಆತ ದೂರುವ ಲಕ್ಷಣವಿಲ್ಲ ಎಂಬ ಖಾತರಿಯಲ್ಲಿ ಅವರತ್ತ ನೋಡಿದ. ಈಗ ಅವರ ಮುಖದ ಮೇಲೆ ನೋವಿನ ನರಗಳು ಎದ್ದಿವೆ. ವೇದನೆಯಿಂದ ಮುಖ ಹಿಂಡಿದೆ. ತೋರ ಗೊಡದಂತೆ ಆತ ಮಾಡುತ್ತಿರುವ ಪ್ರಯತ್ನ ಸಫಲವಾಗುತ್ತಿಲ್ಲ.

''ಏನಾಗಿದೆ ನಿಮ್ಮ ಮಗಳಿಗೆ? ನೋಡೋದಕ್ಕೆ ಚೆನ್ನಾಗಿಯೇ ಇದ್ದಾರಲ್ಲ!''

''ಗ್ರಹಚಾರ ಕಾಡ್ತಾ ಇದೆ.''

''ಹಾಗಾಗಿ ತಾಯಿಯ ಸೇವೆಗೆ ಹೊರಟಿದ್ದೀರಾ ?''

ದೇಸಾಯರು ಅವನ ಮುಖವನ್ನು ನೇರವಾಗಿ ನೋಡುತ್ತ ಹೇಳಿದರು, ''ನೀವು ಈಗಿನ ಕಾಲದವರು. ನಾನೀಗ ಹೇಳೋದು ಕೇಳಿ ಉಪೇಕ್ಷೆಯಿಂದ ನಕ್ಕುಬಿಡ್ತೀರೋ ಏನೋ.''

''ಊಹುಂ. ಹಾಗೇನಿಲ್ಲ. ಹೇಳಿ'' ಅವನಿಗೂ ಕುತೂಹಲವಾಗಿತ್ತು.

''ನಮ್ಮ ರತ್ನಾಳ ಮನಃಸ್ಥಿತಿ ಒಂಥರಾ. ತನ್ನ ಹಿಂದಿನ ಜನ್ಮದಲ್ಲಿ ತಾನೇ ಅಂಬೂತಾಯಿ ಆಗಿದ್ದೆ ಅಂತ ಬಲವಾಗಿ ನಂಬಿಕೊಂಡಿದ್ದಾಳೆ.''




'ಆಃ!' ನರಹರಿ ಹೌಹಾರಿದ. ಇಂಥ ವಿಪರೀತವನ್ನು ಅವನು ನಿರೀಕ್ಷೆ ಮಾಡಿರಲಿಲ್ಲ. ಹಾಗಾಗಿ ತಕ್ಷಣ ತಾನೇನು ಸಮಾಧಾನ ಹೇಳಬೇಕೋ ತೋಚದೆ ಗಲಿಬಿಲಿಗೊಂಡ. ದೇಸಾಯರಿಗೆ ಅವನ ಮೌನ ಸಹಿಸಲು ಆಗಲಿಲ್ಲವೋ ಅಥವಾ ಉಳಿದದ್ದನ್ನು ಹೇಳುವ ತನಕ ಅವರಿಗೆ ಸೈರಣೆ ಇರಲಿಲ್ಲವೋ – ''ಇದನ್ನೇ ನಾನು ಗ್ರಹಚಾರ ಅಂತ ಕರೆದದ್ದು.'' ಅವರು ಮುಂದುವರಿಸಿದರು : ''ತಾನು ಹಿಂದಿನ ಜನ್ಮದಲ್ಲಿ ಅಂಬೂತಾಯಿ ಆಗಿದ್ದೆ ಎಂಬುದನ್ನು ಮರೆಯೋದು ಇವಳಿಂದ ಆಗ್ತಾ ಇಲ್ಲ. ನಮ್ಮ ಅಳಿಯ ನಾಸ್ತಿಕ ಅಲ್ಲದಿದ್ರೂ ಈ ತರಹದ ಭಾವನೆಗಳನ್ನು ಆತ ಗೌರವಿಸುವ ಜಾಯಮಾನದವನಲ್ಲ. ಈಗ ಮಗಳು ಅಳಿಯನ ಮಧ್ಯೆ ಸಂಬಂಧ ಹದಗೆಟ್ಟುಬಿಟ್ಟಿದೆ. ಇವಳು ದೇವಿ ಅಂದುಕೊಳ್ಳೋದು ಒಂದು ರೋಗ ಅಂತ ಅವನ ಭಾವನೆ. ಇವಳು ಸುಧಾರಿಸದೆ ಇದ್ದಾಗ ಗಂಡನಾದವನು ಏನು ಮಾಡಬೇಕೋ ಅದನ್ನೇ ಅವನೂ ಮಾಡಿದ. ಈಗ ರತ್ನಾ ಒಂದು ವರ್ಷದಿಂದ ನಮ್ಮ ಜತೆಗೇ ಇದ್ದಾಳೆ.''

ಕೆಲವರಿಗೆ ಬಾಲ್ಯದಲ್ಲಿ ಇಂಥ ಮನಃಸ್ಥಿತಿ ಇರುತ್ತೆ ಅಂತ ಆಗೀಗ ನರಹರಿ ಪತ್ರಿಕೆಗಳಲ್ಲಿ ಓದಿದ್ದ. ಆದರೆ ತಜ್ಞರ ಪ್ರಕಾರ ಬೆಳವಣಿಗೆ ಆದಂತೆಲ್ಲ ಇವೆಲ್ಲ ಸಂಗತಿಗಳು ಮರೆತು ಹೋಗಿ ಮಾಮೂಲಿ ಮನುಷ್ಯರಾಗಿಬಿಡ್ತಾರೆ. ಆದರೆ ಇಲ್ಲಿ ಸಮಸ್ಯೆ ಇಷ್ಟು ಸರಳವಾಗಿಲ್ಲ. ರತ್ನಾ ದೊಡ್ಡ ಹೆಂಗಸು. ಒಬ್ಬ ಮಗಳೂ ಇದ್ದಾಳೆ. ಈಗಲೂ ತಾನು ದೇವಿ ಅಂತ ಯಾಕೆ ಭಾವಿಸಿದ್ದಾಳೋ ಅದು ಮಾತ್ರ ಸ್ವಲ್ಪ ವಿಚಿತ್ರವೇ. ಒಟ್ಟಿನಲ್ಲಿ ಈ ದೇವರು ಮಾಡುವ ಅನಾಹುತ ಅಷ್ಟಿಷ್ಟಲ್ಲ.

ದೇಸಾಯರಿಗೆ ಮಾತ್ರ ತುಂಬ ದಿನಗಳಿಂದ ತೊಳಲಾಡಿ ಈಗ ತಾನೊಬ್ಬ ನಿಸ್ಪೃಹ ಶ್ರೋತೃವಿನ ರೂಪದಲ್ಲಿ ಭಾಸವಾಗಿಯೋ ಏನೋ ತಮ್ಮ ದುಗುಡವನ್ನು ತೋಡಿಕೊಂಡು ರಿಲ್ಯಾಕ್ಸ್ ಅನುಭವಿಸುತ್ತಿರುವ ಭಾಸ.

ನರಹರಿ ಮತ್ತೆ ಹೋಗಿ ರೈಲಿನಲ್ಲಿ ಹೆಂಡತಿಯ ಪಕ್ಕ ಕುಳಿತ. ಎದುರಿಗೆ ರತ್ನಾ ಮತ್ತು ಅವಳ ತಾಯಿ ಕಾಣಿಸಲಿಲ್ಲ. ರತ್ನಾಳ ಮನಃಸ್ಥಿತಿಯ ಬಗ್ಗೆ ಇಂದುವಿಗೆ ಹೇಳಬೇಕೋ ಬೇಡವೋ ಎಂಬ ಸಂದಿಗ್ಧದಲ್ಲಿರುವಾಗಲೇ ಅವಳು ಕಿವಿಯಲ್ಲಿ ಆಪ್ತವಾಗಿ ಹೇಳಿದಳು : ''ರೀ ಅವರಿಗೂ ಮೊಮ್ಮಗ ಬೇಕಾಗಿದೆಯಂತೆ. ಅದಕ್ಕಾಗಿ ಮಗಳ ಜತೆ ಅಂಬೂರಿಗೆ ಹೊರಟಿದ್ದಾರಂತೆ. ಈ ಅಜ್ಜಿ ಹೇಳ್ತು.''

* * *

ವಿಶೇಷ ದಿನವಾದ್ದರಿಂದ ಅಂಬೂರು ಜನರಿಂದ ಗಿಜಿಗಿಜಿಗುಡುತ್ತಿದೆ. ಅದು ರಥ ಬೀದಿಯಂತೆ. ಆದರೆ ವಿಶಾಲವಾಗೇನೂ ಇಲ್ಲ. ಎರಡೂ ಬದಿಗಳಲ್ಲಿ ಗಾಳಿಯಾಡಲೂ ಅವಕಾಶವಿಲ್ಲದಂತೆ ನಾಯಿಕೊಡೆಗಳಂತೆ ಅಂಗಡಿಗಳು ಕಿಕ್ಕಿರಿದಿವೆ. ಅಲ್ಲಿ ಫೋಟೋ, ಪುಸ್ತಕ, ತಾಯಿತ, ವಿಗ್ರಹ, ಬಲೂನುಗಳಲ್ಲದೆ ಕರಿದ ತಿಂಡಿಗಳು, ಫೇಡೆ, ಮಂಡಕ್ಕಿ, ಬತ್ತಾಸು, ಅರಿಶಿಣ, ಕುಂಕುಮ, ರಂಗೋಲಿ, ಆಟದ ಸಾಮಾನುಗಳೆಲ್ಲ ಮೇಳೈಸಿವೆ. ಇವೆಲ್ಲ ಸಾಲದು ಎಂಬಂತೆ ಭಿಕ್ಷುಕರು, ದೇವರು ಆವಾಹನೆಯಾದವರು, ಮುಂದೆ ಸರಿಯದವರು, ಹಿಂದಿನಿಂದ ಒತ್ತುವವರು. ಮೊದಲೇ ಏರುಬಿಸಿಲು, ಗಾಳಿಯೂ ಸ್ತಬ್ಧ. ಉಸಿರಾಡಿದ್ದನ್ನೇ ಉಸಿರಾಡಬೇಕಾದ ಅಸಹನೀಯತೆಗೆ ಮನಸ್ಸು ರೋಸಿ ಹೋಗಿದ್ದರೂ ಅನಿವಾರ್ಯವಾಗಿ ಸಹಿಸಲೇಬೇಕಾಗಿದೆ. ಅಂತೂ ಒದ್ದಾಟ, ಗುದ್ದಾಟಗಳ ಮಧ್ಯೆ ತಾಯಿಯ ದರ್ಶನ ಪಡೆದುಕೊಂಡು ಹೊರಬರುವ ಹೊತ್ತಿಗೆ ಮೈಯಲ್ಲಿ ನೀರಿಳಿದು ಬಟ್ಟೆಯೆಲ್ಲ ಒದ್ದೆ. ಶರಟಿನ ತೋಳು ಕೊಳೆಯಾಗಿದೆ ಎನಿಸಿದ್ದರಿಂದ ನರಹರಿ ಅದನ್ನು ಮಡಚಿ ಮೊಳಕೈ ದಾಟಿಸುತ್ತ ಆಚೀಚೆ ನೋಡಿ ಹೆಂಡತಿಯನ್ನು ಕೇಳಿದ, ''ದೇಸಾಯರು ಎಲ್ಲಿ ?''

''ಅವರು ನಮಗಿಂತ ಮುಂದೆ ಇದ್ರು. ಈಗ ದೇವಸ್ಥಾನಕ್ಕೆ ಪ್ರದಕ್ಷಿಣೆ ಹಾಕ್ತಿದ್ದಾರೋ ಏನೋ.''

''ಅಂತೂ ತಾಯಿಯ ದರ್ಶನವಾಯ್ತಲ್ಲ, ನಿನ್ನ ಮನಸ್ಸಿಗೆ ಸಮಾಧಾನವಾಯ್ತು?'' ಅವನು ಪ್ರೀತಿಯಿಂದ ಹೆಂಡತಿಯನ್ನು ಕೇಳಿದ.

''ಓಹೋ'' – ಎಂದವಳು ಮುಖ ಅರಳಿಸಿ ಕತ್ತು ಕೊಂಕಿಸಿ ಮುಂದುವರಿಸಿದಳು : ''ತಾಯಿಯ ವಿಗ್ರಹ ಎಷ್ಟು ದೊಡ್ಡದಾಗಿದೆ. ಮೈತುಂಬ ಎಷ್ಟೊಂದು ಆಭರಣಗಳು ! ನನಗಂತೂ ಅಂಬೂತಾಯಿ ಇಲ್ಲಿ ಪ್ರತ್ಯಕ್ಷವಾಗಿದ್ದಾಳೆ ಅನಿಸಿತು.''

''ಸರಿ – ಈಗೇನು ಮಾಡೋಣ. ಹೊಟ್ಟೆ ಹಸೀತಿದೆ.''

''ಬೇಗ ಭೋಜನಶಾಲೆಗೆ ಹೋಗೋಣ – ದೇವಿಯ ಪ್ರಸಾದ ತೊಗೊಂಡು...''

''ಅನುಮಾನ - ಈಗಾಗಲೇ ಮೂರುಗಂಟೆ.''

ಇಬ್ಬರೂ ಧಾವಿಸಿಹೋಗುವ ಹೊತ್ತಿಗೆ ಪ್ರಸಾದ ನಿಲಯದ ಬಾಗಿಲು ಮುಚ್ಚಿದೆ. ವಿಚಾರಿಸಿದಾಗ ಮುಗಿದಿದೆ ಎಂಬ ಉತ್ತರ ಬಂತು. ಇಂದು ಕಟ್ಟೆಯ ಮೇಲೆ ಕುಸಿದು ಕೂತಳು.

''ಏನ್ರೀ ಇದು... ಇಷ್ಟು ದೂರ ಬಂದ್ರು... ತಾಯಿಯ ಪ್ರಸಾದ ಸಿಗಲಿಲ್ಲವಲ್ಲ!''

''ಹೀಗೆ ಲೆಕ್ಕಮೀರಿ ಜನ ಬಂದ್ರೆ ದೇವಸ್ಥಾನದವರಾದ್ರೂ ಏನು ಮಾಡ್ತಾರೆ? ಹೇಗಿದ್ರೂ ಹಣ್ಣುಕಾಯಿ ಮಾಡಿಸಿದ್ದೀವಲ್ಲ. ಅಷ್ಟು ಪ್ರಸಾದ ಸಾಕು. ಈಗ ಹೋಟೆಲ್ಲಿಗೆ ಹೋಗಿ ಏನಾದ್ರೂ ತಿಂದ್ರಾಯ್ತು ಬಾ.''

ಹಸಿವಾಗಿದ್ದರಿಂದ ಮತ್ತೆ ಅವಳಿಗೂ ಮಾತು ಬೇಕಾಗಿರಲಿಲ್ಲ. ಗಂಡನೊಂದಿಗೆ ಹೆಜ್ಜೆ ಹಾಕುತ್ತಿದ್ದಂತೆ ಎದುರಿಗೆ ದೇಸಾಯರು ಕಂಡರು.

''ಏನು - ಪ್ರಸಾದ ಸಿಗಲಿಲ್ವಾ ?''

''ಇಲ್ಲ.''

''ಕ್ಷೇತ್ರದಲ್ಲಿ ಇವೆಲ್ಲ ಸಾಮಾನ್ಯ. ಸರಿ. ನಮ್ಮ ಜತೆ ಬನ್ನಿ. ನನ್ನ ಹೆಂಡತಿ ಬೇಕಾದಷ್ಟು ಕಟ್ಟಿಕೊಂಡು ಬಂದಿದ್ದಾಳೆ.''

''ಅಲ್ಲ, ನೀವು ಮುಗಿಸಿ - ನಿಮಗ್ಯಾಕೆ ತೊಂದ್ರೆ... ನಾವು...'' ನರಹರಿ ಸಕಾರಣವಾಗಿ ಹಿಂಜರಿದವನು, ''ನೀವೂ ನಮ್ಮ ಜತೆ ಊಟಕ್ಕೆ ಬನ್ನಿ'' ಎಂದು ಫಕ್ಕನೆ ರತ್ನಾ ಸಹ ಆಹ್ವಾನಿಸಿದಾಗ ವಿಸ್ಮಯಗೊಂಡ. ಆಕೆಯ ವಿಷಯ ಗೊತ್ತಿಲ್ಲದ ಇಂದೂಗೆ ಈ ಕರೆ ಸ್ವಾಭಾವಿಕವಾಗಿ ಕಂಡಿತು. ರತ್ನಾಳ ವೃತ್ತಾಂತ ತಿಳಿದಿದ್ದರಿಂದ ಅವನಿಗೆ ಆದಷ್ಟು ದೂರವೇ ಇರಬೇಕೆಂಬ ಅಪೇಕ್ಷೆ ಈಗ ಇಂದುವಿನ ಒತ್ತಾಯದಲ್ಲಿ ಮುದುಡಿಹೋಗಿದೆ.

''ಇಲ್ಲಿ ಕೂತುಕೊಳ್ಳೋದಕ್ಕೆ ಜಾಗ ಎಲ್ಲಿದೆ ?''

''ನದಿದಡಕ್ಕೆ ಹೋಗೋಣ – ಅಲ್ಲಿ ಮಾವಿನ ತೋಪಿದೆಯಂತೆ.''

ಈಗ ರತ್ನಾ - ಇಂದು ಜೊತೆಯಾಗಿದ್ದಾರೆ. ಇಂದು ಒಂದೇ ಸಮ ಮಾತಾಡುತ್ತಿದ್ದರೆ ರತ್ನಾ ಆಗೀಗ ತನ್ನತ್ತ ನೋಟ ಹರಿಸುವುದು ಗಮನಿಸಿ ನರಹರಿ ಬೆದರಿದ. ತಾನೇನೂ ಆಕೆಗೆ ಉತ್ತೇಜನ ಕೊಡುವ ರೀತಿಯಲ್ಲಿ ನಡೆದುಕೊಂಡಿಲ್ಲ... ಆದರೂ...

''ರೀ...'' ಇಂದು ಕೈಹಿಡಿದೆಳೆದಳು.

''ಏನು ?''

''ಪೇಟೆಯಲ್ಲಿ ಏನಾದ್ರೂ ಕೊಂಡುಕೊಳ್ಳೋಣ.''

''ತಗೋ... ಅದಕ್ಕೂ ನನ್ನ ಕೇಳಬೇಕಾ ?''

ಅವಳು ಅಂಬೂತಾಯಿಯ ಫೋಟೋ, ಕ್ಯಾಸೆಟ್, ಪುರಾಣಕಥೆ ಪುಸ್ತಕ ಖರೀದಿಸಿದಳು. ತಾವಿಬ್ಬರೂ ಊಟಕ್ಕೆ ಬರಿಗೈಯಲ್ಲಿ ಹೋಗಲು ಮುಜುಗರವಾಗಿ ನರಹರಿ ಒಂದಷ್ಟು ರಸಬಾಳೆ ಕೊಂಡ.

ನದಿತೀರ ಅಲ್ಲಿಂದ ದೂರವೇನೂ ಇಲ್ಲ. ಪೇಟೆ ದಾಟಿ ದೇವಸ್ಥಾನದ ಪ್ರಾಕಾರ ಬಳಸಿ

ಹಿಂದಿನ ಕಾಲುದಾರಿಯ ಇಳಿಜಾರಿನಲ್ಲಿ ಸಾಗಿದರೆ ಅಲ್ಲಿಯೇ ಇದೆ. ಅದರ ದಡದಲ್ಲಿ ನೂರಾರು ಮರಗಳ ಮಾವಿನ ತೋಪು, ದಟ್ಟ ನೆರಳು, ಕ್ಲೇಶ ಕಳೆಯುವ ತಂಪು. ಅಲ್ಲಲ್ಲಿ ಜನರಿದ್ದರೂ ಪರಿಸರ ಶಾಂತವಾಗಿದೆ.

ವಿರಳವಾಗಿ ಬೆಳೆದ ಹುಲ್ಲುಹಾಸಿನ ಮೇಲೆ ಕೂರುತ್ತ ದೇಸಾಯರು ಹೇಳಿದರು, ''ಈ ಮಾವಿನ ತೋಪು ಇನ್ನೇನೂ ಬಹಳ ದಿನ ಇರಲ್ಲವಂತೆ. ಈ ಮರಗಳನ್ನು ಕಡಿದು ಬರುವ ಭಕ್ತಾದಿಗಳ ಅನುಕೂಲಕ್ಕಾಗಿ ಕಟ್ಟಡ ಗಳನ್ನು ನಿರ್ಮಿಸುತ್ತಾರಂತೆ.'' ಅವರ ದನಿಯಲ್ಲಿ ತೀವ್ರ ವಿಷಾದ ಗಮನಿಸಿ, ''ಹುಂ. ಯಾವುದೇ ಪ್ರಸಿದ್ಧಿಗಾಗಿ ಇವೆಲ್ಲ ನಿರಪರಾಧಿಗಳ ಬಲಿ ಸಾಮಾನ್ಯ'' ಎಂದು ನರಹರಿಯೂ ಅಭಿಪ್ರಾಯಪಟ್ಟ.

ದೇಸಾಯರ ತಾಯಿ, ಹೆಂಡತಿಯ ಜತೆ ಇಂದೂ ಸಹ ಕಾಲು ತೊಳೆದುಕೊಂಡು ಬರಲು ನದಿಯತ್ತ ಹೋಗಿದ್ದಾಳೆ. ಮೊಮ್ಮಗಳು ಅಲ್ಲಿ ಚಿಟ್ಟೆ ಹಾರುವುದು ಕಂಡು ಸಂಭ್ರಮಿಸಿ ಅದರ ಹಿಂದೆ ಉಲ್ಲಾಸದಿಂದ ಓಡಿದ್ದು ನೋಡಿ ದೇಸಾಯರಿಗೆ ಗಾಬರಿ. ''ನಿಲ್ಲು ನಿಲ್ಲು'' ಎನ್ನುತ್ತ ಅತ್ತ ಧಾವಿಸಿದರು. ನರಹರಿ ಒಂಟಿಯಾಗಿ ಕೂತು ಚಡಪಡಿಸಿದ. ಎದುರಿಗೆ ಕುಳಿತಿದ್ದ ರತ್ನ ಚೀಲಗಳಿಂದ ಒಂದೊಂದೇ ಡಬ್ಬಗಳನ್ನು ತೆಗೆಯುತ್ತಿದ್ದವಳು ಥಕ್ಕನೆ ತನ್ನತ್ತ ನೋಡಿ 'ಅದೇನದು ಕೈಮೇಲೆ ಗೀರು?' ಎಂದು ಕೇಳಿದಾಗ ಅವನು ಬೆರಗಾಗಿ ಹೋದ. ಅವಳು ಇನ್ನಷ್ಟು ಸಮೀಪಿಸಿ ಅವನ ತೋಳಿನ ಮೇಲೆ ಬೆರಳಾಡಿಸಿ ಅವನ ಮುಖ ನೋಡಿದಳು.

''ಇದು... ಇದು ಹುಟ್ಟುವಾಗಲೇ ಇದ್ದದ್ದು. ಯಾವುದೋ ವಿಟಮಿನ್ ಕಡಿಮೆಯಾಗಿ ಹೀಗಾಗಿದೆ ಅಂದಿದಾರೆ ಡಾಕ್ಟರ್.''

''ಅಲ್ಲ, ಮನೆಗೆ ಅತಿಥಿಗಳು ಬಂದಿದ್ರು. ನಾನು ಅಡುಗೆ ಮಾಡ್ತಿದ್ದೆ. ಆಗ ಬೆಂಕಿಕೊಳ್ಳಿ ತಾಗಿ ಆದ ಸುಟ್ಟ ಗುರುತು ಇದು. ನನಗೆ ಹೇಗೆ ಗೊತ್ತು ಅಂತೀರೇನು? ಹಿಂದಿನ ಜನ್ಮದಲ್ಲಿ ನೀವು ನನ್ನ ಮಗ ಆಗಿದ್ರಿ...''

ಅಂಗಿಯ ಮಡಚಿದ ತೋಳು ಬಿಡಿಸುತ್ತ ನರಹರಿ ನಿಧಾನವಾಗಿ ಹಿಂದೆ ಸರಿದ. ರತ್ನಾಳ ಮಾನಸಿಕ ಸ್ಥಿತಿಯ ಬಗ್ಗೆ ಅವನಲ್ಲೀಗ ನಿಜವಾಗಿ ಅನುಕಂಪ ಹುಟ್ಟಿತ್ತು.

* * *

ಮತ್ತೆ ರೈಲು ನಿಲ್ದಾಣಕ್ಕೆ ಬಂದರೆ ರೈಲಿನ್ನೂ ಬರಲು ವೇಳೆ ಇತ್ತು. ಆದರೂ ಜನರ ನೂಕುನುಗ್ಗಲಿಗೇನೂ ಕೊರತೆ ಇರಲಿಲ್ಲ. ನೋಡುತ್ತ ನರಹರಿಗೆ ಸೀಟು ಸಿಗುವ ಬಗ್ಗೆ ಅನುಮಾನ ಶುರುವಾಯಿತು. ಇಂದು ಮಾತ್ರ ಒಂದೆಡೆ ಕೂತು ತಾಯಿಯ ಪುರಾಣದಲ್ಲಿ ಮಗ್ನಳಾಗಿ ಬಿಟ್ಟಿದ್ದಾಳೆ. ಓದಿನಲ್ಲಿ ಅವಳಿಗಿರುವ ಆಸಕ್ತಿ ನೋಡಿ ಅವನಿಗೆ ತುಂಬ ಹಿತ ಅನ್ನಿಸದೆ ಇರಲಿಲ್ಲ.

''ರೈಲು ಒಂದು ಗಂಟೆ ತಡವಂತೆ.'' ಹತ್ತಿರ ಬರುತ್ತ ದೇಸಾಯರು ಹೇಳಿದರು, ''ಕಾಯದೆ ವಿಧಿ ಇಲ್ಲ'' ದನಿಯಲ್ಲಿ ಬೇಸರವಿತ್ತು.

ರೈಲು ಬರುವುದು ಹೇಗೂ ಗೊತ್ತಾಗದೆ ಇರಲ್ಲ ಎಂಬ ಕಾರಣದಿಂದ ನಿಲ್ದಾಣದ ಆಚೆಗಿದ್ದ ಒಂದು ಮರದ ನೆರಳಿಗೆ ಸಾಗಿ ಒಬ್ಬೊಬ್ಬರೇ ಕಾಲುಚಾಚಿದರು. ಸಂಜೆ ಯಾಗುತ್ತ ಬಂದಿದ್ದರೂ ಬಿಸಿಲ ಧಗೆಯೇನೂ ಕಡಿಮೆ ಆಗಿರಲಿಲ್ಲ. ನರಹರಿ ಇಂದು ಜತೆ ತುಸುದೂರ ಮತ್ತೊಂದು ಮರದಡಿ ಕೂತ. ಆದರೆ ಅವನ ನಿರೀಕ್ಷೆ ಮೀರಿ ರತ್ನಾ ಅವಳ ಜತೆ ಬಂದುಬಿಟ್ಟಳು. ಅವಳು ಮುಗ್ಧಳು. ಹಾಗೇನೂ ಅವನಿಗೆ ಭಾಸವಾಗಿಲ್ಲ. ಹಾಗಾದರೆ ಮಾನಸಿಕವಾಗಿ ಒಂದಿಷ್ಟು..

''ರೀ, ಇಲ್ಲಿ ನೋಡಿ'' ಇಂದು ನರಹರಿಯ ತೋಳಿಗೆ ಆತುಕೊಂಡಿದ್ದವಳು ಥಟ್ಟನೆ ಅವನ ಗಮನ ಸೆಳೆಯುವಂತೆ ಹೇಳತೊಡಗಿದಳು: ''ಈ ಪುಸ್ತಕದಲ್ಲಿ ಎಷ್ಟೊಂದು ಪವಾಡ ಮಾಡಿದಾಳೆ ಅಂಬೂತಾಯಿ. ಒಂದು ಪವಾಡ ನೋಡಿ. ಮನೇಲಿ ಕಟ್ಟಿಗೆ ಇರಲಿಲ್ಲವಂತೆ. ಮನೆಗೆ ಬಂದ ಅತಿಥಿಗಳಿಗೆ ಊಟಕ್ಕೆ ತಡವಾಗಬಾರದು ಅಂತ ಅಂಬೂತಾಯಿ ಮಗನ ಕೈಕಾಲು ಮುರಿದು ಒಲೆಹೊತ್ತಿಸಿ ಅಡಿಗೆ ಮಾಡಿ ಬಡಿಸಿದಳಂತೆ!''

ನರಹರಿಯ ಎದೆ ಧಸಕ್ಕೆಂದಿತು. ಕೆಲವು ನಿಮಿಷಗಳ ಹಿಂದಷ್ಟೇ ರತ್ನ ಹೇಳಿದ ಸಂಗತಿ ಪವಾಡದ ರೂಪದಲ್ಲಿ ಪ್ರತ್ಯಕ್ಷವಾಗಿಬಿಟ್ಟಿದೆ!

''ಇನ್ನೊಂದು ಗೊತ್ತಾ!'' ಇಂದು ತುಂಬ ಉತ್ಸಾಹ ದಲ್ಲಿರುವ ಭಾಸ. ''ಈ ನದಿ ಈ ಊರಿನಿಂದ ನಾಲ್ಕು ಮೈಲು ದೂರದಲ್ಲಿತ್ತಂತೆ. ಅಂಬೂತಾಯಿ ಪ್ರಾರ್ಥನೆ ಮಾಡಿದ ಕೂಡಲೇ ಊರಿನ ಪಕ್ಕವೇ ಹರಿದುಬಂತಂತೆ.''

''ಹಾಗೇನೂ ಇರಲಾರದು'' ನರಹರಿ ಹೇಳಿದ. ''ಒಂದೊಂದು ಸಲ ವಿಪರೀತ ಮಳೆ ಆಗಿಬಿಟ್ರೆ ಮಣ್ಣು ಕೊಚ್ಚಿಹೋಗಿ ನದಿಯ ಪಾತ್ರ ಬದಲಾಗಿಬಿಡುವ ಸಂಭವ ಇದೆ. ಅದಕ್ಕೆ ಪವಾಡದ ಬಣ್ಣಹಾಕಿದಾರೆ ಅಷ್ಟೇ.'' ಮತ್ತೆ ಅದೇಕೋ ಅವನ ನೋಟ ರತ್ನಾಳತ್ತ ಹೋಯಿತು. ಅವಳು ಹೌದು ಎಂಬಂತೆ ತಲೆ ಆಡಿಸುತ್ತಿದ್ದಾಳೆ! ಆದರೆ ಇಂದೂಗೆ ಯಾರತ್ತಲೂ ಗಮನವಿಲ್ಲ. ಅವಳು ಅಂಬೂತಾಯಿಯ ಪವಾಡಗಳಿಗೆ ಪೂರ್ತಿಯಾಗಿ ಮಾರುಹೋದಹಾಗಿತ್ತು.

''ಇದಂತೂ ತೀರ ವಿಚಿತ್ರ. ಸತ್ತವಳನ್ನು ಅಂಬೂತಾಯಿ ಬದುಕಿಸಿದಳಂತೆ.'' ಇಂದೂ ಮಾತಿಗೆ ಏನು ಹೇಳುವುದೋ ಎಂದು ನರಹರಿ ಯೋಚಿಸುವ ಮೊದಲೇ ಇದ್ದಕ್ಕಿದ್ದಂತೆ ರತ್ನಾ ಥಟ್ಟನೆ ಹೇಳಿದಳು,

''ಹಾಗೇನೂ ಇಲ್ಲ. ಆಕೆ ಸತ್ತಿರಲಿಲ್ಲ. ಎಚ್ಚರ ತಪ್ಪಿತ್ತು ಅಷ್ಟೇ.''

ಇಂದೂಗೆ ವಿಸ್ಮಯ. ಅನುಮಾನದಿಂದ ರತ್ನಾಳನ್ನು ನೋಡುತ್ತ ಕೇಳಿದಳು: ''ನಿಮಗೆ ಹೇಗೆ ಗೊತ್ತು ಇದೆಲ್ಲ?'' ನರಹರಿ ಊಹಿಸಿದ್ದ. ಈ ರತ್ನಾ ಚಾಣಾಕ್ಷೆ. ಬುದ್ಧಿಶಕ್ತಿಯನ್ನು ಅನುಕೂಲಕ್ಕೆ ತಕ್ಕಂತೆ ಬಳಸಿಕೊಳ್ಳುತ್ತಾಳೆ. ಎದುರಿಗಿದ್ದವರ ದೌರ್ಬಲ್ಯಗಳ ಅಳತೆ ಮಾಡುತ್ತಾಳೆ. ಅಂಬುತಾಯಿಯ ದಂತಕತೆಗಳಿಗೆ ತನ್ನದೇ ಆದ ಹೇಳಿಕೆಗಳನ್ನು ಸೃಷ್ಟಿ ಮಾಡುತ್ತಾಳೆ.

ಒಂದು ವೈಶಿಷ್ಟ್ಯ ಮಾತ್ರ ಅವನು ಗುರುತಿಸಿದ್ದ. ಯಾವ ಸಂದರ್ಭದಲ್ಲೂ ರತ್ನಾ ಅಂಬೂತಾಯಿಯ ಪವಾಡಗಳನ್ನು ಸಮರ್ಥಿಸಿರಲಿಲ್ಲ. ಅವುಗಳಲ್ಲಿರುವ ಪೊಳ್ಳುತನವನ್ನು ಬಯಲು ಮಾಡಿದ್ದಳು. ತಾನು ಅಂಬೂ ತಾಯಿಯ ಅವತಾರ ಎಂದು ಹೇಳಿಕೊಳ್ಳುತ್ತಲೇ ಅಂಬೂ ತಾಯಿಯ ಮಹಿಮೆಯನ್ನು ರತ್ನಾ ನಿರಾಕರಿಸು ವುದೇಕೆ? ಇದರಲ್ಲಿ ನಿಜ ಯಾವುದು, ಸುಳ್ಳು ಯಾವುದು?

''ನನಗೆಲ್ಲಾ ಗೊತ್ತಿದೆ.'' ಇದ್ದಕ್ಕಿದ್ದಂತೆ ರತ್ನಾ ಭಾವುಕಳಾಗಿ ಹೇಳತೊಡಗಿದಳು. ''ಜಗತ್ತು ಎಷ್ಟೆಲ್ಲ ಬದಲಾಗಿಬಿಟ್ಟಿದೆ. ನಾನು ಚಿಕ್ಕವಳಿದ್ದಾಗ ಅನ್ನಪೂರ್ಣೇಶ್ವರಿಯನ್ನು ಪೂಜೆ ಮಾಡ್ತಿದ್ದೆ. ಈಗ ನೋಡಿ, ಆ ದೇವಿಯನ್ನು ಹಿಂದೆ ಸರಿಸಿ ಮತ್ತೊಂದು ದೊಡ್ಡ ವಿಗ್ರಹ ಸ್ಥಾಪನೆ ಮಾಡಿ ಅದಕ್ಕೆ ನನ್ನ ಹೆಸರಿಟ್ಟು ಅರ್ಚನೆ ಮಾಡ್ತಿದಾರೆ. ದೇವಿ ಅನಿಸಿಕೊಳ್ಳೋದಕ್ಕೆ ನಂಗೆ ಮುಜುಗರ ಆಗ್ತಿದೆ. ಆದರೆ ನಾನೇನು ಮಾಡಲಿ! ನಾನು ಸತ್ತರೂ ನನ್ನ ನೆನಪು ಸಾಯಲಿಲ್ಲ. ಅದು ಈ ಜನ್ಮಕ್ಕೂ ಅಂಟಿಕೊಂಡು ಬಂದುಬಿಟ್ಟಿವೆ. ನಾನು ನಿಜವಾಗಿ ದೇವಿಯಾಗಬೇಕೆಂದು ಬಯಸಿರಲಿಲ್ಲ. ನನ್ನಲ್ಲಿ ಯಾವ ದೈವಿಕಶಕ್ತಿಯೂ ಇರಲಿಲ್ಲ. ಹಿಂದಿನ ಜನ್ಮದ ನಾನು ಈಗ ದೇವಿಯಾಗಿದೀನಿ ಅಂತ ಕೇಳಿ ರೋಮಾಂಚನಗೊಂಡೆ. ಕುತೂಹಲದಿಂದ ಬಂದೆ. ಆದರೆ ಇಲ್ಲಿ ನನ್ನ ಹೆಸರಿನಲ್ಲಿ ನಡೆಯೋದೆಲ್ಲ ಬರೀ ಕಪಟತನ. ಮೋಸ-ವ್ಯಾಪಾರ. ಇದೆಲ್ಲ ಹೇಗಾಯಿತೋ ನನಗೆ ಅಚ್ಚರಿ. ವಿಷಾದ ಸಹ. ಖಂಡಿತ ಇನ್ನೊಂದು ಸಲ ಇಲ್ಲಿಗೆ ಬರುವ ತಪ್ಪು ಮಾಡೋದಿಲ್ಲ ನಾನು.''

ಇಂದು ಬೆರಗಾಗಿದ್ದಳೋ - ಭೀತಳಾಗಿದ್ದಳೋ - ರತ್ನಳ ಕಡೆಗಿನ ಅವಳ ನೋಟ ಮಾತ್ರ ಅನುಮಾನದಿಂದ ಮುಕ್ತವಾಗಿರಲಿಲ್ಲ. ಗಂಡನ ಹತ್ತಿರಕ್ಕೆ ಇನ್ನಷ್ಟು ಸರಿಯುತ್ತ ಕಂಪಿಸಿದಳು. ''ಏನ್ರೀ ಇದು. ಏನು ಹೇಳ್ತಿದ್ದಾಳೆ ಈಕೆ?'' ಎಂದು ಪಿಸುಗುಟ್ಟಿದಳು. ''ಹೆದರುವ ಅವಶ್ಯಕತೆ ಏನೂ ಇಲ್ಲ, ಆಕೆ ತುಂಬ ಒಳ್ಳೆಯವಳು'' ನರಹರಿ ಹೆಂಡತಿಯನ್ನು ಸಂತೈಸಿದ.

''ಇನ್ನೊಂದು ಕೊನೆಯ ಮಾತು ಹೇಳೋದಿದೆ,'' ರತ್ನ ಮತ್ತೆ ಶುರುಮಾಡಿದಳು: ''ನಿಮ್ಮ ತಾಯಿ ನನಗೆ ತಂಗಿ ಆಗಿದ್ಲು. ಈಗ ನಾವು ಇಂಥದೊಂದು ವಿಲಕ್ಷಣ ಸನ್ನಿವೇಶದಲ್ಲಿ ಭೇಟಿಯಾದದ್ದನ್ನು ಆಕೆಗೆ ಹೇಳಿ. ಅವಳಿಗೆ ಸಂತೋಷವಾಗದೆ ಇರಲ್ಲ...''

ನರಹರಿ ಮುಗುಳ್ನಕ್ಕ. ಈಗ ಈಕೆಯ ಪವಾಡ ಬಯಲಾಗುತ್ತದೆ ಎಂಬ ಸಂಭ್ರಮದಲ್ಲಿ ತಕ್ಷಣ ಮರು ನುಡಿದ, ''ಅವಕಾಶವೇ ಇಲ್ಲ, ನನ್ನ ತಾಯಿ ತೀರಿಕೊಂಡು ೩ ವರ್ಷ ಆಯ್ತು.''

ಈ ಮಾತಿಗೆ ಆಕೆಯಿಂದ ಬಂದ ಪ್ರತಿಕ್ರಿಯೆ ಮಾತ್ರ ಊಹಿಸುವ ಹಾಗೇ ಇರಲಿಲ್ಲ.

''ಆದರೇನಾಯ್ತು. ಸತ್ತವರು ಮತ್ತೆ ಹುಟ್ಟಿ ಬರದೇ ಇರ್ತಾರಾ? ಈಗ ನಾನು, ನೀವು ಹುಟ್ಟಿಬಂದಿಲ್ಲವೇ! ಹಾಗೇ ನನ್ನ ತಂಗಿಯೂ ಹುಟ್ಟಿ ಬರ್ತಾಳೆ, ಮುಂದಿನ ವರ್ಷ ನಿಮ್ಮ ಮಗಳಾಗಿ. ಆವಾಗ ಹೇಳಿ.''

''ಏನ್ರೀ ಇದು – ನೀವು ಯಾರು, ಅವಳು ಯಾರು? ನಿಮ್ಮಿಬ್ಬರಿಗೆ ಹೇಗೆ ಪರಿಚಯ?'' ಎಂದೆಲ್ಲ ಪರಿತಾಪ ದೊಂದಿಗೆ ಇಂದು ಒಂದು ಬಗೆಯಾಗಿ ತನ್ನತ್ತ ನೋಡುತ್ತಿದ್ದರೆ ನರಹರಿ ಇವಳ ಆತಂಕ ಕಡಿಮೆ ಮಾಡುವುದು ಹೇಗೆ ಎಂದು ಯೋಚಿಸುತ್ತಿದ್ದ.

ಅಷ್ಟರಲ್ಲಿ ರೈಲು ಬರುವ ಸೂಚನೆಯಾಗಿ ಗಂಟೆ ಬಾರಿಸಿ ಒಡನೆಯೇ ಮಲಗಿದವರೆಲ್ಲ ಗಡಬಡಿಸಿ ಎದ್ದು ನಿಲ್ದಾಣದಲ್ಲಿ ಅನವಶ್ಯಕ ಗದ್ದಲ ತುಂಬಿಕೊಳ್ಳುತ್ತದೆ.

**ರಾಮಚಂದ್ರ ಭಾವೆ**
ಎಸ್-೭, 'ಬಿ' ವಿಭಾಗ
ರಾಮಚಂದ್ರ ಅಪಾರ್ಟ್‌ಮೆಂಟ್ಸ್, ಕಾಂಗ್ರೆಸ್ ಭವನದ ಹತ್ತಿರ
ರತ್ನಗಿರಿ - ೪೧೫ ೬೧೨, ಮಹಾರಾಷ್ಟ್ರ

ವೆಂಕಟೇಶ್ ಉಪ್ಪಾರ



# ಸೂರ್ಯ ಸಂತಾನ

*ಹಬ್ಬಕ್ಕೆ ತಂದ ಹರಿಕೆಯ ಕುರಿ*
*ತೋರಣಕ್ಕೆ ತಂದ ತಳಿರವ ಮೇಯಿತ್ತು.*

– ಬಸವಣ್ಣ

ಕಿಲ್ಲೆದಗುಡ್ಡದ ಮರೆಯಂಚಿಗೆ ಆಗತಾನೆ ಸೂರ್ಯ ಅಸ್ತಮಿಸುತ್ತಿದ್ದ. ಉಡಚ ತ್ಯಾಪೆ ಹಾಕಿದ ಚಡ್ಡೀನ ನಡಿಗೇರಿಸುತ್ತಾ 'ಅರೇ ಬಾತ್ಕೋಳಿ ಯೆಸ್ಟ ಸಂದದ! ಯಲ್ಲಿ ಚಿಕ್ತು!' ಅಂತ ಗಿಳಿಯಂತೆ ಬಾಗಿದ ಆ ಹಕ್ಕಿ ಕೊಕ್ಕು ಮಟ್ಟಲು ತಡವರಿಸುತ್ತಿದ್ದ. ಹಿಂದಿದ್ದ ಅಲುಗ ತನ್ನ ಕಟ್ಟಿಗೆಯಂತ ಒಡಕಲು ಕೈಗಳಿಂದ ಆ ಪಕ್ಷಿಯ ನಸುಗೆಂಪು ಪಾದಗಳನ್ನು ಸ್ಪರ್ಶಿಸಲು ಹಾತೊರೆಯುತ್ತಿದ್ದ. ಇನ್ನು ಸೇಬು ಬೆಳ್ಳನೆ ಕೆನೆಯಂತೆ ಮಿರುಗುವ ಆ ಪುಕ್ಕಗಳತ್ತಿರ ತನ್ನ ಸಿಂಬಳಸ್ಫುರಿತ ನಾಸಿಕ ಒಯ್ದು ನಾವೇನು ಎಂಥದ್ರಲ್ಲಿ ಯಾವುದ್ರಲ್ಲಿ ಕಡಿಮೆಯೇನು ಎಂದು ವಕ್ರ, ಧೂಳ, ಚಿಟ್ಟೆ, ಆ ಗುಲಾಬಿ ವರ್ಣದ ಸಮುದ್ರಗಿಳಿಯಂತ ಪಕ್ಷಿಯನ್ನು ಮುಟ್ಟುವ ಆತುರದಲ್ಲಿದ್ದರು.

ಕೊರಕ್, ಕೊರಕ್ ಎಂದು ಕೊರಳಲ್ಲಿ ಸಪ್ತಸ್ವರ ನಾದಿಸುವ ಹಾಪಿನಂತ ಉದ್ದಗೋಣಿನ ಆ ಪಕ್ಷಿಯನ್ನು ಗಾಳಿ ತನ್ನೆದೆಗೆ ಒಲು ಜೋಪಾನದಿಂದ ಬಿಗಿದಪ್ಪಿ ಕೊಂಡಿದ್ದ. ಈ ಸನ್ನಿವೇಶವನ್ನು ದೂರದಿಂದ ಯಾರಾದರೂ ವೀಕ್ಷಿಸಿದರೆ ಹಿಂದೊಮ್ಮೆ ಕ್ರಿಕೇಟಿನಲ್ಲಿ ವಿಶ್ವಕಪ್ ಗೆದ್ದಾಗ ಕಪಿಲ್‌ದೇವ್ ಕಪ್ಪು ಆಲಿಂಗಿಸಿ ಕೊಂಡಂತಿತ್ತು. ಮನುಷ್ಯರ ಸಹವಾಸದಿಂದ ದೂರವಿರುವ ಆ ಪಕ್ಷಿಯನ್ನು ಈ ಪೀಡೆಗಳ ಕೈ ತಾಕಬಾರದೆಂದೇ ಗಾಳಿ ಆ ಪಕ್ಷಿಯನ್ನು ಜಾಗ್ರತೆಯಿಂದ ರಕ್ಷಿಸಿಕೊಂಡು ತನ್ನ ಕೇರಿಯತ್ತ ಹಾದಿದ್ದ, ಈ ಇಕ್ಕಟ್ಟಾದ ಕೇರಿಯ ಸಂದಿಯಲ್ಲಿ ಅವನು ಎಡೆತಾಕುವಾಗ ಸಣ್ಣ ಹುಡುಗರ ಗುಂಪು ಬಿಳಿ ಬಿಳಿ ಕೋಳಿ ಅಂತ ಅವನಿಂದ ಮುಜುಗರದಲ್ಲಿ ಸಾಗಿಬಂತು. ಹಾಗೆ ಸಡಗರ, ಸಂಭ್ರಮ ಮೈವೆತ್ತಿಕೊಂಡವನಿಗೆ ಇವತ್ತು ತನ್ನಪ್ಪ ಸುಮ್‌ಸುಮುಕೆ ಊರ ಎಮ್ಮಿ ಕಾದು ಎಮ್ಮಲೀ ಅನ್ಸಿಕೋಬಾರ್ದಲೇ, ಸಾಲಿಗ್ಹೋಗಿ ವಂದಷ್ಟು ಇದ್ಯಾ ಕಲಿ, ಬುದ್ಧಿ ಬರ್ತಾದಂತ ದಿನಾ ಕೀಲಾಸು ತಗದು ತನ್ನ ಬರ್ಲೀ ಎಮಿಕೆಗೆ ಏಟು ಬಿಗಿತ್ತಿದ ವುಜಾಲಿ ಇಂದು ತನಗೆ ಬೈಯದೆ ಭಳಿರೇ ಭಪ್ಪರೇ ಗಂಡು ಅಂತ ತನ್ನ ಉರಿಮೀಸಿ ತಿರುವಿ ಅರೇ, ರಾಜಕುಮಾರ ಇಂದೆಂಥ ಸೀಮೆಕೋಳಿ, ಇದು ಸೇಮು ಕೊಕ್ಕರೆಯಂಗಿದೆಯಲ್ಲ. ನಾ ಈ ಜಲುಮದಲ್ಲಿ ಇಂತಾ ಪಚ್ಚಿನಾ ನೋಡುತ್ತಿದ್ನೋ ಇಲ್ನೋ ಎಂಬ ಖುಸಿಯಲ್ಲಿ ಇಚಲುಗರಿ ಹೊದಿಸಿದ ಚಪ್ಪರದೆತ್ತರಕೆ ನೆಗೆದು ತನ್ನ ಗಲ್ಲಕ್ಕೆ ಮುದ್ದಿಟ್ಟು ಶಹಬ್ಬಾಷ್ ವಂಶೋದ್ಧಾರಕನೆ ಅಂತ ತನ್ನ ಕೊಂಡಾಡಿ ಅಟ್ಟಕ್ಕೆ ಏರಿಸಬಹುದಂತ ಗಾಳಿ ಜೋಪುಡಿಗೆ ಹೊಕ್ಕುವ ಮುನ್ನಾ ಅಂದುಕೊಂಡ.

ಆಕಸ್ಮಾತ್ ನಿಧಿ ಒಲಿದಾಗ ಉಲ್ಲಸಿತಗೊಂಡಂತೆ ಉಲ್ಲಾಸುತ್ತಿರುವ ಗಾಳಿಗೆ ಈ ನಾಲ್ಕು ಅಡಿಯೆತ್ತರದ ಪಕ್ಷಿ ಪ್ರಾಪ್ತಿಯಾಗಿದ್ದು ಆ ಕಾಲುವೆಯಲ್ಲಿ. ಸಂಜೀಮುಂದೆ ತಂಬಿಗೆಯಿಲ್ಲದೆ ಕಾಲುವಿ ಕಡೆ ದೊಡ್ಡಿಗೆ ಹೋಗಿ ಹರಿದ ಜಲರಾಶಿಯಲ್ಲಿ ಗಾಳಿ ತನ್ನ ತಿಕವನ್ನು ಶುಚಿಗೊಳಿಸುತ್ತಿದ್ದ. ಕಿಲ್ಲೇದಗುಡ್ಡ ಅಲ್ಲೇದಂಚಿಗೆ ಇಳಿಯುವ ಸೂರ್ಯ ಹೊಂಗಿರಣದ ಸೊಗಸಾಗಿ ಆ ಜಲದಲ್ಲಿ ಚೆಲ್ಲಿದ್ದ. ಅದು ಹೊನ್ನಿನ ಬಣ್ಣದಂತೆ ಥಳಪಳಿಸುತ್ತಿತ್ತು. ಅವುಡು ತೊಳೆದು ಕೊಂಡ. ಗಾಳಿ ಕೆಲಹೊತ್ತು ಆ ನೀರನ್ನು ಬೊಗಸೆಯಲ್ಲಿಡಿದು ಸಂತಸದಿಂದ ಮೇಲೆ ಎರಚಿ ಗೊಂಡ. ಆಗವ ಮೈಮನ ಮುದಗೊಂಡಂತಾಗಿ ಈ ಹರಿವ ಗಂಗೆ ನೀರಲ್ಲಿ ಯಾವ ಹೊಲಸಿರದೆನಿಸಿ, ಆ ನೀರನ್ನು ತಾ ಬಾಯಿಗಾಕಿಕೊಳ್ಳಬೇಕೆನಿಸಿತು. ಆ ನೀರು ಚೆಲ್ಲಿ ಮುಂದಿನ ಹರಿವಿನ ನೀರಿಗೆ ಕೈಯೊಡ್ಡಿದಾಗ ಎದುರಿಗೆ ಅನತಿ ದೂರದಲ್ಲಿ ಸರ್ಪವೊಂದು ಹೆಡೆಯೆತ್ತಿ ಬಂದಂತೆನಿಸಿತು. ಭಯ, ಭೀತಿಗೊಂಡವ ತಕ್ಷಣ ದಡಕ್ಕೆ ನೆಗೆದ. ಇವನವ್ವನ ಇದಾವ ಜಾತಿಯ ಹಾವು ನೋಡೇ ಬಿಡೋಣವೆಂದು ಗಡ್ಡೆ ಮೇಲಿನ ಒಂದೆರಡು ಕಲ್ಲನ್ನು ತುದಿಯಲ್ಲಿಡಿದು ಗಾಳಿ ಗಟ್ಟಿಗ ನಿಂತ. ಎವೆ ಮಿಟುಕಿಸದೆ ನಿಂತವನು ವಿಲಕ್ಷಣದಲ್ಲಿ ಅರೇ ಅದೆಲ್ಲಿ ಮುಳುಗಿ ಮಾಯವಾಯ್ತು? ಅಂತ ಹಾವು ಕಾಣದಿದ್ದಕ್ಕೆ ಮಿಡುಕಿ ಈ ಬಿಳಿ ಮೂತಿಯ ನೀರುಕೋಳಿ ಎಲ್ಲಿಂದ ಪ್ರತ್ಯಕ್ಷ ವಾಯ್ತೆಂದು ಆಶ್ಚರ್ಯಪಟ್ಟ. ಈ ನೀರುಕೋಳಿಯನ್ನೇ ತಾನು ಹಾವಂತ ಅಂಜಿದ್ದಕ್ಕೆ ಅಚ್ಚರಿಪಟ್ಟ. ಅವ ದಿಢೀರ ನೀರಿಗೆ ಧುಮುಕಿದವನೇ ಅದನ್ನಿಡಿದು ಎಂಥ ಪಕ್ಷಿ, ಇದೆಂಥ ಪಕ್ಷಿಯಂತ ಬೆಕ್ಕಸಬೆರಗಾಗಿ ಗಾಳಿ ಪ್ರೀತಿಯಿಂದ ಆ ಪಕ್ಷಿಯನ್ನು ದಡಕ್ಕೆ ಹೊತ್ತು ತಂದ.

ಅನ್ನಕ್ಕೆ ದಂಡ ಭೂಮಿಗೆ ಭಾರದಂತಿದ್ದ ವುಜಾಲಿ ರಾತ್ರಿ ಷರಬತ್ತಿನ ಸುವಾಸನೆಯ ಕಂಪಿನೊಂದಿಗೆ ಮನೆ ತಾಕಿದ. ಇನ್ನೇನು ವುಜಾಲಿ ತನ್ನ ಕ್ಲಾಸು ತೆಗೆದುಕೊಳ್ಳು ವನೆಂದು ಗಾಳಿ ಅಂಜಿ ಕತ್ತಲಿಗೆ ಕುಂತ, ವುಜಾಲಿ ಕತ್ತಿನಿಂದ ಅಡಿವರೆಗೆ ಒಂದೇ ಗುರಿಯಿಟ್ಟು ತದೇಕಚಿತ್ತದಿಂದ ಚಪ್ಪರದ ನಡುಗಂಬಕ್ಕೆ ಉರಿ ಬಿಗಿದ ಪಕ್ಷಿಯನ್ನು ನೋಡಿದ. ಬೀಡಿಯ ದಮ್ಮೆಳೆದು ಹೊಗೆ ಬಿಟ್ಟ. ಆತಂಕದಲ್ಲಿ ಅರೆಗಣ್ಣು ತೆರೆದು ಮುಚ್ಚುವ ಆ ಪಕ್ಷಿ ನೆಲದ ಮೇಲೆ ನಿದ್ದೆಬಾರದೆ ಹೊರಳಾಡುತ್ತಿದ್ದ ಗಾಳಿಯ ಮಡಿಲ ಬಳಿ ಅಡಗಿತ್ತು. ಆ ಹಕ್ಕಿಯ ಅಂದ-ಚಂದಲ್ಲೇ ಮಗ್ನನಾದ ಗಾಳಿಗೆ ಆ ಪಕ್ಷಿಯ ಆ ಸೌಖ್ಯದಿಂದ ಅತೀವ ಆನಂದ ವಾದಂತಾಯಿತು. ಇವತ್ತಾದ್ರೂ ಸುಮ್ನೇ ಬಿಳು... ಬರೋ ಬೇಸ್ತವಾರ ವಸ ಸೀರಿ ಕುಬಸ ತೊಂತಿಯಂತೆ ಅಂತ ಅಪ್ಪ ಅಮ್ಮನಿಗೆ ಅಕ್ಕರೆಯಿಂದ ಉಸಿರಿದ್ದು ಕೇಳಿಸಿಕೊಂಡ ಗಾಳಿ ವರ್ಷದಲ್ಲೆರೆಡು ಅರಕು ಸೀರಲ್ಲಿ ಮಾನ ಮುಚ್ಚಿಕೊಳ್ಳುವ ಅಮ್ಮನಿಗೆ, ಈಯಪ್ಪ ನಟ್ಟು ಕಡಿದು ಬಂದೇನಾದ್ರು ಕೊಡಿಸುತ್ತಾನೆಂದು ಅವನ ಮಡಿಕೆಯನ್ನು ಸಹಜವಾಗಿ ಆಟ ಮಾಡಿದ. ತಾನು ಬರೆ ಬೀಸಿ ತಂದಿರುವ ಈ

ಪಕ್ಷಿಯನ್ನು ಬರೋ ಭಾನುವಾರ ಚೂರಿ ಹಾಕಿ ಕುಪ್ಪೆ ಮಾಡಿದರೆ ಐದುನೂರಾದರೂ ಕೈತಪ್ಪುವುದಿಲ್ಲವೆಂಬ ವುಜಾಲಿಯ ಲೆಕ್ಕಾಚಾರ ನಿದ್ರೆಗಿಳಿದ ಗಾಳಿಯ ಅರಿವೆಗೆಲ್ಲಿ ತಾಕಬೇಕು ?

ಎಂದಿಲ್ಲದೊಂದು ದಿನ ತನ್ನ ಚಪ್ಪರದಂತ ಅರಮನೆಗೆ ತನ್ನ ಗುರುದೇವೋ ಭವ ಸಕಲ ಕಲಾ ಪಂಡಿತ ಮೂರ್ತಿಯವರು ಪಾದಂಗಳಗೈದಿದ್ದಕ್ಕೆ ಅವರ ಮೆಚ್ಚಿನ ಶಿಷ್ಯ ಶಿರೋಮಣಿ ಗಾಳಿಗೆ ತನ್ನ ಇಡೀ ಜನ್ಮವೇ ಪಾವನವಾದಂತಾಯಿತು. ಆರನೇ ವರ್ಗದಲ್ಲಿ ತನಗೆ ಸಮಾಜ ಇಜ್ಞಾನ ಬೋಧಿಸುವ ದೊಡ್ಡ ತಲೆಯ ಮೇಷ್ಟ್ರು ತಾನಿಂತ ಅಪರೂಪದ ಪಕ್ಷಿನಾ ಸಂರಕ್ಷಿಸಿದ್ದಕ್ಕೆ ಎಲ್ಲಾ ಶಾಲಾ ಹುಡುಗರ ಮುಂದೆ ತಾನು ಸೂರ್ಯಸಂತಾನದ ಸಂತತಿ ಅಲ್ಲ, ಮಬ್ಬು ನನ್ಮಕ್ಕಳ ಸಾಲಿಗೆ ಇನ್ನು ಮೇಲಂತೂ ತಾನು ಸೇರಲಿಕ್ಕಿಲ್ಲ! ಭಾಳ ತಿಳುವಳಿಕೆಯುಳ್ಳ ಜಾಣ ಹುಡುಗನಂತ ಇನ್ನು ಮುಂದಾದ್ರು ಈ ಸಿಡಕು ಮೇಷ್ಟ್ರು ತನ್ನ ಬಿರುದಾವಳಿಗಳಿಂದ ಸಂಪ್ರೀತಗೊಳಿಸದೆ ಇರಲಾರರು! ತನ್ನಂಥ ವಿಧೇಯ ವಿದ್ಯಾರ್ಥಿಯಿಂದ ಇಂದು ತನ್ನ ಶಿಕ್ಷಕ ಜೀವನ ಸಾರ್ಥಕವಾಯ್ತೆಂಬ ಆಣಿ ಮುತ್ತುಗಳಿಂದ ಈಗಲೇ ಹೊಗಳಬಹುದೆಂದು ಬಹಳ ನಿರೀಕ್ಷೆ, ಅಭಿಮಾನವಿಟ್ಟುಕೊಂಡಿದ್ದ ಗಾಳಿ, ಅದಕ್ಕಾಗಿ ಈ ಮೇಷ್ಟ್ರೇನಾದರೂ ಗ್ರಹ ಸೂರ್ಯನತ್ತ ತಿರುಗಿದಂಗೆ ತನ್ನ ಕಡೆಗೇನಾದರೂ ತಿರುಗಿಯಾನೆಂಬ ಯೋಚನೆಯೊಳಗೆ ಅವರನ್ನೇ ನೋಡಿದ. ಆದರೆ ಮೂರ್ತಿ ಮೇಷ್ಟ್ರ ದೃಷ್ಟಿ ತನ್ನ ಮೇಲಿರದೆ ಆ ಪಕ್ಷಿ ಮೇಲೇನೆ ಇತ್ತು.

ಪಕ್ಕದಲ್ಲಿದ್ದವರ್ಯಾರೋ ಆ ಪಕ್ಷಿಯ ಚರಿತ್ರೆ ತಿಳಿಯಲೆಂಬ ಇಷ್ಟದಲಿ ''ಇದು ಬಿಳಿ ಕೊಕ್ಕರೆ ನಾ'' ಮೇಷ್ಟ್ರನ್ನು ಪ್ರಶ್ನಿಸಿದ್ದೆ –

''ಇದ್ಯಾವ ಕೊಕ್ಕರಿ ಪಕ್ರಿ ಅಲ್ಲ. ಇದು ಗ್ರೇಟರ್ ಫ್ಲೆಮಿಂಗೊ'' ಅಂತ ಕ್ಲಾಸು ಒಂದೇಟಿಗೆ ತೆಗೆದೇಬಿಟ್ಟರು. ನಂತರ, ''ಇದನ್ನು ಕನ್ನಡದಲ್ಲಿ ರಾಜಹಂಸಂತ ಕರೇವರು. ಇದು ನಮ್ಮ ಪ್ರದೇಶದಲ್ಲ! ಆ ಗುಜರಾತಿನದು !! ಚಳಿಗಾಲ ಬಯಸಿ ಇದು ನಮ್ಮ ತುಂಗಭದ್ರ ಡ್ಯಾಂನಲ್ಲಿ ಮರಿ ಎಬ್ಬಿಸೋಕೆ ಬಂದಿದೆ. ಇದೊಂದು ಅಪರೂಪದ ಪಕ್ಷಿ'' ಅಂತ ವಿವರದೊಂದಿಗೆ ಆ ಪಕ್ಷಿಯ ಪರಿಚಯಸಿದ ಮೇಷ್ಟ್ರು.

ತರಗತಿಯಲ್ಲಿ ಯಾವ ಪಾಠದತ್ತ ಹೆಚ್ಚಿಗೆ ಗಮನವಿರಿಸದ ಗಾಳಿ ವಿಶೇಷ ಆಸಕ್ತಿವಹಿಸಿ ಆ ಪಕ್ಷಿಯ ಬಗ್ಗೆ ತಿಳಿದುಕೊಂಡ.

ಬೆಂಕಿಕಡ್ಡಿಯಿಂದ ಹಲ್ಲಿನ ಪಾಚು ಗೀರುತ್ತಿದ್ದ ವುಜಾಲಿಗೆ 'ಇಂಥ ಪಕ್ಷಿಗಳನ್ನು ತಂದು ಮನೆಯಲ್ಲಿ ಕೂಡಿ ಹಾಕಬಾರದೆಂದು' ತಿಳಿವಳಿಕೆಯನ್ನು ಮೇಷ್ಟ್ರ ತಂದಾಗ

''ಅದ್ರ ರೆಕ್ಕಾಗ ಗಾಯಗ್ಯಾದ, ಬುಟ್ರೆ ಯತ್ತಾಗಾದ್ರು ಒಡಾಂಗ್ಯೆತೆ ?'' ವುಜಾಲಿ ತಕ್ಕದಾಗಿ ಉತ್ತರಿಸಿದ.

''ಆದರೇನಂತೆ. ಅದನ್ನ ಕಾನೂನಿನ ವಶಕ್ಕೆ ಒಪ್ಪಿಸದೆ ಹೀಂಗಾ ಸಾಕೋದು ಅಪರಾಧ'' ಮೂರ್ತಿ ಮೇಷ್ಟ್ರು ರೂಲ್ಸ್ ಮುಂದಿಟ್ಟಾಗ ಅದರ ಮಾಂಸಭಕ್ಷಣೆಗೆ ಮೊದಲೇ ಮಸಾಲೆ ಉರಿದಿದ್ದ ವುಜಾಲಿ ಬಾಯಿಗೆ ಮಣ್ಣು ಬಿತ್ತನಿಸಿದಾಗ, ''ಯೇನು ಸಾ ಬೇಸು ಬೆದರಾಕ ಬಂದ್ರೀ. ಇಂತ ಕೊಬ್ಬಿರೋ ಪ್ರಾಣೀನಾ ಯಾವ ಉಚ್ಚನಾದ್ರು ಹಂಗೇ ಬಿಡ್ತನೇನು ? ನಡ್ರೀ ನಾಳಿ ನಿಮ್ಗೊಂದು ಕುಪ್ಪೆ ಕಳ್ಸುತೀನಿ'' ಮೇಷ್ಟ್ರನ್ನು ಸಮಜಾಯಿಸುವ ಯತ್ನಕ್ಕಿಳಿದ ವುಜಾಲಿ. ''ಅದ್ನ ಕತ್ರಿಸಿ, ಕುಪ್ಪೆ ಮಾಡಿ ತಿನ್ನು ಯಾರು ಬೇಡಂತಾರೆ ? ಆದ್ರೆ ನನ್ಗಾ ಮಾತ್ರ ಅದ್ರ ಮಾಂಸ ಕಳ್ಸಬೇಡ. ಆಮೇಲೆ ಪೊಲೀಸ್ರು ಬಂದು ಮಾವನ ಮನೆಗೆ ನಡಿಮಗ್ನೇ ಯೆಂದ್ರೆ ನಿನ್ನಿಂದೆ ನಾನೆಲ್ಲಿ ಬರ್ಲಿ...'' ಮೇಷ್ಟ್ರ ಈ ಬುದ್ಧಿಮಾತು ಕೇಳಲೊಪ್ಪದ ವುಜಾಲಿಗೆ ಖರ್ಜೂರ ಕಾಯಿ ಹಣ್ಣಾಗುವಾಗ ಬಾಯಿಗೆ ಹುಣ್ಣಾದಂತೆ ಆಗಿತ್ತು. ಅದಕ್ಕಾಗಿ ಅವ ''ಅಂಗಂದ್ರೆ ಇದ್ನ ಸರ್ಕಾರಕ್ಕ ಕೊಡಂತಿರೇನು ?'' ಅಂದ.

''ಹೌದು, ಈಗ್ಲೇ ಇದನ್ನ ಅರಣ್ಯ ಇಲಾಖೆ ಗೊಪ್ಪಿಸಿದರೆ, ಉಪಚರಿಸಿ ಕಾಡಿಗೆ ಬಿಡ್ತಾರೆ'' ಅಂತಂದ್ರು ಮೇಷ್ಟ್ರು. ಇದರ ತಂಟೆ-ತಗಾದೆ ನಮಗ್ಯಾಕೆ ? ನಿನ್ನೆಯಿಂದಲೇ ಊರು ಊರುನೇ ಈ ಪಕ್ಷಿಯನ್ನು ನೋಡಿ ಹೋಗ್ಯೆತಿ ! ಅಕಸ್ಮಾತ ಇದಕ್ಕೆ ಹೆಚ್ಚು ಕಮ್ಮಿಯಾದ್ರೆ ಆ ಸರ್ಕಾರದೋರು ನಮ್ಮನ್ನು ಇಚಾರಿಸದೆ ಸುಮ್ಮೆ ಬಿಡಾಕಿಲ್ಲಂತ ಧನಾತ್ಮಕವಾಗಿ ಆಲೋಚಿಸಿದ ವುಜಾಲಿ ಗೂಟಕ್ಕೆ ಬಿಗಿದ ಆ ಪಕ್ಷಿಯನ್ನು ಬಿಚ್ಚಿ ತರುವಂತೆ ಗಾಳಿಗೆ ಫರ್ಮಾನು ಹೊರಡಿಸಿದ. ತಕ್ಷಣ ಮೇಷ್ಟ್ರು ಐವತ್ತರ ನೋಟು ವುಜಾಲಿಯ ಜೇಬಿಗೆ ಭಕ್ಷೀಸೆಂದು ತುರುಕಿದಾಗ ಅವನಿಗೆ ಮಹದಾನಂದ. ಮೇಷ್ಟ್ರ ಮನೆತನಕ ಒಲ್ಲದ ಮನಸ್ಸಿನಿಂದ ಪಕ್ಷಿ ಹೊಯ್ದ ಗಾಳಿಯ ತನುವಿನೊಳಗೆ ಉಭಯಸಂಕಟ.

* * *

ಮೂರ್ತಿ ಮೇಷ್ಟ್ರು ರಾಜಹಂಸವನ್ನು ಅದೃಷ್ಟವೆಂಬಂತೆ ತನ್ಮಯತೆಯಲ್ಲಿ ಎತ್ತುಕೊಂಡಿದ್ದರು. ತಾದಾತ್ಮ್ಯತೆಯಿಂದ ಇಂಥ ಪಕ್ಷಿಯನ್ನು ಎತ್ತುಕೊಂಡ ಅವರು ತಮ್ಮ ಮೂರು ಹೆಣ್ಣುಮಕ್ಕಳನ್ನು ಒಮ್ಮೆಯೂ ಈ ರೀತಿ ಎತ್ತಿಕೊಂಡಿದ್ದರೋ ಇಲ್ಲವೋ. ಮೇಷ್ಟ್ರು ಪಕ್ಷಿಯನ್ನು ಅಕ್ಕರೆಯಿಂದ ಆಲಂಗಿಸುವ ಭಾವನಾತ್ಮಕ ದೃಶ್ಯಗಳನ್ನು ನಗರದಿಂದ ಹೊತ್ತು ತಂದಂತ ಕ್ಯಾಮರಾಗಳು ಭಿನ್ನ ವಿಭಿನ್ನ ಭಂಗಿಯಲ್ಲಿ ಕ್ಲಿಕ್ಕಿಸೇ ಕ್ಲಿಕ್ಕಿಸಿದವು. ದೂರದಲ್ಲಿ ಇದನ್ನು ಆಲಿಸುತ್ತಿದ್ದ ಗಾಳಿಗೆ ಯಾವುದೋ ಜನ್ಮದ ಅನುಬಂಧವೋ ಎಂಬಂತೆ ಇಡೀ ರಾತ್ರಿ ತನ್ನತ್ತಿರ ತೂಕಾಡಿಸಿ ತನ್ನಾಂತರ್ಯದೊಳಗೆ ಅವಿನಾಭಾವ ಸಂಬಂಧ ಬೆಸೆದಿರುವ ಆ ಪಕ್ಷಿಯೊಡನೆ ಒಂದು ಫೋಟೋ ತೆಗಿಸಿಕೊಳ್ಳಬೇಕೆಂಬ ಆಸೆ ಉಮ್ಮಳಿಸಿತು. ಆದರೆ ಅವನ ಉಮ್ಮಳಕ್ಕ ಉಪಕರಿಸುವವರ್ಯಾರು ?

ಟಿಪ್ಪುಟಾಪು ಡ್ರೇಸಿನಲ್ಲಿ ಬಂದವರು ಟೀ ಗುಟುಕರಿಸುತ್ತಲೇ ಮೇಷ್ಟ್ರು ಮುಂದೆ ಪಕ್ಷಿಯ ಕುರಿತು ನಾನಾ ಪ್ರಶ್ನೆ ಎಸೆದರು. ತಂದ ನೋಟ್ಸಲ್ಲಿ ಅದೇನೋ ಚೂರುಪಾರು ಗೀಚಿಕೊಂಡರು. ಗ್ರೇಟ ಫ್ಲೇಮಿಂಗ್‌ನ ಉಳಿಸಿ ಗ್ರೇಟಾದೀರಂತ ಬೆನ್ನು ತಟ್ಟಿದವರೂ ಇದನ್ನು ಹೋಗುವಾಗ ಫಾರೆಸ್ಟ್ ಡಿಪಾರ್ಟುಮೆಂಟವರಿಗೆ ಹ್ಯಾಂಡೋವರ್ ಮಾಡ್ತೇವೆ ಎನ್ನುತ್ತಾ ಕಾರು ಹತ್ತಿದರು. ಗಾಳಿ ಇವರಲ್ಲಿಗೆ ರಾಜಹಂಸ ಪಕ್ಷಿಯನ್ನು ಒಯ್ದುಕೊಟ್ಟ. ಕಾರು ಚಲಿಸುತ್ತಿರುವಂತೆ ಅದಕ್ಕೆ ಟಾಟಾ ಮಾಡಿದ. ಅವನ ಒಳತೋಟಿ ಕಂಪಿಸಿ ದುಃಖ ಒತ್ತರಿಸಿ ಕಣ್ಣೆವೆಗಳಲ್ಲಿ ಅಶ್ರುಬಿಂದುಗಳು ಪಟಸಿದವು.

''ಪ್ರಜಾವಾಣಿ ಪೇಪರ್ ನೋಡಿದೆನ್ಲೇ. ಅದ್ರೊಳಗ


**'ಹೊಸತು' ಚಂದಾ ನೋಂದಣಿಗೆ ಮತ್ತು ಸದಭಿರುಚಿಯ ಪುಸ್ತಕಗಳಿಗೆ ಕೆಳಕಂಡ ನವಕರ್ನಾಟಕ ಪುಸ್ತಕ ಪ್ರದರ್ಶನಗಳಿಗೆ ಭೇಟಿ ನೀಡಿ**

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಕಾರ್ಡೋಜ್ ಗ್ರಂಥಾಲಯದ ಆವರಣ, ಸ್ಟೇಷನ್ ರಸ್ತೆ, ಗದಗ - ೫೮೨ ೧೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಪರ್ಬೀನ್ ಟಾಕೀಸ್ ಬಳಿ, ಉದ್ಗೀರ್ ರಸ್ತೆ, ಬೀದರ್ - ೫೮೫ ೪೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಈಡಿಗರ ಹಾಸ್ಟೆಲ್ ಆವರಣ, ಕೋರ್ಟ್ ರಸ್ತೆ, ಬಳ್ಳಾರಿ - ೫೮೩ ೧೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಬೀರಲಿಂಗೇಶ್ವರ ದೇವಸ್ಥಾನದ ಆವರಣ, ಪಿ.ಬಿ. ರಸ್ತೆ, ದಾವಣಗೆರೆ - ೫೭೭ ೦೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಕನ್ನಡ ಸಾಹಿತ್ಯ ಭವನ ಆವರಣ, ಕಿತ್ತೂರು ರಾಣಿ ಚೆನ್ನಮ್ಮ ವೃತ್ತ, ಬೆಳಗಾವಿ - ೫೯೦ ೦೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಕಿತ್ತೂರ ಕಾಂಪ್ಲೆಕ್ಸ್, ದೇನಾ ಬ್ಯಾಂಕ್ ಬಳಿ, ಜೂಬಿಲಿ ಸರ್ಕಲ್, ಧಾರವಾಡ - ೫೮೦ ೦೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ಕನ್ನಡ ಸಾಹಿತ್ಯ ಭವನದ ಆವರಣ, ಕಲಾಭವನದ ಹತ್ತಿರ, ಪಾರ್ಕ್ ರಸ್ತೆ, ಹಾಸನ - ೫೭೩ ೨೦೧

**ನವಕರ್ನಾಟಕ ಪುಸ್ತಕ ಪ್ರದರ್ಶನ**
ವಿಶ್ವೇಶ್ವರಯ್ಯ ವಸ್ತು ಸಂಗ್ರಹಾಲಯ, ಮೊದಲನೇ ಮಹಡಿ, ಕಸ್ತೂರಬಾ ರಸ್ತೆ, ಬೆಂಗಳೂರು - ೫೬೦ ೦೦೧

ಮೂರ್ತಿ ಮೇಷ್ಟ್ರು ಮತ್ತು ಪಕ್ಷಿ ಫೋಟೋ ಬಂದೈತೆ'' ಎಂದು ತಾಜ ಸುದ್ದಿ ಗೆಳೆಯರ್ಹೇಳಿದಾಗ ಗಾಳಿಗೆ ಅಚ್ಚರಿ ಹಾಗೂ ಅಷ್ಟೇ ನೋವು ಅವನೊಳಗೆ. ತನ್ನೊಡನೆ ಒಲವಿನ ಸಾಂಗತ್ಯ ಬೆಳೆಸಿದ ಚೆಲುವಿನ ರೂಪದ ಪಕ್ಷಿಯ ನೆನಪು ಇಮ್ಮಡಿಸಿಕೊಂಡವನಿಗೆ ಇನ್ನೊಮ್ಮೆ ಆ ಪಕ್ಷಿಯ ಕಾಣಬೇಕೆಂಬ ಕಾತುರತೆ ಉದ್ಭವಿಸಿತು. ಮೊದಲು ಆ ಪಕ್ಷಿ ಇರುವುದೆಲ್ಲಿ ಎಂಬುದರ ತಿಳಿಯಲೋಸ್ಕರ ಹೆಡ್‌ಮೇಷ್ಟ್ರು ಇಲ್ಲದ ಅವಧಿಯಲ್ಲಿ ರೂಮಿನೊಳಕ್ಕೆ ತೂರಿ ಆ ಪೇಪರನ್ನು ಅಂಗಿಯಲ್ಲಿ ಅವಿತಿಟ್ಟುಕೊಂಡು ಬಂದ. ಮಧ್ಯಾಹ್ನದ ಬಿಡುವಿನಲ್ಲಿ ಈಶನೊಂದಿಗೆ ಆ ಪೇಪರ್ ವಾಚಿಸಿದಾಗ ಆ ಪಕ್ಷಿ ಬಳ್ಳಾರಿಯ ಕುಂಟಿಗಡ್ಡೆ ಕಿನಾರೆಯಲ್ಲಿ ಬೀಡು ಬಿಟ್ಟಿರುವ ಮಹತ್ವದ ಸಂಗತಿ ಗಾಳಿಗೆ ಗೊತ್ತಾಯಿತು.

ಗಾಳಿಯ ಕಂಗಳಾ, ಆಳದಲ್ಲೂ ತನ್ನ ಪ್ರತಿಬಿಂಬ ಒಡಮೂಡಿಸಿದ ಆ ರಾಜಹಂಸ ಪಕ್ಷಿ ನೆಲೆಯೂರಿರುವ ಬಳ್ಳಾರಿ ಎತ್ತಗಿದೆ ? ಅಲ್ಲಿಗೆ ಹೇಗೆ ಹೋಗುವುದೆಂಬ ಗಂಧ ಗಾಳಿಗಿಲ್ಲ. ಅವ್ವ ಸ್ಯಾನೆ ವರ್ಷಗಳ ಹಿಂದೊಮ್ಮೆ ಓಪಿಡೇಲಿ ಅಡ್ಮಿಟಾದಾಗ ಅಪ್ಪ ಅವನ್ನು ಹಿಂದಿಟ್ಟುಕೊಂಡು ಹೋಗಿದ್ದ ಅವನಲ್ಲಿ ಒಂದಿಷ್ಟು ಮಾಸದ ನೆನಪು. ಬಳ್ಳಾರಿ ಹೋಟುಲ್ಲುಗಳಲ್ಲಿ ಕಪ್ಪು ಬಸಿ ತೊಳೆದು ಅರ್ಧಕ್ಕೆ ಕೆಲಸ ತೊರೆದು ಬಂದ ಅನುಭವದ ಬಜಾರಿಯಲ್ಲಿ ಬಳ್ಳಾರಿಗೆ ಹೋಗುವುದೆಂಗೆಂದು ಚರ್ಚಿಸಿದ. ಚಾರ್ಜಿಟ್ಟು ಬಸ್ಸಲ್ಲಿ ಓಗಬೌದಂತ ಅವ ನುಡಿದಿದ್ದಕ್ಕೆ ಅವ ತೀಕ್ಷ್ಣವಾಗಿ ಅಲ್ಲಿಗೆ ನಡಿದ್ಹೋಗಲಿಕ್ಕೆ ಆಗೋಲ್ಲಂತ್ಲ ಕೇಳಿದ್ದ. ಅಷ್ಟು ದೂರ ನೀ ಕಾಲಿಗೇನು ಚಕ್ರ ಕಟ್ಗೊಂಟು ಓಗ್ತಿಯೇನು ? ಓಗೋದಾದ್ರೆ ಆರಾಮ್ಮಾಗಿ ಬಸ್ಸಿಗ್ಹೋಗಿಬಾಂತ ತಿಳಿ ಹೇಳಿದ್ದ ಬಜಾರಿ.

ಬಸ್ಸಲ್ಲಿಯೇ ಹೋಗುವುದ್ಹೇಗೆಂದು ಗಾಳಿ ಚಿಂತಿಸಿದ. ತನ್ನಂಥವನಿಗೆ ಕಂಡಕ್ಟ್ರು ಫುಲ್ ಟಿಕೇಟಲ್ಲದೆ ಅರ್ಧ ಟಿಕೇಟ ತಂಗೊಂಡ್ರು ಖರ್ಚಿಗೆಂತ ಇಪ್ಪತ್ರೂಪಾಯಿ ಬೇಕೇಬೇಕು. ಈ ಹಣಾನಾ ಹೆಂಗೆ ಕೀಳೋದು ? ಓಗ್‌ಒಗ್ಲೇ ತಿರುಗೊಳಿ, ಬೀಡಿಲ್ಲದೆ ನಾನೇ ಭಿಕಾರಿಯಾಗೀನಿ. ನಿನಗ್ಯಾವುದೆಂದು ವುಜಾಲಿ ಎದ್ದು ಹಸಿ ಭಡೀಲಿ ಬಿಗಿದ್ರೆ... ಇನ್ನು ಅಮ್ಮನಿಗೆ ಗಂಜಿ ಕಾಸೋಕೆ ಕಾಸಿಲ್ಲ. ನಿನಗ್ಯಾವ ರೊಕ್ಕಂತ ಉಗಿದು ಕಳಿಸೋದು ಖಾತ್ರಿಯಂತ ಗಾಳಿ ನಿಶ್ಚಿಯಿಸಿದ. ಹೀಗಾದ್ರೆ ಹೇಗೇ ಅಲ್ಲಿಗೆ ತಲುಪುವುದೆಂದು ವಿವೇಚಿಸಿದ.

ಮುಸಲ್ಮಾನರೆಲ್ಲ ಅಂದು ಬಕ್ರೀದ್ ಹಬ್ಬದ ಪ್ರಾರ್ಥನೆಗೆಂದು ಈದ್‌ಗಾದ ಕಡೆ ಸಾಗಿದ್ದರು. ಇವರು ಬಡಬಗ್ಗರಿಗೆ ಹೋದ ರಂಜಾನ ದಿನ ಧಾರಾಳವಾಗಿ ದಾನಧರ್ಮ ಮಾಡೋದನ್ನು ಗಾಳಿ ತೀರಾ ಹತ್ತಿರದಿಂದ ನೋಡಿದ್ದ. ಈಗವನ ಮನಸ್ಸಿನೊಳಗೆ ತಾನು ಅವರಿಂದ ದಾನ ಬೇಡಿದರೆ ಹೇಗೆಂಬ ಆಲೋಚನೆ ಹರಿದುಬಂತು. ತಾನು ಬರಿಗೈಯಿಂದ ಹಿಂತಿರುಗಲು ಸಾಧ್ಯವಿಲ್ಲ, ಅವರು ದಾನ ಮಾಡಿಯೇ ಮಾಡುತ್ತಾರೆ ಎಂದು ಅಚಲವಾಗಿ ನಂಬಿದವ ಈದ್‌ಗಾದ ಬಯಲಿನಲ್ಲಿನ ಫಕೀರ, ಮೌಲ, ಗರೀಬರ ಸಾಲೊಳಗೆ ಗಾಳಿ ಸೇರಿಕೊಂಡ. ನಮಾಜು ಮುಗಿಸಿ ಬಂದವರಲ್ಲಿ ಕೆಲವರು ಗಾಳಿ ಮುಂದೆ ಚಿಲ್ಲರೆ ನಾಣ್ಯ ಎಸೆದು ಮುಂದೆ ಹೋದರು. ಗಾಳಿ ಆ ಹಣವನ್ನೆಲ್ಲಾ ಜಮಾಯಿಸಿ ಎಣಿಸಿದಾಗ ಇಪ್ಪತ್ತೈದು ರೂಪಾಯಿ ಕಡಿಮೆ ಇದ್ದಿಲ್ಲ.

ಎತ್ತೆತ್ತಲೋ ಅಡ್ಡಾದಿಡ್ಡಿಯಾಗಿ ಅಷ್ಟದಿಕ್ಪಾಲರಂತೆ ನಿಂತ ಹಸಿರು ಬಸ್ಸುಗಳ ಸ್ಟಾಂಡಿನಲ್ಲಿ ಇಳಿದವ ಗಾಳಿ ಸ್ವಲ್ಪ ಗಲಿಬಿಲಿಗೊಂಡ. ತಾನು ಬಳ್ಳಾರಿ ಬಿಟ್ಟು ಮತ್ಯಾವ ಊರಿಗೆ ಬಂದಿದ್ದೇನೆಂದು ಅವನಲ್ಲಿ ಅನುಮಾನ ವ್ಯಕ್ತವಾಯ್ತು. ಅದಕ್ಕೆ ಅವನು ಅಲ್ಲಿಯೇ ಕಟ್ಟೆಮೇಲೆ ಹರಟೆಗಿಳಿದ ವ್ಯಕ್ತಿಗಳತ್ತಿರ ಹೋಗಿ ಸಮಾಲೋಚಿಸಿದ.

''ಯಣ್ಣೋ ಇಲ್ಲಿ ಕುಂಟಿಗಡ್ಡೆ ಎಲ್ಲೇಥಿ ?'' ಹೀಗೆ ಅವ ವಿಚಾರಿಸದ್ದಕ್ಕೆ ಒಬ್ಬ ವ್ಯಕ್ತಿ ಗಹಗಹಿಸಿ ಇನ್ನೊಂದು ಅವನನ್ನು ಆಪಾದಮಸ್ತಕ ಅಳೆದು,

''ಯಾಕ್ಲೇ ಇನ್ನು ಸರ್ರ್ಯಾಗಿ ಮೀಸಿನೇ ಚಿಗಿರಿಲ್ಲ, ಆಗ್ಲೇ ಕುಂಟಿಗಡ್ಡೆಗೊಂಟಿಯಾ ?'' ಅಚ್ಚರಿಯಿಂದ ಪ್ರಶ್ನಿಸಿತು. ಈ ಕುಂಟಿಗಡ್ಡೆ ಹಿಂದೊಮ್ಮೆ ಅನೈತಿಕ ವ್ಯವಹಾರಗಳ ಕೇಂದ್ರಸ್ಥಳವಾಗಿತ್ತೆಂಬುದು ಗಾಳಿಯೇನು ಬಲ್ಲ? ''ಪಚ್ಚಿಗಿಚ್ಚಿ ಇರ್ತಾವಂತಲ್ಲಣ್ಣೋ ಆ ಗಡ್ಡಿ...'' ತನ್ನ ಅಪಹಾಸ್ಯ ಮಾಡಿದವರಿಗೆ ಬಿಡಿಸಿ ಹೇಳಿದ ಗಾಳಿ.

''ಓಹೋ... ಅದ... ಹೀಂಗಾ ಹೋಗು ಹಂಗಾ ತಿರುಗು ಬರುತ್ತೆ'' ಅಂತ ಉದ್ಗಾರದಲ್ಲಿ ಮಗದೊಬ್ಬ ವ್ಯಕ್ತಿ ಗಾಳಿಗೆ ಸಿಲ್ವರ್‌ಜುಬ್ಲಿ ಪಾರ್ಕ್‌ನ ದಾರಿ ತೋರಿಸಿದ.

ಗಾಳಿ ಡಿ.ಸಿ. ಆಫೀಸ ಮುಂದಿನ ಕುಂಟಿಗಡ್ಡೆ ಹಾದಿಗೆ ವಾಲಿದ. ಹಾಗೇ ನಾಲ್ಕೆಜ್ಜೆ ದಾಟಿದವನಿಗೆ ತಿಳಿ ನೀರಿನ ಸರೋವರದಲ್ಲಿ ಬಾತುಕೋಳಿ ಜತೆಗೆ ಹಲವು ಪಕ್ಷಿ ಹಾರಾಡುವುದನ್ನು ಆ ಪಾರ್ಕಿನ ಕಬ್ಬಿಣದ ಸರಳುಗಳ ಮಧ್ಯದಿಂದ ವೀಕ್ಷಿಸಿದ. ನೀರಲ್ಲಿ ಹಾಯಾಗಿ ಮೀಯುವ ಬಾನಾಡಿಗಳ ಸಂಗಡ ತನ್ನ ರಾಜಹಂಸವೆಲ್ಲಿ ಮರೆಯಾಗಿದೆ ಎಂದು ಕ್ಷಣಕಾಲ ಹುಡುಕಿದ. ಹಸಿರು ಗಿಡಗಳ ನೆರಳಲ್ಲಿ ಎಲ್ಲಿಯಾದ್ರು ತನ್ನ ರಾಜಹಂಸ ವಿರಮಿಸುತ್ತಿರಬಹುದೇ ಎಂದು ತನ್ನ ವಕ್ರದೃಷ್ಟಿ ಹರಿಸಿದ. ಅವನ ಬೆನ್ನ ಹಿಂದೆ ಚುಕಬುಕ ರೈಲು ಹಾಯುತ್ತಿದ್ದರೂ ಅವನ ನೋಟ ಅತ್ತ ಹಾಯದು. ಅವನ ಅಂತರಂಗದೊಳಗೆ ಎಲ್ಲಾ ರಾಜಹಂಸದ ವ್ಯಸನವೇ ವ್ಯಾಪಿಸಿದೆ.

ತಾನಷ್ಟು ದೂರದಿಂದ ದರ್ಶನಕ್ಕೆ ಇಲ್ಲಿಗೆ ವಕ್ಕರಿಸಿದರೂ ಆ ಪಕ್ಷಿ ಎಲ್ಲಿ ಅವಿತಿದೆಯೆಂದು ಗಾಳಿ ಆದರ ಮೇಲೆ ನಿಡುಸುಯ್ದ. ಅದರ ಇರುವಿಕೆಯ ಬಗ್ಗೆ ಯಾರಲ್ಲಾದರೂ ವಿಚಾರಿಸಿ ತಿಳಿದುಕೊಳ್ಳಲೆಂದು ತನ್ನ ಹಿಂದೆ ಕಿರುದಾರಿಯಲ್ಲಿ ಹೋಗುತ್ತಿದ್ದವನನ್ನು ಗಾಳಿ ಪ್ರಸ್ತಾಪಿಸಿದಾಗ, ''ಆ ಪಕ್ಷಿ ಇಲ್ಲೆಲ್ಲೈತಿ. ಅದು ಜೂದಲ್ಲಿ ಇರಬೌದು'' ಒಂದೇ ಮಾತಲ್ಲಿ ಆ ವ್ಯಕ್ತಿ ಉತ್ತರವಿತ್ತಿತ್ತು.

ಅವರಿವರಿಂದ ಮಾರ್ಗ ಕಂಡುಕೊಳ್ಳುತ್ತಾ ಗಾಳಿ ಕೊನೆಗೆ ಜೂಗೆ ಬಂದ. ಪುಕ್ಸಟೆ ಜೂದೊಳಕ್ಕೆ ಹೋಗಬೌದೆಂದು ಹಾಗೇ ಹೋದವನ ಪ್ರವೇಶ ನಿರಾಕರಿಸಿದ್ದಕ್ಕೆ ಎರಡ್ರೂಪಾಯಿ ಟಿಕೇಟು ಪಡೆದು ಒಳಹೋದ.

ನವಿಲಿನ ನಾಟ್ಯಕ್ಕೆ ಪುಟ್ಟ ಪುಟ್ಟ ಚಿಣ್ಣರು ಮೂಕವಿಸ್ಮಿತರಾಗಿದ್ದವು. ಇನ್ನು ಬಿಳಿಬಾತುಕೋಳಿಗಳ ಪುಕ್ಕ ಸ್ಪರ್ಶಿಸಲು ಕೆಲವು ಚಿನ್ನಾರಿಗಳು ಚಿನ್ನಾಟಕ್ಕಿಳಿದಿದ್ದವು. ತನ್ನ ರಾಜಹಂಸ ತನಗಿಲ್ಲಿ ಸಿಗಬಹುದೆಂಬ ಆತ್ಮವಿಶ್ವಾಸದಲ್ಲಿ ಬೀಗಿದವ, ಬುಸುಗುಡುವ ನಾಗಸರ್ಪಗಳ ಜಾಲರಿ ದಾಟಿ ಮರಳಿನ ಮೇಲೆ ಬಿಸಿಲು ಕಾಯಿಸುವ ಮೊಸಳೆ ಕಂಡು ಗಾಳಿ ಮುಂದೆ ಬಂದ. ಹುಲ್ಲಿಡಿದ ಹುಡುಗರು ಜಿಂಕೆಗಳನ್ನು ಕರೆಯುತ್ತಿದ್ದರು. ಕೆಲವು ಜಿಂಕೆಗಳು ಹುಲ್ಲು ತಿನ್ನಲೆಂಬ ಅತಿ ಆಶೆಯಿಂದ ಮುಂದೆ ಹೆಜ್ಜೆಯಿಕ್ಕಿ ಈ ನರಮಾನವರು ತಮ್ಮ ಜೀವಕ್ಕೇನು ಆಪತ್ತು ತಂದರೆಂಬ ಆತಂಕದಿಂದ ದೃಷ್ಟಿಸುತ್ತಿದ್ದವು. ಇವಕ್ಕೆ ತಾ ಮೇವು ಕಿತ್ತು ತಂದು ತಿನ್ನಿಸಬೇಕೆಂಬ ಉತ್ಕಟತೆ ತಳಮಳಿಸಿದರೂ ಮೊದಲು ರಾಜಹಂಸ ಪ್ರತ್ಯಕ್ಷವಾದ ನಂತರವೇ ಆ ಮೇಲಿನದೆಂದೂ ಹಾಗೇ ಹೋದ. ಪಟ್ಟೆ ಪಟ್ಟೆಯ ಹುಲಿ ಆರ್ಭಟಿಸುತ್ತಿತ್ತು. ಮುಂದಿನ ಬೋನಿನಲ್ಲಿದ್ದ ಜಾಂಬವ ಮಲ ಮೂತ್ರ ಮಾಡಿ ಬಾಗಿಲ ಕೆಳಗೆ ಕೊರೆಯುತ್ತಿತ್ತು. ಇನ್ನೊಂದು ಪಕ್ಕ ಚಿರತೆ ಮಾಂಸದ ತುಂಡು ತಿನ್ನುತ್ತಾ ಮಗದೊಂದು ಚಿರತೆಗೆ ಗುರ್‌ಗುಡುತ್ತಿತ್ತು.

ಜನ ತಮ್ಮದೇ ಲೋಕದಲ್ಲಿ ವಿಹರಿಸುತ್ತಿತ್ತು. ಅವಸರದಲ್ಲಿ ಇದನ್ನೆಲ್ಲಾ ಸವಿಯುತ್ತಾ ಸಾಗಿದ ಗಾಳಿಯ ಬುರುಡೆಯೊಳಗೆ ಈ ಪ್ರಾಣಿ ಪಕ್ಷಿಗಳನ್ನು ಕಾಪಾಡಬೇಕೆನ್ನುವ ಸರ್ಕಾರದವರು ಅದೇತಕೆ ಪಂಜರದೊಳಗಿಟ್ಟಿದ್ದಾರೆ ? ಯೋಚನೆ ಸಾಗಿತು.

ಇದೇ ಪ್ರಕಾರ ತನ್ನ ಗಳಹಂಸವನ್ನು ಹಾರಲು ಬಿಡದೆ ಹಿಡಿದು ತಂದಿರೋದು ಯಾವ ನೀತಿ ? ಸಂಕಟಗೊಂಡ ಗಾಳಿ ವ್ಯವಸ್ಥೆ ವಿರುದ್ಧ ಹಳಿದುಕೊಂಡ. ಕೆಂಪು ಕೋತಿಯೊಂದು ಮರಿಕೋತಿಯ ನೆತ್ತಿಯೊಳಗೆ ಹೇನಿಡಿದು ತಿನ್ನುತ್ತಿತ್ತು. ತನಗೆ ಹೋಗಲು ಸ್ವಾತಂತ್ರ್ಯ ದಯಪಾಲಿಸಿರೆಂದು ಗುಳ್ಳೆನರಿಯೊಂದು ಒಂದೇ ಸವನೆ ಊಳಿಡುತ್ತಿತ್ತು. ಮೈನಾ, ಗಿಣಿ, ಪ್ರಣಯದಕ್ಕಿ ಇಂಚರಿಸುತ್ತಿದ್ದವು. ಇತರೇ ಮಕ್ಕಳು ತೂಗುತೊಟ್ಟಿಲಿನ ಉಯ್ಯಾಲೆಯಲ್ಲಿ ನಲಿಯುತ್ತಿರಲು ತಾನು ಹೀಗೆ ಸ್ವಲ್ಪ ನಲಿಯೋಣವೆಂದರೆ ಮರೆತೆನೆಂದ್ರೆ ಹ್ಯಾಂಗ್ ಮರೆಯಲಿ ಅಂತ ರಾಜಹಂಸದ ಧ್ಯಾನ ಗಾಳಿಗೆ ರುಮುರುಮುಗೊಡುತ್ತಿತ್ತು.

ಪ್ರಾಣಿ ಸಂಗ್ರಾಲಯದ ಇನ್ಯಾವ ಜಾಗದಲ್ಲಿ ರಾಜಹಂಸವನ್ನು ಮರೆಮಾಚಿದ್ದರೆಂದು ಗಾಳಿ ಮೂಲೆ ಮೂಲೆ ಮೂಸಿ ಬಂದವ ನಿರಾಶೆಗೊಂಡು ಮೊನ್ನೆ ಕುರುಗೋಡಿನಿಂದ ತಂದ ರಾಜಹಂಸ ಇರುವುದೆಲ್ಲಿ? ಅಲ್ಲಿದ್ದ ಅರಣ್ಯ ಸಿಬ್ಬಂದಿಯನ್ನು ಗಾಳಿ ವಿಚಾರಿಸಿದಾಗ ಅದು ಕುಂಟಿಗಡ್ಡೆಯಲ್ಲಿಯೇ ನೆಲೆಯೂರಿದೆಂಬ ವಾಸ್ತವ ಸಮಾಚಾರ ಬಿತ್ತರಿಸಿದ.

ಗಾಳಿ ಬಂದ ದಾರಿ ಕ್ರಮಿಸತೊಡಗಿದ. ಬಿರುಸಿನ ಹೆಜ್ಜೆ ಹಾಕುವಾಗ ಬಿಸಿಲು ನರ್ತಿಸುತ್ತಿತ್ತು. ಸೆಲೆವ ಬೆವರನ್ನು ಅಂಗಿ ಚುಂಗಿಯಿಂದ ವರೆಸಿಕೊಳ್ಳುತ್ತಾ ಮತ್ತೆ ಅದೇ ಪಾರ್ಕಿಗೆ ಆಗಮಿಸಿದ. ಈ ಸಾರಿ ನಿರ್ಭಿಡೆಯಿಂದ ಮುಚ್ಚಿದ ಗೇಟನ್ನು ತಳ್ಳಿ ಪಾರ್ಕಿನೊಳಕ್ಕೆ ಕಾಲಿಟ್ಟ. ಹೀಗೆ ಕಾಲಿಟ್ಟವನನ್ನು ಅಲ್ಲಿನ ವಾಚ್‌ಮೆನ್ ಬಿರುಗಣ್ಣು ಬಿಟ್ಟು ತಡೆದಿದ್ದಕ್ಕೆ ''ಯಣ್ಣೋ ರಾಜಹಂಸ ನೋಡಾಕಂತ ಬಂದೀನಿ'' ಗಾಳಿ ಜುಲುಮೆನಿಂದ ತನ್ನ ಬೇಡಿಕೆ ಸಲ್ಲಿಸಿದ. ''ಈಗ ಅದಿಲ್ಲ. ನಿನ್ನೆವೇ ಆರೋಯ್ತು'' ಅವನಂದ. ಕೈ ಕೈ ಇಚಿಕಂತ ಗಾಳಿ ಹಿಂದಕ್ಕಾದ. ಇನ್ನೇನು ಇವ ಗೇಟು ದಾಟುತ್ತಿರುವನು ಎನ್ನೋ ವೇಳೆಯಲ್ಲಿ ''ಏಯ್, ತಮ್ಮ ನಿಂಗೇ ರಾಜಹಂಸ ಬೇಕೇನು ? ಅದ್ಯಾವ ದಿಕ್ಕಿಗೆ ಹಾರೋಗಿಲ್ಲ. ನಮ್ಮ ಸಾಹೇಬ ಅದನ್ನ ಬಿರಿಯಾನಿಗ್ಯಾಕ್ಯ್ಯನೆ'' ಧ್ವನಿಯೊಂದು [illegible] ಹೊರಗೆಡವಿ ಗಿಡದ ಮಧ್ಯೆ ಸರ್ರನೆ ಅದೃಶ್ಯವಾಯ್ತು.

ತನ್ನಿಂದ ಎಂಥ ಘೋರ ಘಟಿಸಿತ್ತು! ಆ ರಾಜಹಂಸವನ್ನಿಡಿದು ಊರಿಗೆ ತಂದಿದ್ದೇ ದೊಡ್ಡ ತಪ್ಪಾಯಿತು. ಅದರ

ಪಾಡಿಗೆ ಅದನ್ನು ತೊರೆದು ಬಂದಿದ್ದರೆ ಅದು ನೆಮ್ಮದಾಗಿರುತ್ತಿತ್ತು. ಅಂಥ ಮೂಕ ಪಕ್ಷಿನಾ ಹಿಡಿದು ತಂದು ಇಂಥ ರಾಕ್ಷಸರಿಗೆ ಬಲಿ ಕೊಟ್ಟೆನಲ್ಲ! ಇದರ ಬದಲು ಅಪ್ಪನಿಗೆ ಕುಪ್ಪೆ ಮಾಡಲು ಕೊಟ್ಟಿದ್ರೆ ಅವನಾದ್ರು ನಾಕು ದಿನಾ ಜಮ್ಮಂತ ಜಲ್ಸಾದಲ್ಲಿ ಮುಳುಗುತ್ತಿದ್ದ ಎಂದೂ ಮಿಂಚಿ ಹೋದ ಘಟನೆಗೆ ಗಾಳಿ ಪಶ್ಚಾತ್ತಾಪ ಪಟ್ಟ. 'ನಮ್ಮ ಸಾಹೇಬ್ರು ಬಿರಿಯಾನಿಗ್ಯಾಕ್ಯಾರೆ' ಎಂಬುದು ಅವನ ಅಂತಃಪ್ರಜ್ಞೆಯಲ್ಲಿ ಪ್ರತಿಧ್ವನಿಸಿ ಅವನ ಮನಃಸ್ಥೈರ್ಯವನ್ನು ಕುಗ್ಗಿಸುತ್ತಿತ್ತು. ಆ ಸರ್ಕಾರಿ ಸಾಹೇಬ ತಾ ಮಟನ್ ಮಾಡಿ ಕೊಳ್ಳದೆ ಅದನ್ನು ಹಣದಾಸೆಗೆ ಬಿರಿಯಾನಿ ಹೋಟೆಲ್‌ಗೆ ಮಾರಿರಬಹುದೆಂದು ಊಹಿಸಿದ ಗಾಳಿ ಪಾರ್ಕಿನ ಬಾಜು ದೊಡ್ಡದಾಗಿ ತಲೆಯೆತ್ತಿರುವ ಮಾಂಸದ ಹೋಟೆಲ್ ಗಳತ್ತಿರ ತನ್ನ ನೋಟ ಚಲಾಯಿಸಿದ. ಅವ ಅದೇ ದಾರಿಯಲ್ಲಿ ಹಾಯುವಾಗ ಅವನ ಘ್ರಾಣೇಂದ್ರಿಯಗೆ ಮಟನ್ನಿನ ಘಮ್ಮನೆ ವಾಸನೆ ಆಘ್ರಾಣಿಸಿತು. ಅವನ ಊಹೆ ನಿಜವೆನ್ನಿಸಿ ಇಲ್ಲಿಯೇ ಏಕೆ ರಾಜಹಂಸದ ಹತ್ಯೆ ಮಾಡಿ ಅದರ ಹೊಳಪಿನ ಗರಿಗಳನ್ನು ಈ ಕಸದ ಗುಂಡಿಯಲ್ಲಿ ಬಿಸಾಕಿರಬಾರದೆಂದು ಒಂದೆರಡು ಕಸದ ತೊಟ್ಟಿಯೊಳಕ್ಕೆ ಇಣಿಕಿ ಕಸವನ್ನು ಕೆರೆದ. ನಾಟಿ ಕೋಳಿಗಳ ಸುಲಿದ ಒಂದಿಷ್ಟು ಪುಕ್ಕಗಳು ಅವನ ಕೈತಡವಿದಾಗ ವೈದ್ಯ ಕಣ್ಣು ನೆಟ್ಟಂತೆ ರಾಜಹಂಸದ ನವಿರಾದ ಪುಕ್ಕಗಳಲ್ಲಿ ಬೆರೆತಿರಬಹುದೆಂದು ಗಾಳಿ ಆಸಕ್ತಿಯಲ್ಲಿ ಅನ್ವೇಷಣೆಗಿಳಿದ. ಅವನ ತಡವಿನ ಕೈಗೆ ಕೋಳಿ ಪುಕ್ಕ ತಟ್ಟವೇ ಹೊರತು ಅಂಗೈಯಗಲದ ರಾಜಹಂಸದ ಗರಿಗಳು ತಟ್ಟಲಿಲ್ಲ. ಇವನ್ನು ಇನ್ಯಾವ ನಿಗೂಢ ಸ್ಥಳದಲ್ಲಿ ಅಗೆದು ಮುಚ್ಚಿಟ್ಟಿರಬೇಕು, ಇಲ್ಲದಿದ್ದರೆ ಇವು ಸಹಜವಾಗಿ ತನಗೆ ಸಿಗುತ್ತಿದ್ದವು ಎಂದು ಎದ್ದವ ಮಾಂಸದೂಟ ಬಡಿಸುವ ಹೋಟಲ್‌ಗಳತ್ತಿರ ಹೋದ್ರೆ ಸುಳಿವು ಸಿಗಬಹುದೆಂದು ಗ್ರಹಿಸಿದ ಗಾಳಿ ತಹಸೀಲ್ದಾರು ಕಾಂಪೋಂಡಿಗಂಟಿದ ಹೋಟೆಲ್‌ನೊಳಗೆ ನುಗ್ಗಿದ. ಆ ಹೋಟೆಲ್ ಸ್ವರ್ಗ ಸೃಷ್ಟಿಸಿದಂತಹ ಹೋಟೆಲ್‌ನಂಗೆ ತೋಚಿದ್ದರಿಂದ ಗಾಬರಿಕೊಂಡ ಗಾಳಿ ಇಂದಿನ ಸ್ಪೆಶಲ್ ಅಂತ ತೂಗುಹಾಕಿದ ಬೋರ್ಡಿನ ಒಂದೊಂದು ಅಕ್ಷರ ಓದತೊಡಗಿದ. ಮೊದಲೇ ಅವನ ಗಲೀಜಾದ ಅಂಗಿ, ಹರಿದ ಚಡ್ಡಿ, ಕೆರೆದ ತಲೆ ಕಂಡ ವೇಟರ್, ''ಏಯ್, ಹುಡ್ಗಾ ಇಲ್ಲಿ ಕೆಲ್ಸಾ ಇಲ್ಲ, ಹೊರ್ಗ್ನಡಿ'' ಎಂದು ಜಬರಿಸಿದಾಗ, ''ಇಲ್ಲ, ವಟ್ಟೆ ಹಸಿದ್ಯೆತೆ ಬಂದೀನಿ'' ಗಾಳಿ ನಿರ್ವಾಹವಿಲ್ಲದೆ ಏನೋ ಉಸಿರಿದ. ''ಹಂಗಂದ್ರೆ ಅಲ್ಲೇಕೆ ನಿಂತೀ ಈ ಕಡೆ ಕೂಡು ಬಾ'' ವೇಟರ್ ಅಡುಗೆ ಕೋಣೆಯೊಳಕ್ಕೆ ಮರೆಯಾದ. ಘಮಿಸುವ ಮಸಾಲೆ ವಾಸನೆ ಗಾಳಿಯ ಮೂಗಿನ ಹೊರಳೆ ತಾಕಿದ್ದೆ ಅವನ ಬಾಯಿ ಲಾಲಾರಸೋತ್ಪತ್ತಿಯಿಂದ ಅರಳಿಕೊಂಡಿತು. ಗೌಡರ ಸತ್ತು ಹೋದ ಎತ್ತಿನ ಬಾಡೋ ಇಲ್ಲ ವರ್ಷಕ್ಕೊಂದಾರ್ತಿ ಮಾರಿಜಾತ್ರೆಗೆ ಮಾಡುವ ಕುರಿಮಾಂಸ ತಿಂದವನಿಗೆ ಹಿತವಾದ ಗಾಳಿಯಲ್ಲಿ ತೇಲಿಬರುವ ಈ ವಾಸನೆ ಅವನ ದೇಹದ ನರನಾಡಿಯೊಳಗೆ ಈ ಮಾಂಸವನ್ನು ಭಕ್ಷಿಸಬೇಕೆಂಬ ಅನುಭೂತಿಯನ್ನು ಉಕ್ಕಿಸಿತು. ಇದರ ವಾಸನೆಯೇ ತನ್ನ ಮನಸ್ಸನ್ನು ಈ ಪರಿ ಸೆಳೆದು ಇಷ್ಟು ರೋಮಾಂಚನಗೊಳ್ಳಿಸುವಾಗ ಇನ್ನ ಆ ಮಾಂಸದೂಟ ಅಗೆದರೆ ಸುಖವೇಗಿರಬೇಡವೆಂದು ಗಾಳಿ ನಾಲಿಗೆ ಮೇಲೆ ನೀರೂರಿಸಿಕೊಂಡ. ತಿನ್ನೋಣವೆಂದು ನಿರ್ಧರಿಸಿದವನಿಗೆ ಇದು ಕೋಳಿ, ಮೇಕೆಯ ಮಾಂಸ ಬಿಟ್ಟು ರಾಜಹಂಸದ ಮಾಂಸವಾಗಿದ್ದರೆಂಗೆ ?

ಅದನ್ನು ತಾ ತಿಂದರೆ ರಾಜಹಂಸಕ್ಕೆ ಅಪಚಾರ ಮಾಡಿದಂತಾಗುವುದೆಂದು ಯೋಚಿಸಿದವ ಮುಂದಿರುವ ವ್ಯಕ್ತಿ ತನ್ನ ತಪೇಲಿಯಂತ ಬಾಯಲ್ಲಿ ತುಣುಕು ಕಡಿಯೋದು ಕಂಡಾಗ ಹೇಸಿಗೆಯೆನಿಸಿತು. ಇಂಥ ಕುಂಭಕರ್ಣರ ಹೊಟ್ಟೆಗೆ ತನ್ನ ರಾಜಹಂಸವೆಲ್ಲಿ ಆಹಾರವಾಗಿರುವುದರಲ್ಲಿ ಸಂಶಯವಿಲ್ಲವೆಂದುಕೊಂಡ. ವೇಟರ್ ಎದುರಿಗೆ ನೀರಿನ ಗ್ಲಾಸ ಕುಕ್ಕರಿಸಿ ನಿನಗೇನು ಮಟನ್ ಬಿರಿಯಾನಿ, ಚಿಕನ್ ಬಿರಿಯಾನಿ, ಫಿಶ್ ತರ್ಲೇನೆಂದು ಅತಿಶಯದಿಂದ ಕೇಳಿದ.

ಮೊದಲೇ ಕಕ್ಕಾಬಿಕ್ಕಿಯಾದ ಗಾಳಿ ಇದು ಬಿಟ್ಟು ಮತ್ತೆನೈತೆ ಅಂತ ವೇಟರ್‌ನನ್ನು ಪ್ರಶ್ನಿಸಿದ. ಅವ ನಿನಗೇನು ಆರ್ಡರ್ ಬೇಕು? ಜಲ್ದಿ ಹೇಳೆಂದು ಒತ್ತಾಯಿಸಿದಾಗ,

''ರಾಜಹಂಸದ ಬಿರಿಯಾನಿ ಸಿಗಲ್ವೇನು'' ಅಂದ.

''ಯಾ ರಾಜ ಕಾಕದ ಹಂಸದ ಬಿರಿಯಾನಿ ತಿಂಬಾಕ ಬಂದಿ ? ನಡೀ ನಿನ್ನ ದರಿದ್ರ ಮೂತಿಗೆ ಇಲ್ಲೇನಿಲ್ಲ?'' ವೇಟರ್ ಬೈದು ಗಾಳಿಯನ್ನು ಹೊರ ನೂಕಿದ.




ರಾಜಹಂಸದ ಪತ್ತೆಗೆ ತೊಡಕಾದುದ್ದಕ್ಕೆ ಗಾಳಿ ದುಗುಡದಲ್ಲಿ ಮೇನ್ ಸರ್ಕಲ್‌ನ ಒಂದೆರಡು ಬಾರ್ ರೆಸ್ಟೋರೆಂಟ್‌ಗಳತ್ತಿರ ಹಾದ.

ಆ ರೆಸ್ಟೋರೆಂಟ್‌ಗಳಲ್ಲಿನ ಟುಡೇ ಸ್ಪೇಶಲ್ ಬೋರ್ಡಿನಲ್ಲೆಲ್ಲಿ ರಾಜಹಂಸದ ಹೆಸರು ದಾಖಲಾಗಿದೆಯೇ ಎಂದು ಅಚ್ಚರಿಯಿಂದ ಶೋಧಿಸಿದವ ಆ ಹೆಸರು ಇಲ್ಲದಿರುವುದು ಮನಗೊಂಡು, ಆ ಸಾಹೇಬನೇ ರಾಜಹಂಸವನ್ನು ಮಟಾಷಗೊಳಿಸಿರಬೇಕೆಂದು ಖಾತ್ರಿಯಿಂದ ಎದೆಯ ನೋವು ನೀಗಿಕೊಂಡು ನಡೆದ. ಹಾಗೇ ಅವನ ಚಿತ್ತದೊಳಗೆ ಕುಟ್ಟೋದು ಬೀಸೋದು ನಿನಗಿರಲಿ, ಕುಸಲಕ್ಕಿ ನನಗಿರಲಿ ಎಂಬ ಧಾರಾಳತನದ ಮೂರ್ತಿ ಮೇಷ್ಟ್ರು ರಾತ್ರಿ ಮಾಳಿಗೆ ಮೇಲೆ ಮಲಗಿದಾಗ ದರೋಜಿ ಕರಡಿಗಳ ಎತಕೊಂಡೋಗಿ ಗವಿಯೊಳಗೆ ಸೋಬಾನ ಮಾಡಿಬಿಡಲೆಂಬಷ್ಟು ಮಟ್ಟಿಗೆ ದುಮ್ಮಾನದಲ್ಲಿ ನಲುಗಿದ.

ನೈದಿಲೆಯ ಚಂದ್ರ ತೇಲುವಾಗ ಕೆಂಚಮ್ಮನಗುಡಿ ಕಟ್ಟೇಲಿ ಕಲಾಪ ಸುರುವಾದಂಗಿತ್ತು. ಆ ಸೂರ್ಪನಕಿನ ಹಲ್ಲು ಕೀಳೋ ಕಾಲ ಬಂದೈತಿ, ನಮ್ಮ ರಕುತ ಕುಡಿದಂತೋಳನ್ನ ನಾವ್ ರಕುತ ಕಾರ್ಸಬೇಕು. ಆ ಎಂಜಲಬುರುಕ ಸಬ್‌ರಿಸ್ಟ್ರಾರಿಗೊಂದು ಇಕ್ಕೋ ಕಾಲ ಅತ್ರಗೈತಿ. ಅವ್ರೂ ನಮ್ಮಿಂದ ಎಷ್ಟೆಷ್ಟು ಲಂಚಾ ತಿಂದಾರಂತ ಸಾಕ್ಷೇಳ್ರಿ. ಇಂಥ ದುಷ್ಟನ್ನ ಭೂಮಿಮೇಲೆ ಹಂಗೇ ಉಳ್ಸಗೊಡಬಾರ್ದು. ನಮ್ಮ ಜನಶಕ್ತಿ ಏನಂತಾ ಅವ್ರಿಗೆ ತೋರ್ಸಬೇಕು. ಆಗದಕ್ಕೊಂದು ವ್ಯಾಲೀವ್ ಬರುತ್ತೆ. ವಿರೋಧ ಪಕ್ಷದ ನಾಯಕನಂತೆ ಏರಿಯಾ ಲೀಡರ್ ಲಕುಪತಿ ಭಾರೀ ಘನಸ್ತಿಕೆಯಲ್ಲಿ ಕೊಚ್ಚಿಕೊಳ್ಳುತ್ತಿದ್ದ. ವೇದವಾಕ್ಯವೆಂಬಂತೆ ಅಲ್ಲಿನ ಜನ ಇವನವಾಡುವುದೆಲ್ಲ ಭಾವಪರವಶರಾಗಿ ತಲೆದೂಗುತ್ತಿದ್ದರು. ಇಂಥ ಕಲಾಪದ ತಲೆಬುಡ ಅರ್ಥವಾಗದಿದ್ದಕ್ಕೆ ಗಾಳಿ ಪಕ್ಕಕ್ಕಿದ್ದ ಎಂಕಟಿಗೆ ಆ ದರಬಾರಿನ ಕುರಿತು ಕುತೂಹಲ ತಾಳದೆ ಕೇಳಿದ.

''ಗೊತ್ತಿಲ್ಲೇನು... ಕುರುಗೋಡಿಗೆ ಶ್ರೀಚಲಂ ಬರ್ತಾರಂತೆ ?'' ಅವನಂದ.

''ಅವರೇನು ಮಿನಿಸ್ಟ್ರಾ... ಚೀಪ್ ಮಿನಿಸ್ಟ್ರ ?'' ಕೇಳಿದ ಗಾಳಿ.

''ಅವರಲ್ಲ... ಈಜಿಲೆನ್ಸ್ !!''

ಇಂಗಂದ್ರೆ ಏನಂತಾ ಆಶ್ಚರ್ಯದಿಂದ ವಿಚಾರಿಸಿದ ಗಾಳಿಗೆ –

''ಇವ್ರು ಎಲ್ಲಾ ಗೂರ್ಮೆಂಟು ಆಫೀಸೋರ್ನ ಗಡಗಡ ನಡಗಿಸ್ತಾರೆ ಗೊತ್ತ... ಅಷ್ಟು ಪವರ್ಫುಲ್'' ಹೆಚ್ಚಿಗೆ ಎಂಕಟಿ ನುಡಿದ.

''ಮತ್ತಾ, ಮಿನಿಷ್ಟ್ರು... ಚೀಪು ಮಿನಿಸ್ಟ್ರಿಗಿಂತ ಅಷ್ಟು ಸ್ಟ್ರಾಂಗ... !'' ಉದ್ಗಾರದಲ್ಲಿ ಗಾಳಿ ನುಡಿದಿದ್ದಕ್ಕೆ,

''ಔದು. ಅದಕ್ಕಿಂತ ಸ್ಟ್ರಾಂಗು... ಯಾರಾದ್ರು ಭ್ರಷ್ಟ ಅಧಿಕಾರಿಗಳು ರೊಕ್ಕ ನುಂಗಿದ್ರೆ ಅವರನ್ನ ಆಗ್ಲೇ ವಾಂತಿ ಮಾಡ್ಸಿ ಸಸ್ಪೆಂಡು ಮಾಡ್ತಾರೆ. ಅವ್ರು ಈ ದೇಶನಾ ಲಂಚದಿಂದ ಮುಕ್ತಿ ಮಾಡೋಕೆ ಬರ್ತಾರೆ'' ತನಗೆ ತಿಳಿದಷ್ಟನ್ನು ಎಂಕಟಿ ವಾಚಿಸಿದ.

''ನಮ್ಮೂರಿಗೆ ಅವ್ರು ಬರೋದ್ರಿಂದ ಒಳ್ಳೇದೇನಾಗೋದು ?'' ಮೆದುಳೊಳಗೆ ಕೊರೆವ ಪ್ರಶ್ನೇನಾ ಗಾಳಿ ಹೊರ ಹಾಕಿದ.

''ಆ ಡಾಕ್ಟರಮ್ಮನ... ಸಬ್‌ರಿಜಿಸ್ಟರ್‌ಪ್ಪನ... ಎಂಗಾ ಕ್ಲಾಸ ತಗೊಂಡು ಬೆಂಡು ತೆಗಿತಾರ ನೋಡಂತಿ ಬಾ... ಅದಕ್ಕೆ ಆ ಲಕುಪತಿ ಅವ್ರಿಗೆ ಕಂಪ್ಲೇಂಟ್ ಬರೆದು ಕೊಡಿ ಅನ್ನೋದು ?''

''ಈ ಕಂಪ್ಲೇಂಟಿಂದ ಅವ್ರೇನು ಮಾಡ್ತಾರೆ ?''

''ಮುಂದೇನೆ ಎನಕ್ವಯರಿ ಮಾಡ್ತಾರೆ. ತಪ್ಪಿದರೆ ಮುಲಾಜಿಲ್ಲದೆ ಮರ್ಯಾದೆನ ಮೂರುಕಾಸಿಗೆ ಆರಾಜಾಕ್ತಾರೆ.''

''ಎಂಥೋರನ್ನ ಅವ್ರ ಎನ್ಕಯರಿ ಮಾಡ್ತಾರೆ ?''

''ಯಾರಿಗೆ ಅನ್ಯಾಯವಾಗಿರಲಿ, ಅವ್ರನ್ನ ವಿಚಾರಣೆ ಮಾಡೋ ಅಧಿಕಾರ ಅವರಿಗೈತೆ. ಸರ್ಕಾರದೋರು ನಮಗೊಂದು ಮಾಡಿ ತಮಗೊಂದು ಮಾಡಿಕಂತಾರ ನೋಡು. ಅಂತದ್ದು ?''

ಶ್ರೀಚಲಂರ ಕಾರ್ಯವೈಖರಿ ಬಗ್ಗೆ ಗಾಳಿ ಮುಂದೆ ಶ್ಲಾಘಿಸಿದಾಗ ಆ ನಿರ್ದಯಿ ಪಕ್ಷಿಯ ಶೋಧನಕ್ಕೆಂದು ತಾನೇಕೆ ಒಂದು ದೂರನ್ನು ಗುಜರಾಯಿಸಬಾರದೆಂದು ತನ್ನ ಅಂತರಂಗದೊಳಗೆ ಗಾಳಿ ಬಗೆದ. ಹಾಗೇನಾದರೂ ತಾ ದೂರು ಕೊಟ್ಟರೆ ಜನಸಾಮಾನ್ಯರ ಪಾಲಿಗೆ ಸಾಕ್ಷಾತ್ ಆರಾಧ್ಯ ದೈವವಾಗಿರುವ ಲೋಕಾಯುಕ್ತರು ಹೇಗಾದರೂ ಮಾಡಿ ಕಾಣೆಯಾದ ಆ ರಾಜಹಂಸ ಪಕ್ಷಿಯನ್ನು ಹುಡುಕಿಸುತ್ತಾರೆಂದು ಚಿತ್ತದೊಳಗೆ ಮಂದ ಬೆಳಕು ಹತ್ತಿಸಿಕೊಂಡ ಗಾಳಿ ಎಂಕಟಿಗೆ ದುಂಬಾಲು ಬಿದ್ದು ದೂರು ಹೇಗೆ ಬರೆಯುವುದೆಂದು ಬಿನ್ನಹಿಸಿದ.

''ಅದೇನು ಪ್ರಾಬ್ಲಮ್ ಅಲ್ಲ. ಫಸ್ಟು ಇವರಿಗೆಂತಾ ಬರಿ. ನೆಕ್ಸ್ಟ ಮ್ಯಾಟರ್ ಏನಂತಾ ಹೇಳು. ಇದನ್ನೆಲ್ಲಾ ಬರೆದು ಮುಗಿಸಿದ್ಮೇಲೆ ಲಾಸ್ಟಿಗೆ ತಮ್ಮ ವಿಶ್ವಾಸಿ ಅಂತ ಬರೆದು ಒಂದು ಸೈನ್ ವಡದ್ರೆ ಮುಗೀತು'' ಅಂತ ಸಲೀಸಾಗಿ ಹೇಳ್ದ ಎಂಕಟಿ. ಶುದ್ಧ ನೋಟ್‌ಬುಕ್‌ಲ್ಲಿ ಜಾಗ್ರತೆ ವಹಿಸಿ ಬರೆದ ಒಕ್ಕಣೆ ಅಂಚಿಗೆ ಗಾಳೆಪ್ಪ ತಂದಿ ವುಜಾಲಿ ಅಂತ ಹೆಸರು ಬರೆದ. ಅಲುಗಿನ ಗಾಯಕ್ಕಿಂತ ಗಲುಗಿನ ಗಾಯ ಹೆಚ್ಚೆನ್ನುವ ಲಕುಪತಿಯ ವಾಕ್ಯದಂತೆ ಅದಕ್ಕೆ ನಂತರ ಅವನು ಉಡುಚ, ಅಲುಗ, ಬಿಚ್ಚ, ಸೇಕ, ವಕ್ರ, ಧೂಳ ಅಂತ ಅನೇಕಾನೇಕ ಹೆಸರು ಗೀಚಿ ಅದರ ಮುಂದೆ ಸಹಿ ಮಾಡಿಸಲು ಅಣಿಯಾದ.

ಆರು ದೋಸೆ ಕೊಟ್ಟರೆ ಅತ್ತೆ ಕಡೆ ಮೂರು ದೋಸೆ ಕೊಟ್ಟರೆ ಮಾವನ ಕಡೆ ಚಾಳೀಯ ದೋಸ್ತರನ್ನು ಗಾಳಿ ಒಲೈಸುವುದೇ ಸಮಸ್ಯೆಯಾಯ್ತು.

''ಹುಗೂ, ಆ ಪಚ್ಚೇನಾ ಸೊಲ್ಪ ಮುಟ್ಟಿನಂದ್ರೆ ಮುಟ್ಟಕ್ಕಡ್ಲಿಲ್ಲ. ನಾ ಸೈನ್ಯಾಕ್ಹಾಕೋದು ? ಅಲಗ ಸೆಟಗೊಂಡರೆ ರವಷ್ಟು ಎತಿಗಂತಿನಂದ್ರೆ ಬಂಗಾರ ಮಾಡ್ದೆ. ನಮ್ಮದೇನು ಜರುರತ್ತ ಹ್ವಾಗು'' ರಾಗ ತೆಗೆದ ಸೇಖ.

ಕರಾರಿಗೆ ತಕರಾರು ತೆಗೆದವರಿಗೆಲ್ಲರಿಗೆ ಗೋಲಿ ಸೇಂಗಾ, ಬಾರೇಹಣ್ಣಿನ ಸವಿ ತೋರಿಸಿ ಅವರಿಂದ ಹಾಳೆ ಮೇಲೆ ಹ್ಯಾಂಗೋ ರುಜು ಮಾಡಿಸಿಕೊಂಡ. ಹಾಗೇ ಶ್ರೀಚಲಂ ಬರೋವಾಗ ಬರ್ಬೇಕು. ನೋಡಂತಾ ಹರಕೆಯಿತ್ತ ಗಾಳಿ.

* * *

ದಿಟ್ಟ ನಿಲುವಿನ ಲೋಕಾಯುಕ್ತರು ಮೊದಲು ಇಲ್ಲಿಗೆ ಭೇಟಿ ಮಾಡಿ ಪರಿಶೀಲಿಸುವರೆಂಬ ಬಲ್ಲ ಮಾಹಿತಿ ಬೇರೆ ಸಿಕ್ಕಿದ್ದರಿಂದ ಅಂದು ಶುಭೋದಯದಿಂದಲೇ ಆಸ್ಪತ್ರೆ ಮುಂದೆ ಜನಸಮೂಹ ನೆರೆದಿತ್ತು. ಈ ಕಾರಣಕ್ಕಾಗಿ ಗಬ್ಬುನಾತದ ಆಸ್ಪತ್ರೆ ಅಂಗಳವೆಲ್ಲ ಸ್ವಚ್ಛತೆಯಿಂದ ಕಂಗೊಳಿಸುತ್ತಿರುವುದು. ದೂರದಿಂದ ಸೂಕ್ಷ್ಮವಾಗಿ ಇದನ್ನೆಲ್ಲ ಅವಲೋಕಿಸಿದ ಗಾಳಿಗೆ ತನ್ನ ಶಾಲೆಯಲ್ಲಿ ನಿನ್ನೆ ಬಿಸಿಯೂಟಕ್ಕೆ ರದ್ದಿ ಪೇಪರಲ್ಲಿ ಅನ್ನ ಸಾಂಬಾರ ಸುರಿಯುವ ಬದಲು ಹೊಸ ಸ್ಟೀಲ್ ತಟ್ಟೆಯಲ್ಲಿ ಸೋನಾ ಮಸೂರಿಯ ಬಿಸಿ ಅನ್ನ ಸಾಂಬಾರ್ ಹಾಕಿದ್ದರು. ಅಪರೂಪಕ್ಕೊಮ್ಮೆ ಸರ್ತಿಸಂಬಳಕ್ಕೆಂದೇ ಬರುವ ಪ್ರಾಣೇಶ ಮೇಷ್ಟ್ರು ವಾರದಿಂದೀಚೆಗೆ ದಿನಾಲು ಪಾಠಕ್ಕೆ ಹಾಜರಿರುತ್ತಿದ್ದರು. ಐದು ದಿನಕ್ಕೊಂದು ಬಾರಿ ಬರುವ ನಲ್ಲಿ ನೀರು ನಿನ್ನೆ ಮಬ್ಬಾದರು ಬಂದೇ ಆಗಿರಲಿಲ್ಲ. ಹಾಗೇ ಕತ್ತಲಲ್ಲಿನ ಕರೆಂಟು ಆಫೀಸು ಮದುಮಗನಂತೆ ಜಗ್ಗನೆ ಮಿರುಗುತ್ತಿತ್ತು.

ಲಕುಪತಿಯ ಮೊಬೈಲು ಕ್ಷಣ ಕ್ಷಣ ರಿಂಗುಡುತ್ತಿತ್ತು. ಲೋಕಾಯುಕ್ತರು ಬರುವಿಕೆ ಬಯಸುತ್ತಿದ್ದವ ಇದೀಗ ಶ್ರೀಚಲಂ ಬಳ್ಳಾರಿ ಬಿಟ್ರು ಕೋಳೂರು ಆಸ್ಪತ್ರೆಗೆ ತಕ್ಷಣವೇ ಹೊಕ್ರು, ಅಂತ ತನ್ನ ಹಿಂಬಾಲಕರಿಗೆ ಜೋರಾಗಿ ಸುದ್ದಿ ವಾಹಿಸುತ್ತಿದ್ದ. ಇದನ್ನೆಲ್ಲಾ ಆನಂದಮಯವಾಗಿ ವೀಕ್ಷಿಸುತ್ತಿದ್ದ ಗಾಳಿಯ ಬಟಾಲಿಯನ್ ದೊಡ್ಡಬಸಪ್ಪನ ಜಾತ್ರೆಯಂತೆ ಆಸ್ಪತ್ರೆಯಲ್ಲೊಂದು ಜಾತ್ರೆ ನಡೆಯುತ್ತಿದೆಯೆಂದು ಭಾವಿಸಿದವರು ಬಹಳ ಹುರುಪಿನಿಂದಿದ್ದರು. ಲಕುಪತಿಯಂತೆ ಅನೇಕ ರಾಜಕೀಯ ನಾಯಕರು ಹೊಸ ದಿರಿಸಲ್ಲಿ ಆಸ್ಪತ್ರೆ ಮುಂದೆ ಚಯ್ಯವಾಡುತ್ತಿದ್ದರು.

ಶ್ರೀಚಲಂರು ಇತ್ತ ಹೊರಟಿರುವರೆಂಬ ಮೆಸೇಜ್ ಸಿಕ್ಕೊಡನೆ ಎಲ್ಲರೂ ಜಾಗೃತಗೊಂಡರು. ತಮಗೆ ಸಲಾಂ ಹಾಕದ ಸರ್ಕಾರಿ ಅಧಿಕಾರಿಗಳನ್ನು ಹೇಗೆ ಅಂತರ್ಲಾಗ ಹಾಕಿಸಬೇಕೆಂದು ಹಲವರು ಯೋಜಿತರಾಗಿ ಅಖಾಡಕ್ಕೆ ಸಿದ್ಧರಾಗಿದ್ದರು. ಇನ್ನು ಗಾಳಿಯ ರುದಯದಲ್ಲಿ ಈ ಕ್ಷಣ ಅವಿಸ್ಮರಣೀಯ ಕ್ಷಣವಾಗಿತ್ತು. ಲೋಕಯುಕ್ತರ ಹಂಸಕ್ಷೀರ ನ್ಯಾಯದಿಂದ ತನ್ನ ರಾಜಹಂಸ ಸಂಕಲೆಗಳಿಂದ ಬಂಧಮುಕ್ತವಾಗಿ ಪುನಃ ತನಗೆ ಲಭಿಸುತ್ತೆ. ಅದನ್ನು ಮುದ್ದಿನಿಂದ ಸಾಕಿ ಒಂದಕ್ಕೆರಡು ಸಂತತಿ ವೃದ್ಧಿಸಿ ಅದನ್ನು ಗುಜರಾತಿನ ದಿಕ್ಕಿಗೆ ಹಾರಿಸಿ ಚಪ್ಪಾಳೆ ತಟ್ಟಿ ಆನಂದಿಸಲು ಗಾಳಿ ಭ್ರಮಿಸಿಕೊಂಡ. ಚೋಟಾಳಿಗೊಂದು ಮೋಟಾಳು ಎನ್ನುವಂತೆ ಹಿಂದಿದ್ದ ಬಟಾಲಿಯನ್‌ಗೆಲ್ಲ ಆಗಾಗ ನಿಂಬಿವುಳಿ ಪೆಪ್ಪರ್‌ಮೆಂಟ್ ಹಂಚುತ್ತಲೇ ಇದ್ದ. ಊರ ಹೊರಗಿನ ಸ್ವಾಗತ ಕಮಾನಿನ ಬಳಿ ವಯ್ಯೋಂ ಎಂದು ವಾಹನಗಳು ಶಬ್ದ ಮೊಳಗಿಸುತ್ತಾ ಬಂದಾಗ ಜನಸಮೂಹ ಆಸ್ಪತ್ರೆ ಮುಂದೆ ಲಗ್ಗೆಯಿಟ್ಟಿತು. ಕೆಂಪು ದೀಪ ಹೊತ್ತಿಸುತ್ತಾ ಬಂದ ಹತ್ತಾರು ಕಾರುಗಳ ಸದ್ದಿನ ಆರ್ಭಟಕ್ಕೆ ಮಿಲಿಟರಿಯವರೆಲ್ಲಿ ತಮ್ಮನ್ನಿಡಿಯಲು ಬಂದಿದ್ದಾರೆಂದು ಹೆದರಿ ಗಾಳಿಯ ಬಟಾಲಿಯನ್ನ ಹೇಳದೆ ಕೇಳದೇ ಅಲ್ಲಿಂದ ಪಲಾಯನಗೈದಿತ್ತು. ಗಾಳಿ ಒಬ್ಬನೇ ಅಲ್ಲಿದ್ದ. ಸೂಟು, ಬೂಟು, ದೊಡ್ಡ ಟೈ ಧರಿಸಿದ ವ್ಯಕ್ತಿ ಮೊದಲು ಕಾರಿನಿಂದಿಳಿದು ನೇರವಾಗಿ ಆಸ್ಪತ್ರೆಗ ದಾಳಿಯಿಟ್ಟರು. ಗಾಳಿ ಅವರೇ ಶ್ರೀಚಲಂ ಇರಬೇಕೆಂದು ಕಾರು, ಜೀಪು, ಮನುಷ್ಯರ ನಡುವೆ ದಾರಿ ಮಾಡಿಕೊಂಡು ಆಸ್ಪತ್ರೆ ಮುಖ್ಯದ್ವಾರ ತಲುಪಿದ. ಅಲ್ಲಿ ಇಬ್ಬರೂ ಧಡೂತಿ ಪೊಲೀಸರು ಬಂದೂಕು ಹಿಡಿದು ನಿರತರಾಗಿದ್ದರು.

ಮಳೆಗೆ ಹೆದರಿ ಹೊಳೆಗೆ ಬಿದ್ದಂತೆ ಶ್ರೀಚಲಂರು ಕೇಳುವ ಪ್ರತಿ ಪ್ರಶ್ನೆಗೆ ಡಾಕ್ಟ್ರು ಗುಕ್ಕಾಗಿ ಉತ್ತರಿಸುತ್ತಿದ್ದರು. ಲೋಕಾಯುಕ್ತರು ಎಲ್ಲಿದ್ದಾರೆಂದು ಗಾಳಿ ಅಲ್ಲಿನ ಕಿಡಕಿಯಿಂದ ಬಗ್ಗಿ ನೋಡಿದ.

''ಜನಗಳೆಂದ್ರೆ ನೀವು ದನಗಳೆಂದುಕೊಂಡೆನ್ರೀ. ಸಿನ್‌ಸೇರಾಗಿ ನಿಮ್ಗ ಡೂಟಿ ಮಾಡ್ಲಿಕ್ಕೆ ಆಗದಿದ್ರೆ ರಾಜೀನಾಮೆ ಬಿಸಾಕಿ ಹೋಗಿ. ನಿಮ್ಮಂತ ದಂಡಪಿಂಡಗಳಿರೋದು ವೇಸ್ಟ'' ಎಂದೂ ದಭಾಯಿಸುತ್ತಿದ್ದರು.

ತಾನು ಬರೆದು ತಂದಿರುವ ದೂರು ಅವರ ಕೈಗೆ ತಲುಪಿದರೆ ಗುಣದೋಷ ಪರಿಶೀಲಿಸಿದರೆ, ಅವರು ಹೀಗೆ ಆ ಫಾರಿಷ್ಟ ಆಫೀಸರನ್ನ, ಆ ಮೇಷ್ಟ್ರು ಮೂರ್ತಿನ ಹಿನ್ನೆಂಗೆ ನೀರಿಳಿಸಬಹುದೆಂದು ಗಾಳಿ ವಿಶ್ಲೇಷಿಸಿದ. ಅವರಿಗೆ ದೂರ ಕೊಡಲಿಕ್ಕೆಯೆಂದು ಹಿಂದಿನ ಬಾಕಿಲಿನಿಂದ ಈ ಕಡೆ ಬಂದ. ಆಗ ಲೋಕಾಯುಕ್ತರು ಹಾಸಿಗೆ ಮೇಲಿದ್ದ ಉಪಚಾರಕ್ಕೆಂದು ಯಾರ್ಯಾರಿಗೆ ಎಷ್ಟು ಲಂಚ ಕೊಟ್ಟಿರೆಂದು ರೋಗಿಗಳೊಂದಿಗೆ ಪರಾಮರ್ಶಿಸುತ್ತಿದ್ದರು. ಆ ಕಡೆಯ ಬಾಗಿಲಿಗೆ ಪ್ರವೇಶ ನಿರಾಕರಿಸಿದ್ದರಿಂದ ಈ ಕಡೆಯ ಬಾಗಿಲಿನಿಂದ ಒಳ ನುಸುಳಬೇಕೆಂದು ಗಾಳಿ ಮತ್ತೊಮ್ಮೆ ಲೋಕಾಯುಕ್ತರತ್ತ ಕಿಟಕಿಯಿಂದ ಇಣುಕಿದ. ಅವನ ಬೆನ್ನಿಗೆ ಬಲವಾದ ಏಟೊಂದು ಬಿದ್ದಾಗ ಪೊಲೀಸ್‌ರೇನಾದರೂ ತನ್ನ ಹೀಗೆ ತದಕಿದರೇನೆಂದು ಅಳುಕಿನಿಂದ ಹಿಂದೆ ತಿರುಗಿದಾಗ 'ಹೋಗ್ಲೆ ಕತ್ತೆ. ಎದ್ರೇನು ನೋಡಾಕತ್ತಿ. ಜಲ್ದೋಗು. ಇವ್ರು ನಮ್ಮ ಶಾಲೆಗೆ ವೀಸಿಟ್ಟು ಕೊಟ್ರೆ ಕೊಡಬೌದು. ಸ್ಟೆಂತ್ ಎಷ್ಟೆಂತಾ ಚೆಕ್ ಮಾಡಿದ್ರೆ ಮಾಡಬೌದು' ಅಂತ ಅಡಸಲಿಗೆ ಸಿಕ್ಕಿದ ಹೆಗ್ಗಣದ ಹಾಗೆ ಗಂಟೆಪ್ಪ ಮೇಷ್ಟ್ರು ಕೆಂಗಣ್ಣು ಹರಿಬಿಟ್ಟಿದ್ದರು. ಅಸಾಧ್ಯ ನೋವು ಸಹಿಸಿಕೊಳ್ಳುತ್ತಾ ಗಾಳಿ ಶ್ರೀಚಲಂರಿಗೆ ಹೇಗಾದರೂ ಮಾಡಿ ದೂರನ್ನು ಸಲ್ಲಿಸಬೇಕೆಂದು ಮಂದಿಯೊಳಗೆ ತೂರಿ ಆಸ್ಪತ್ರೆಯೊಳಕ್ಕೆ ಕಾಲಿಟ್ಟ. ತನ್ನಿಂದ ದೂರು ಕೊಡಲು ಅಸಾಧ್ಯವಾದಾಗ ಲಕುಪತಿ ಎಲ್ಲಿರಬಹುದು ಅವನಿಂದ ದೂರು ಕೊಡಿಸೋಣವೆಂದು ತೀವ್ರತೆಯಲ್ಲಿ ಅವನನ್ನು ಹುಡಿಕಾಡಿದ... ಅಲ್ಲಿ ಅವನ ಹಾಜರಿರಲಿಲ್ಲ. ಗಾಳಿ ಶ್ರೀಚಲಂರು ಕೊನೆಯ ವಾರ್ಡಿನಲ್ಲಿದ್ದಕ್ಕೆ ಧಾವಂತದಿಂದ ಅವರ ಹತ್ತಿರಕ್ಕೆ ಧಾವಿಸಿದ. ಆಗಲೇ ಲೋಕಾಯುಕ್ತರು ಹಿಂದಿನ ಬಾಗಿಲಿಂದ ತಮ್ಮ ಕಾರಿನತ್ತ ಮುನ್ನಡೆದಿದ್ದರು.

ಧ್ವನಿ ಒಗ್ಗೂಡಿಸಿ ಸ...ಸಾರ್... ಅಂತ ಗಾಳಿ ಅಹವಾಲಿಸಿದ. ಮತ್ತೊಂದು ಬಾರಿ ಹೀಗೆ ಜೋರಾಗಿ ಕೂಗಲು ತಡವರಿಸಿದವನ ಗಂಟಲೊಳಗೆ ಧ್ವನಿರಾಹಿತ್ಯವಾಯಿತು. ಕೊನೆಗೆ ಹಾಗೆ ಕೂಗಿದನಾದರೂ ಪೊಲೀಸರ ಜೀಪುಗಳ ಅಬ್ಬರದ ಸದ್ದಿಂದ ಶ್ರೀಚಲಂರ ಕರ್ಣಪಟಲಕ್ಕೆ ತಾಕಿಸುವಲ್ಲಿ ಕಷ್ಟವಾಯಿತು. ಕಾರಿನ ಕೆಂಪುದೀಪ ಹತ್ತಿ ಬಾಗಿಲು ತೆರೆದು ಮುಚ್ಚಿಕೊಂಡಿತ್ತು. ಆ ಕಾರು ಹಾದಿ ಸೀಳುತ್ತಾ ಚಲಿಸಿದಾಗ ಅದರ ಹಿಂದೇನೆ ಹತ್ತಾರು ಕಾರುಗಳು ಹಿಂಬಾಲಿಸಿದವು.

ಧೂಳು ಚಿಮ್ಮುವ ಆ ಕಾರುಗಳ ಹಿಂದೆ ಮನವಿ ಹಿಡಿದು ಪ್ರಯಾಸದಿಂದ ಗಾಳಿ ಓಟಕಿತ್ತ. ಆ ಹವಾನಿಯಂತ್ರಿತ ಕಾರಿನೊಳಗೆ ಸುಖಾಸೀನರಾದ ಮಹಾನೀಯರಿಗೆ ತನ್ನ ಕಾಗದವನ್ನು ಸಮರ್ಪಿಸಲು ಹರಸಾಹಸಕ್ಕಿಳಿದ ಗಾಳಿ ಉಸಿರು ಬಿಗಿಹಿಡಿದು ದಣಿವಾದರೂ ಹಾಗೆ ದೌಡಾಯಿಸಿದ. ಅವರ ಬೆನ್ನ ಹಿಂದೇನೇ ಇನ್ನಷ್ಟು ಹುಡುಗರು ತಮಾಷೆಯಿಂದ ಓಡಿದವು.

ಯಾಕೋ, ಗಾಳಿಯ ಶ್ವಾಸಕೋಶ ಕಂತಣೇಸಿದಂತಾಗಿ ಓಟವನ್ನು ಅಲ್ಲಿಗೆ ಸ್ತಬ್ಧಗೊಳಿಸಿದ. ಅವನ ಕೈಯೊಳಗಿನ ದೂರಿನ ಪ್ರತಿ ಒದ್ದೆಯಾಗಿತ್ತು. ವಿವಶಗೊಂಡವ ಗಗನದತ್ತ ಮುಖವೆತ್ತಿದ.

ಬಿಮ್ಮನೆ ಬಿಗಿದ ದಿಗಂತದಲ್ಲಿ ರಾಜಹಂಸದಂತ ಪಕ್ಷಿಯೊಂದು ಗರಿ ಬಿಚ್ಚಿಕೊಂಡು ಹಾರಿ ಹೋಗುತ್ತಿತ್ತು. ತನ್ನ ನಯನಗಳಲ್ಲಿ ಚಂದ್ರನಿಳಿಸಿಕೊಂಡಂತೆ, ಗಾಳಿ ಅದನ್ನು ಕಂಗಳಲ್ಲಿ ತುಂಬಿಕೊಂಡ. ಆ ಪಕ್ಷಿ ಇಹದ ಬದುಕಿಗೆ ಹೊಸ ಭಾಷ್ಯ ಬರೆದಂತೆ ಸಂತಸದಲ್ಲಿ ನಿರಭ್ರ ಕಕ್ಷೆಯನ್ನು ತಲಹುತ್ತಿತ್ತು.

ವೆಂಕಟೇಶ್ ಉಪ್ಪಾರ
ಸಮುದಾಯ ಆರೋಗ್ಯ ಕೇಂದ, ಕುರುಗೋಡು - ೫೮೩ ೧೧೬, ಬಳ್ಳಾರಿ ಜಿಲ್ಲೆ

# ಎನ್.ಬಿ.ಟಿ.ಯ ಇತ್ತೀಚಿನ ಪ್ರಕಟಣೆಗಳು

## ಮಕ್ಕಳ ಪುಸ್ತಕಗಳು

**ಚಿನ್ನಾರಿ ಮುತ್ತ**
*ಎಚ್. ಎಸ್. ವೆಂಕಟೇಶಮೂರ್ತಿ* — *ಪು. 76* — ರೂ. 35.00
ಹಳ್ಳಿಗಾಡ ಹುಡುಗ ಕ್ರೀಡಾ ತಾರೆಯಾದ ಕತೆ

**ಮಕ್ಕಳು ನೀಡಿದ ಶಿಕ್ಷೆ**
*ನಾ. ಡಿಸೋಜ* — *ಪು. 48* — ರೂ. 19.00
ಪರಿಸರ ಸಂರಕ್ಷಣೆ ಬಗ್ಗೆ ನಾಟಕ

**ಸೂರ್ಯ ಬಂದ**
*ವೈದೇಹಿ* — *ಪು. 64* — ರೂ. 50.00
ರಾಕ್ಷಸನ ಸೆರೆಯಿಂದ ಸೂರ್ಯನನ್ನು ಬಿಡಿಸುವ ಮಕ್ಕಳ ನಾಟಕ

**ಮತ್ತೆ ಬಂತು ಚಂಪು**
*ಆನಂದ ಪಾಟೀಲ* — *ಪು. 40* — ರೂ. 35.00
ಚಂಪು ಎಂಬ ನಾಯಿಮರಿ ಕತೆ.

## ನವಸಾಕ್ಷರ ಸಾಹಿತ್ಯ

**ಮೂರು ಪ್ರಶ್ನೆಗಳು - *ಲಿಯೊ ಟಾಲ್‌ಸ್ಟಾಯ್***
*ಅನು : ಶಾದ್ ಬಾಗಲಕೋಟಿ* — *ಪು. 16* — ರೂ. 8.00
ಟಾಲ್‌ಸ್ಟಾಯ್ ಕಥೆಯ ರೂಪಾಂತರ

**ಮಾನವತೆಯ ಮಹತ್ವ**
*ಗಿರೀಶ್ ಪಂಕಜ್, ಅನು : ಶ್ರೀನಾಥ್* — *ಪು. 16* — ರೂ.10.00
ಮಾನವತೆಯ ಮಹತ್ವ ಹೇಳುವ ಕತೆ

## ಇತರೆ ಮಾಲಿಕೆಗಳ ಪುಸ್ತಕಗಳು

**ಮುಂದಾನೊಂದು ಕಾಲದ ಕಥೆಗಳು**
*ಸಂ. ರಾಜಶೇಖರ ಭೂಸನೂರಮಠ* — *ಪು. 128* — ರೂ. 50.00
ಹದಿಮೂರು ವೈಜ್ಞಾನಿಕ ಕಥೆಗಳ ಸಂಕಲನ

**ಶಕ್ತಿ**
*ಎ. ಕೆ. ಬಕ್ಷಿ, ಅನು : ಅಡ್ಯನಡ್ಕ ಕೃಷ್ಣಭಟ್* — *ಪು. 96* — ರೂ. 60.00
ಶಕ್ತಿಯ ಪ್ರಾಮುಖ್ಯತೆ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ

**ಕೋಮುವಾರು ಸಮಸ್ಯೆ: ಒಂದು ವರದಿ**
*ಅನು : ಈಶ್ವರಚಂದ್ರ* — *ಪು. 232* — ರೂ. 65.00
ಕಾನ್‌ಪುರ ಗಲಭೆ ವಿಚಾರಣಾ ಸಮಿತಿಯ ವರದಿ

**ಬೆಳಕು ಚೆಲ್ಲುವ ಹುಡುಗಿ**
*ಟಿ. ಪದ್ಮನಾಭನ್, ಅನು: ಡಾ: ಅಶೋಕ್ ಕುಮಾರ್*
ಮಲಯಾಳಂ ಭಾಷೆಯ ಕತೆಗಳ ಸಂಕಲನ — *ಪು. 146* — ರೂ. 65.00

**ಶ್ರೀ ಕನಕದಾಸರು**
*ಬಸವರಾಜ ನಾಯ್ಕರ್* — *ಪು. 114* — ರೂ. 45.00
ಕನಕದಾಸರ ಜೀವನ ಮತ್ತು ಕೃತಿಯ ಪರಿಚಯ

**ಸಿಂಹ ಹಾರುತ್ತಿದ್ದ ಕಾಲದಲ್ಲಿ - *ನಿಕ್ ಗ್ರೀವ್ಸ್***
*ಅನು: ಕೃಷ್ಣಮೂರ್ತಿ ಚಂದರ್* — *ಪು. 140* — ರೂ. 120.00
ಆಫ್ರಿಕಾ ಪುರಾಣದ ಮೂವತ್ತು ಪ್ರಾಣಿಕಥೆಗಳು

# ಎನ್.ಬಿ.ಟಿ. ಬುಕ್ ಕ್ಲಬ್ ಸದಸ್ಯರಾಗಿ ಶೇ. 20 ರಿಯಾಯಿತಿಯಲ್ಲಿ ಪುಸ್ತಕ ಕೊಳ್ಳಿರಿ




*ಪ್ರತಿ ಅಥವಾ ಮಾಹಿತಿಗಾಗಿ ಸಂಪರ್ಕಿಸಿ :*

ದಕ್ಷಿಣ ಪ್ರಾದೇಶಿಕ ಕಾರ್ಯಾಲಯ

**ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ**

ಹಾಲ್ ನಂ. 1, ಬಿ.ಡಿ.ಎ. ಷಾಪಿಂಗ್ ಕಾಂಪ್ಲೆಕ್ಸ್ , ಬನಶಂಕರಿ ಎರಡನೇ ಹಂತ
ಬೆಂಗಳೂರು–560 070 ದೂರವಾಣಿ/ಫ್ಯಾಕ್ಸ್: 26711994

# ಕಂಕುಳಲ್ಲಿ ಕಳ್ಳರಿದ್ದಾರೆ ಹುಷಾರ್

ಡಾ॥ ರುದ್ರಯ್ಯ ಎ. ಗದಗ

ಪ್ರಯಾಣದ ಟಿಕೆಟ್ ಕಾಯ್ದಿರಿಸಲು ರೈಲ್ವೆ, ಬಸ್ಸು ನಿಲ್ದಾಣಗಳಿಗೆ ಹೋದಾಗ, ಟ್ರೇನ್, ಬಸ್ಸಿನಲ್ಲಿ ಪ್ರಯಾಣ ಹೊರಟಾಗ, ಹಣ ತರಲು ಬ್ಯಾಂಕಿಗೆ ಭೆಟ್ಟಿಕೊಟ್ಟಾಗ, ಸುದೀಪನ ಹೊಚ್ಚ ಹೊಸ ಸಿನಿಮಾ ನೋಡಲು ಚಿತ್ರಮಂದಿರಕ್ಕೆ ಹೋದಾಗ ಅಲ್ಲೆಲ್ಲಾ ಮೊದಲಿಗೆ ಸ್ವಾಗತ ಕೋರುವವರು ಎಚ್ಚರಿಕೆಯ ಫಲಕಗಳು. 'ಕಳ್ಳರಿದ್ದಾರೆ ಹುಷಾರ್', 'ಜೇಬುಗಳ್ಳರಿಂದ ಜೋಪಾನ', 'ಸೂಟ್ಕೇಸ್ ಕಳ್ಳರಿದ್ದಾರೆ', 'ನಿಮ್ಮ ಲಗೇಜಿಗೆ ನೀವೇ ಜವಾಬ್ದಾರರು.'

ನಾವು ಹೋದಲ್ಲೆಲ್ಲ ಎಡೆಬಿಡದ ಬೇತಾಳನಂತೆ ಬೆನ್ನು ಹತ್ತುವುದು, ರಸ್ತೆ ಬದಿ ಮಾತಾಡುತ್ತ ನಿಂತಾಗ ಗ್ರಹಗಳು ಸೂರ್ಯನ ಸುತ್ತ ಗಸ್ತಿ ಹೊಡೆಯುವಂತೆ ನಮ್ಮ ಸುತ್ತಲೇ ಗಿರಕಿ ಹೊಡೆಯುವುದು ಕಳ್ಳರ ಸ್ಪೆಶಾಲಿಟಿ. ನಿಜಕ್ಕೂ ಅವರದು ಹದ್ದಿನ ದೃಷ್ಟಿ. ಕಿಸೆಗೆ ಕತ್ರಿ ಹಾಕಲು ಹೊಂಚುಹಾಕಿ, ಸಮಯಕ್ಕಾಗಿ ಬಕಪಕ್ಷಿ ತರಹ ತುದಿಗಾಲಲ್ಲಿ ನಿಂತಿರುತ್ತಾರೆ.

ಕಳ್ಳರದೇ ಒಂದು ಸಾಮ್ರಾಜ್ಯ. ಅದಕ್ಕೊಬ್ಬ ಸಮರ್ಥ ಬಾಸ್. ಗ್ಯಾಂಗ್ ಬಂಟರೆಲ್ಲ ಬಾಸ್‌ಗೆ ತುಂಬಾ ವಿಧೇಯರು. ಗಟ್ಟಿಗೆ ಹಚ್ಚಿದಾಗ ಗುಟ್ಟನ್ನು ರಟ್ಟು ಮಾಡದ ಸ್ವಭಾವದವರು. ಪರರ ಸೊತ್ತನ್ನು ಪರ್ಫೆಕ್ಟಾಗಿ ಲಪಟಾಯಿಸುವದರಲ್ಲಿ ಸಿದ್ಧಹಸ್ತರು. ದಯೆ, ದಾಕ್ಷಿಣ್ಯ, ಅನುಕಂಪ, ಕನಿಕರಗಳಿಗೆ ನೆಲೆನೀಡದ ಹೃದಯದಾರಿದ್ರ್ಯರು. ಬಾಸ್ ತನ್ನ ಕೈಯಲ್ಲೊಂದು ಮೊಬೈಲ್ ಹಿಡಿದು, ನಗರದೆಲ್ಲೆಡೆ ಅಣಬೆಯಂತೆ ಹರಡಿರುವ ತನ್ನ ಬಂಟರಿಗೆ ಸೂಚನೆಗಳನ್ನು ರವಾನಿಸುತ್ತ ಎ.ಸಿ. ಕಾರಿನಲ್ಲಿ ಜಾಲಿಯಾಗಿ ಓಡಾಡಿಕೊಂಡಿರುತ್ತಾನೆ.

ದಿನಬೆಳಗಾದರೆ ಸಂಚರಿಸುವ ಸಿಟಿ ಬಸ್ಸುಗಳಲ್ಲಿ ವಿಶೇಷವಾಗಿ ಪೀಕ್ ಅವರ್‌ಗಳಲ್ಲಿ ಕಳ್ಳರಿಗೆ ಎಡೆಬಿಡದ ಕೆಲಸ. ಬಸುರಿ ಬಸ್ಸುಗಳು ಕಣ್ಣು ಮಿಟುಕಿಸಿ ಕಳ್ಳರನ್ನು ಆಹ್ವಾನಿಸುತ್ತವೆ. ಆಪರ್ಚುನಿಟಿ ಸಿಕ್ಕ ತಕ್ಷಣ ಎವೆಯಿಕ್ಕುವಷ್ಟರಲ್ಲಿ ಠಾಕು-ಠೀಕಿನವರಿಗೆ ತಮ್ಮ ಕೈಚಳಕ ತೋರಿಸಿ ಕೂಲಾಗಿ ಜನವಾಹಿನಿಯಲ್ಲಿ ಒಂದಾಗಿಬಿಡುತ್ತಾರೆ.

ಪದೇ ಪದೇ ಹಣ ಕಳಕೊಂಡು ಕಂಗಾಲಾದ ಜನ ಸಮಸ್ಯೆಗೊಂದು ಗತಿಕಾಣಿಸಲು ದರ್ಜಿಗಳ ದುಂಬಾಲು ಬಿದ್ದರು. ಪ್ಯಾಂಟಿನ ಸೇಫ್ ಜೇಬು ರೂಪಗೊಂಡಿದ್ದು ಅದರ ಫಲಶ್ರುತಿ. ದರ್ಜಿಯ ಬ್ರೇನ್‌ಚೈಲ್ಡ್. ಆ ಜೇಬು ನಿರೀಕ್ಷೆಯಂತೆ ಸುರುವಿನಲ್ಲಿ ಹಣವನ್ನು ಕಾಪಾಡಿದ್ದು ನಿಜ. ಆದರೆ ಮುಂದೆ ಅದೇ ಮುಳುವಾಗಬೇಕೆ ? ಮತ್ತೆ ಯಥಾಸ್ಥಿತಿ. ತಮಾಷೆಯೆಂದರೆ ಕಿಸೆಗಳ್ಳರ ಪ್ಯಾಂಟಿಗೂ ಥೇಟ್ ಅದೇ ಜೇಬು! ಸೇಫ್ ಜೇಬಿನಲ್ಲಿಟ್ಟ ದುಡ್ಡು ಸೇಫಾಗಿರಲು ಅದು ಹೇಗೆ ಸಾಧ್ಯ ? ಭಯಾನಕ ಸಂಗತಿಯೆಂದರೆ ಕಿಸೆಗಳ್ಳರು ಸೇಫ್ ಜೇಬಿಗೆ ಬ್ಲೇಡ್ ಹಾಕುವಾಗ ಆಕಸ್ಮಾತ್ ಕೈತಪ್ಪಿ ಬ್ಲೇಡ್ ಮರ್ಮಾಂಗಕ್ಕೆ ತಟ್ಟಿದರೆ... ಶಿವನೇ ಗತಿ! ಇನ್ನು ಸೇಫ್ ಜೇಬು ಇದ್ದರೆ ತಾಪತ್ರಯ ತಪ್ಪಿದ್ದಲ್ಲ. ಅದರ ಉಸಾಬರಿ ಯಾಕೆ ಬೇಕು ?

ಚೋರರ ಹರಿತ ಬ್ಲೇಡ್ ನನ್ನ ಸೇಫ್ ಜೇಬಿನ ಮೇಲೆ ನಾಲ್ಕು ಬಾರಿ ರೇಪ್ ಮಾಡಿದೆ. ನಾನು ಸಾಕಷ್ಟು ದುಡ್ಡು ಕಳೆದುಕೊಂಡು ಹುಚ್ಚಮಂಗ್ಯಾ ಆಗಿದ್ದು, ವಾಚಾಳಿ ಹೆಂಡತಿಯಿಂದ ಬೈಸಿಕೊಂಡದ್ದು, ಮನೆಯವರು ಹಚಹಚ ಅಂದದ್ದು ಮರೆತಿಲ್ಲ.

ಈಗ ಹೇಳೋದು ನಾಲ್ಕನೇ ಬ್ಲೇಡ್ ಪ್ರಸಂಗ. ಅದೊಂದು ದಿನ ನಾನು ಮಗಳೊಡನೆ ಬ್ಯಾಂಕಿಗೆ ಹೋಗಿದ್ದೆ. ಐದು ಸಾವಿರ ತೆಗೆದು ಸೇಫ್ ಜೇಬಿನಲ್ಲಿಟ್ಟೆ. ನನ್ನ ಗ್ರಹಚಾರಕ್ಕೆ ವಾಪಸ್ ಹೋಗಲು ಬಸ್ ಬೇಗನೆ ಬರಲಿಲ್ಲ. ಕೊನೆಗೆ ಬಂದ ಬಸ್ಸಿನಲ್ಲಿ ಹೊಟ್ಟೆಬಿರಿಯುವಷ್ಟು ಮಂದಿ. ಈ ರಷ್‌ನಲ್ಲಿ ಹೋಗೋದುಬ್ಯಾಡ ಅಂತ ಬಡ್ಕೊಂಡೆ. ಮಗಳೆಲ್ಲಿ ಕೇಳುತ್ತಾಳೆ. ತಡಮಾಡದೆ ಮುಂದಿನ ಡೋರ್‌ನಿಂದ ಒಳಗೆ ನುಗ್ಗಿದಳು. ವಿಧಿಯಿಲ್ಲದೆ ನಾನೂ ಹಿಂದಿನ ಡೋರ್‌ನಿಂದ ದಡಬಡಿಸಿ ಒಳಗೆ ತೂರಿದೆ.

ಎಡಗೈಯಲ್ಲೊಂದು ಕೈಚೀಲ, ಬಲಗೈಯಲ್ಲಿ ನೇತಾಡುವ ತೊಗಲಿನ ಪಟ್ಟಿ ಹಿಡಿದು, ಕುಡಿದವರಂತೆ ಓಲಾಡುತ್ತ ನಿಂತೆ. ನಾಲ್ಕೂ ಕಡೆಯಿಂದ ನೂಕುನುಗ್ಗಲು. ವಿಪರೀತ ಒತ್ತಡದಿಂದ ನನ್ನ ಮೈಗೆ ಇಸ್ತ್ರೀ ಮಾಡಿದ ಅನುಭವ. ಇಷ್ಟು ಸಾಲದು ಅಂತ ಪ್ರಯಾಣಿಕರ ಬೆವರಿನ ಗಬ್ಬು ನಾತ, ಗುಟ್ಕಾದ ಘಾಟುವಾಸನೆ. ಸಹ್ಯವಾಗದಿದ್ದರೂ ನಿರ್ಲಿಪ್ತನಾಗಿ ನಿಂತಿದ್ದೆ.

ನಮ್ಮ ಸ್ಟಾಪ್ ಬಂದ ತಕ್ಷಣ ಸಟ್ಟನೆ ಬಸ್ಸಿಳಿದು ನಿರಾಳ ಉಸಿರು ಬಿಟ್ಟೆ. ಮನೆ ಸೇರಿ ತಂದ ಹಣ ತೆಗೆದಿರಿಸಲು ಸೇಫ್ ಜೇಬಿಗೆ ಕೈ ಇಳಿಸಿದೆ. ಎದೆ ಧಸಕ್ಕೆಂತು! ಅಲ್ಲೇನಿದೆ ಮಣ್ಣಾಂಗಟ್ಟಿ. ಹಣ ತಂದು ತಾಸಾಗಿರಲಿಲ್ಲ. ನಡುದಾರಿಯಲ್ಲೇ ಕೈಬಿಟ್ಟಿತ್ತು. ಚೋರರು ಬಿಟ್ಟುಹೋದ ಜೇಬಿನ ಮೇಲಿನ ಅಡ್ಡಾದಿಡ್ಡಿ ಗುರುತುಗಳು ಅವರ ನೈಪುಣ್ಯತೆಯನ್ನು ಬಿಂಬಿಸುತ್ತಿದ್ದವು.



ಇನ್ನೊಂದು ವಿಭಿನ್ನ ಪ್ರಸಂಗ. ತುಂಬಾ ಹಳೆಯದು. ಹತ್ತಿರ ಹತ್ತಿರ ಎರಡು ದಶಕಗಳೇ ಕಳೆದುಹೋಗಿವೆ. ಎಂದೋ ಹಾಕಿಟ್ಟ ಉಪ್ಪಿನಕಾಯಿಯನ್ನು ರುಚಿಗೆ ಚಪ್ಪರಿಸುವಂತೆ ಸವಿಯಬಹುದು.

ನಾನು ಗದಗಿನ ಆನಂದಾಶ್ರಮದಲ್ಲಿದ್ದು ಹಾಯ್ ಸ್ಕೂಲ್ ಓದುವ ಸಮಯ. ಚಿಕ್ಕಂದಿನಿಂದ ನನಗೆ ಸಿನಿಮಾ ನೋಡುವ ಚಟ. ದೀಪಾವಳಿ ಹಬ್ಬಕ್ಕೆ ಊರಿಗೆ ಹೋಗಿ ಅಂದು ವಾಪಸ್ ಬಂದಾಗ ಹೊಸ ಸಿನಿಮಾದ ಪೋಸ್ಟರ್ ಕಣ್ಣಿಗೆ ಬಿತ್ತು, ಸೀದಾ ಟಾಕೀಜಿಗೆ ಓಡಿದೆ. ಅದರ ಆವರಣ ಜನರಿಂದ ಗಿಜಿಗುಟ್ಟುತ್ತಿತ್ತು. ನಾನು ನನ್ನ ಪಾಡಿಗೆ ಸರತಿ ಸಾಲಿನಲ್ಲಿ ನಿಂತಿದ್ದೆ. ಓರ್ವ ವ್ಯಕ್ತಿ ನನ್ನ ಬಾಜು ನಿಂತು ಹಲ್ಲು ಕಿರಿದ. ''ಸಾರ್, ಸರತಿಸಾಲು ಹನುಮಂತನ ಬಾಲ. ನಿಮ್ಮ ಟಿಕೆಟ್ ಜತಿಗೆ ನಂದು ತಗೊಂಡ್ರ ದೊಡ್ಡ ಉಪ್ಕಾರ ಆಕ್ಕೈತಿರಿ'' ಎಂದು ಗೋಗರೆದ.

''ಕೈಯಾಗ ಕೈ ಚೀಲ, ಕೊಡೆ ಹಿಡ್ಕೊಂಡು, ಈ ಗದ್ದಲದಾಗ ಟಿಕೆಟ್ ತಗೋಳ್ಳೋದು ಹಳುವಾರ ಕೆಲ್ಸ ಅಲ್ಲಬಿಡು'' ನುಣುಚಿಕೊಳ್ಳಲು ರೈಲು ಬಿಟ್ಟೆ.

''ಏನ್ಸಾರ್, ಅದಕ್ಯಾಕಿಷ್ಟು ಪೇಚಾಡ್ತೀರಾ? ಸಾಮಾನಿನ ಚಿಂತಿ ಮರ್ತು ಬಿಡ್ರಿ. ನಾನು ಅವ್ನ ಹಿಡ್ಕೊಂಡು ಬಾಲ್ಕನಿ ಡೋರ ಹತ್ರ ನಿಮ್ಮಗ ಕಾಯ್ತಿರ್ತೀನಿರಿ'' ಎಂದು ಹೇಳಿ, ಕೈಯಲ್ಲಿದ್ದ ವಸ್ತುಗಳನ್ನು ಸರಕ್ಕನೆ ಕಸಗೊಂಡು, ಟಿಕೆಟ್ ಹಣ ಕೈಯಲ್ಲಿ ತುರುಕಿ ದಡದಡ ಹೋಗೇ ಬಿಟ್ಟ.



ನನ್ನ ಪಾಳಿ ಬಂತು. ಟಿಕೆಟ್ ಸಿಕ್ಕ ಖುಷಿಯಲ್ಲಿ ಬಾಲ್ಕನಿ ಕಡೆ ಓಡಿದೆ. ನನಗಲ್ಲಿ ಅಚ್ಚರಿ ಕಾದಿತ್ತು. ಅನಾಮಿಕನ ಸುಳಿವೇ ಇಲ್ಲ! ಆ ಬೇವಾರ್ಸಿ ನನಗೆ ಸರಿ ಟೋಪಿ ಹಾಕಿ ಯಾವಾಗಲೋ ಅಲ್ಲಿಂದ ಕಂಬಿ ಕಿತ್ತಿದ್ದ. ಅವನೀಗ ಮನೆ ಸೇರಿ ಟಿವಿಯಲ್ಲಿ 'ಮಿ. ೪೨೦' ಸಿನಿಮಾ ನೋಡುತ್ತಿರಬಹುದೆಂಬ ಸಂಗತಿ ನನ್ನನ್ನು ಅಣಕಿಸುವಂತೆ ಭಾಸವಾಯ್ತು. ಸಿನಿಮಾ ನನ್ನೆದುರು ಓಡುತ್ತಿದ್ದರೂ ನನಗೆ ಮಾತ್ರ ನೋಡಲಾಗಲಿಲ್ಲ. ಅವನೇನಾದರೂ ಸಿಕ್ಕರೆ ಹಿಡಿದು ಬೆನ್ನಿಗೆ ದಪದಪ ಗುದ್ದುವಷ್ಟು ಸಿಟ್ಟು. (ಆಗಲೇ ಟಿ.ವಿ. ಇದ್ದಿತೇ ಎಂದು ಕೇಳಬೇಡಿ.).

* * *

ಒಂದು ಮಾತು ಸತ್ಯ. ಕಳ್ಳರಿಗೆ ಧರ್ಮ, ನೀತಿ ಇರುವುದಿಲ್ಲ. ವಂಚನೆಯೇ ಧರ್ಮ, ಕಳ್ಳತನವೇ ನೀತಿ. ಈಗ ಕೇಳಿ ನನ್ನ ನೆನಪಿನಾಳದಿಂದ ತಪ್ಪಿಸಿಕೊಂಡು ಬಂದ ವಿನೂತನ ಪ್ರಸಂಗ.

ನಮ್ಮ ತಾಯಿಯ ದಿವಸ ಮಾಡುವ ನಿಮಿತ್ತ ಸಾಮಾನು ತರಲೆಂದು ನಾನು ಸಿಟಿಗೆ ಹೋದೆ. ಮೊದಲಿಗೆ ಊಟದ ದಿನಸಿ, ತರಕಾರಿ, ಹಣ್ಣು ಖರೀದಿಸಿ, ಗೋಣಿಚೀಲದಲ್ಲಿ ತುಂಬಿ, ಬಾಯಿ ಬಿಗಿದು, ಪಕ್ಕದ ತೈಲ ವ್ಯಾಪಾರಿ ಬಳಿ ಇರಿಸಿ, ''ಸ್ವಾಮಿ, ನಾನು ಮಿಕ್ಕ ಸಾಮಾನು ತರಲು ಬ್ಯಾರೆ ಕಡೆ ಹೊಂಟೀನಿ. ವಾಪಸ್ ಬರೋತನಕ ಈ ಚೀಲದ ಮ್ಯಾಲೆ ನಿಗಾ ಇರ್ಲಿ'' ಅಂತ ವಿನಂತಿ ಮಾಡಿಕೊಂಡೆ. ''ಸರಿ ಆಯ್ತು'' ಕಾಟಾಚಾರಕ್ಕೆ ತಲೆಯಾಡಿಸಿ ಕೆಲಸದಲ್ಲಿ ಮುಳುಗಿದ.

ನಾನು ಮಿಕ್ಕೆಲ್ಲ ಕೆಲಸ ಮುಗಿಸಿಕೊಂಡು ವಾಪಸ್ ಬಂದಾಗ... ನನಗೆ ಆಘಾತ ಕಾದಿತ್ತು! ಸಾಮಾನು ತುಂಬಿದ ಚೀಲ ಮಂಗಮಾಯ! ಬೆರಗಿನಿಂದ ತೈಲದವನನ್ನು ಪ್ರಶ್ನಿಸಿದೆ –

''ನೀವು ಹೋದ ಸೊಲ್ಪ ಹೊತ್ಗೆ ಒಬ್ಬ ಹುಡುಗ ಬಂದ. ನೀವು ಕ್ಯಾಂಟೀನಿನಲ್ಲಿ ಕುಂತು ಟೀ ಕುಡಿತಾರ, ಇಲ್ಲಿಟ್ಟಿದ್ದ ಗೋಣಿಚೀಲ ತಗೊಂಡು ಬಾ ಅಂತ ಕಳಿಸ್ಯಾರಂತ ಪಟಪಟನೆ ಹೇಳ್ದ. ಅವ್ನ ಮಾತು ಖರೆ ಅಂತ ಕನ್‌ಫರ್ಮ ಆಯ್ತು. ಚೀಲ ಕೊಟ್ಟು ಕಳಿಸ್ದೆ. ಹಾಗಾದ್ರೆ... ಆ ಚೀಲ ನಿಮ್ಮ ಕೈ ಸೇರಲಿಲ್ವಾ?'' ಸಮಜಾಯಿಷಿ ನೀಡಿ ಸವಾಲು ಎಸೆದ.

ಅಲ್ಲ ಆ ಚೋಟುದ್ದ ಹುಡುಗ ಸಲೀಸಾಗಿ ಸುಳ್ಳುಸುಳ್ಳು ಬೊಗಳೆ ಬಿಟ್ಟು ಬೆಸ್ತು ಬೀಳಿಸಿದ. ಛೇ, ನಾನು ಭರಪೂರ ಮನೋರಂಜನೆಯ ಪ್ರಾಣಿಯಾಗಿಬಿಟ್ಟೆ.

* * *

ಇತ್ತೀಚಿನ ಕಳವಳಕಾರಿ ಬೆಳವಣಿಗೆ ಎಂದರೆ ತಲೆ ಎತ್ತಿರುವ ಸೂಟ್ಕೇಸ್ ಚೋರರ ಗ್ಯಾಂಗ್. ರಾತ್ರಿ ಓಡಾಡುವ ಸುಖವಿಹಾರ ಬಸ್ಸು, ಟ್ರೇನ್‌ಗಳು ಅವರಿಗೆ ಪ್ರಿಯವಾದ ಕಾರ್ಯಕ್ಷೇತ್ರಗಳು. ಯಾವ ಸೂಟ್ಕೇಸ್‌ನಲ್ಲಿ ಅಮೂಲ್ಯ ವಸ್ತುಗಳಿವೆ, ಯಾವುದರಲ್ಲಿ ಇಲ್ಲ ಎಂಬುದನ್ನು ತಮ್ಮ ಕ್ಷ-ಕಿರಣ ಕಣ್ಣುಗಳಿಂದ ಕರಾರುವಾಕ್ಕಾಗಿ ಊಹಿಸುವಲ್ಲಿ ಮಹಾನಿಪುಣರು. ಕಣ್ಣು ಹಾಕಿದ ಸೂಟ್ಕೇಸ್‌ಅನ್ನು ಯಾವುದೋ ಮಾಯದಲ್ಲಿ ಹಾರಿಸಿಕೊಂಡು ಹೋಗುವುದರಲ್ಲಿ ನಿಷ್ಣಾತರು.

ಒಂದು ಸಲ ನಾನು ಮಂಗಳೂರಿನಿಂದ ಬೆಂಗಳೂರಿಗೆ ಪ್ರಯಾಣ ಹೊರಟಿದ್ದೆ. ಬಸ್ ನಿಲ್ದಾಣದಲ್ಲಿ ನಿಂತಿದ್ದ ರಾಜಹಂಸ ರಾತ್ರಿ ಬಸ್ಸು ಏರಿ ಹೋಗಿ, ಕಾದಿರಿಸಿದ ಸೀಟಿನ ಮೇಲೆ ಸೂಟ್ಕೇಸ ಇಟ್ಟೆ. ಒಳಗಡೆ ವಿಪರೀತ ಸೆಖೆ. ಮೈಯೆಲ್ಲಾ ಬೆವರು. ಬಸ್ಸಿಳಿದು, ಮುಖದ ಬೆವರು ಒರೆಸಿಕೊಂಡು, ಗಾಳಿಗೆ ಮೈಯೊಡ್ಡಿ ಹಾಯಾಗಿ ನಿಂತಿದ್ದೆ. ದೂರದಲ್ಲಿ ಡ್ರಾಯ್‌ವರ್, ಕಂಡಕ್ಟರ್ ಬರುವುದು ಕಣ್ಣಿಗೆ ಬಿತ್ತು. ನಾನು ಬಸ್ ಏರಿ ಸೀಟಿನ ಬಳಿ ಹೋಗಿ ನೋಡಿದರೆ... ಸೂಟ್ಕೇಸ್ ಮಂಗಮಾಯ! ಅದರ ಬಗ್ಗೆ ವಿಚಾರಿಸಿದರೆ ಕಂಡಕ್ಟರ್ ಒಂದು ಫಲಕದ ಕಡೆ ತೋರು ಬೆರಳು ತೋರಿಸಿದ: 'ಸೂಟ್ಕೇಸ್ ಕಳ್ಳರಿದ್ದಾರೆ. ನಿಮ್ಮ ಲಗೇಜಿಗೆ ನೀವೇ ಜವಾಬ್ದಾರರು.' ನಾನು ಸುಸ್ತೋ ಸುಸ್ತು!

ಏನೇ ಹೇಳಿ ಚೋರರು ತೋರುವ ಚಾತುರ್ಯ, ಚಾಲಾಕಿತನ, ಕೈಚಳಕ ನಿಜಕ್ಕೂ ಶ್ಲಾಘನೀಯ. ಕಾಲಕ್ಕೆ ತಕ್ಕಂತೆ ನೂತನ ತಂತ್ರಜ್ಞಾನ ಅಳವಡಿಸಿಕೊಂಡು ಕದಿಯುವ ಕಸುಬನ್ನು ಹುಲುಸಾಗಿ ಮಾಡಿಕೊಳ್ಳುವಲ್ಲಿ ಪರಿಣತರು. ಸೊತ್ತು ಕಳೆದುಕೊಂಡ ಬೇಸರದಲ್ಲಿ ಕಳ್ಳನಿಗೆ ಸಹಸ್ರ ನಾಮಾರ್ಚನೆ ಮಾಡುವುದು, ಹಿಡಿಶಾಪ ಹಾಕುವುದು ತಪ್ಪೇನಲ್ಲ. ಆದರೆ ಅವರ ಬದುಕಿನ ಹಿಂದೆ ಬಚ್ಚಿಟ್ಟಿರುವ ಕಥೆ ಕೇಳಿದರೆ ಅವರ ಮೇಲೆ ಕರುಣೆ ಬಾರದಿರದು.

ಅವರು ಬಾಲ್ಯದಲ್ಲಿ ತಂದೆ ತಾಯಿಗಳಿಂದ, ಸಮಾಜದಿಂದ ನ್ಯಾಯವಾಗಿ ಸಿಗಬೇಕಾಗಿದ್ದ ಪ್ರೀತಿ, ವಾತ್ಸಲ್ಯ, ಶಿಕ್ಷಣ, ಸಂಸ್ಕಾರಗಳಿಂದ ವಂಚಿತರಾಗಿ ಈ ದಂಧೆಗೆ ಇಳಿದಿರುತ್ತಾರೆ. ಈ ವಿಷಚಕ್ರದಲ್ಲಿ ಒಮ್ಮೆ ಸಿಲುಕಿಕೊಂಡರೆ ಮುಂದೆಂದೂ ಇದರಾಚೆಗೆ ಯೋಚಿಸುವ ಗೊಡವೆಗೆ ಹೋಗುವುದಿಲ್ಲ. ಅದೂ ಅಲ್ಲದೆ ಅವರಿಗೆ ಈ ದಂಧೆ ಬಿಟ್ಟರೆ ಮತ್ಯಾವ ಕೆಲಸ ಮಾಡಲು ಸಾಧ್ಯ? ಸಾಧ್ಯವಿದ್ದರೂ ಮಾಡಲು ಮನಸ್ಸಾಗದು. ಕೈಕೆಸರಾದರೆ ಕೈ ತುಂಬ ದುಡ್ಡು ಬಾಚಿಕೊಳ್ಳುವಾಗ ಯಾವ ಚೋರನನ್ಮಗ ಈ ಕಸುಬಿನ ಕೊಂಡಿ ಕಳಚಿಕೊಳ್ಳಲು ತಯಾರಿದ್ದಾನೆ?

ಡಾ|| ರುದ್ರಯ್ಯ ವಿ. ಗದಗ
ಮ.ನಂ. ೨೪೦/೪೨, ವಿವೇಕಾನಂದನಗರ
ನೀರಿನ ಟ್ಯಾಂಕ್ ಹತ್ತಿರ, ಗದಗ - ೫೮೨ ೧೦೧







# ಇತರರಿಗಾಗಿ ಕಟ್ಟುವವರು !

ಉತ್ತರ ಕರ್ನಾಟಕದ ಬರಪೀಡಿತ ಜಿಲ್ಲೆಗಳಿಂದ ಬದುಕು ಅರಸುತ್ತ ಬೆಂಗಳೂರಿಗೆ ಬಂದವರು. ನಾಲ್ಕೈದು ಎಕರೆಯಷ್ಟು ಸ್ವಂತ ಜಮೀನಿದ್ದರೂ ಬದುಕು ಸಾಗಿಸಲು ಕೂಲಿ ಕೆಲಸ ಮಾಡಬೇಕಾದ ನಿರ್ಬಂಧಕ್ಕೊಳಗಾದವರು. ತಾವಾಯಿತು ತಮ್ಮ ಕಾಯಕವಾಯಿತು. ಲಗ್ಗೆರೆ, ಕುರುಬರಹಳ್ಳಿ – ಮುಂತಾದ ಕಡೆ ಹತ್ತು ವರ್ಷಗಳಿಂದ ಜೀವಿಸುತ್ತಿದ್ದರೂ, ಒಂದು ರೇಷನ್ ಕಾರ್ಡ್ ಮಾಡಿಸಲೂ ಪ್ರಯತ್ನಿಸದ ಅಮಾಯಕರು !

ಮಕ್ಕಳು ಮರಿ ಸಹಿತ ಮುಂಜಾನೆ ಕೆಲಸದ ಸ್ಥಳಕ್ಕೆ ಹಾಜರು. ಊಟದ ವೇಳೆ, ವಿರಾಮದ ವೇಳೆ – ಮುಂತಾದ ಸವಲತ್ತುಗಳು ತಮ್ಮಂಥವರಿಗಿಲ್ಲ ಎಂಬುದನ್ನು ಅರಿತವರು ! ಕಾಂಕ್ರೀಟು ಹಾಕುವ ಕೆಲಸವೆಂದರೆ, ಕೆಲಸಕ್ಕೆ ಕೈ ಹಚ್ಚುವ ಮೊದಲೇ ರೊಟ್ಟಿ ಬುತ್ತಿ ಬಿಚ್ಚಬೇಕು. 'ನಮಗೊಂದಾರ ರೊಟ್ಟಿ ಕೊಡ್ರೆಪಾ' – ಎಂದರೆ, 'ಬರ್ರಿ ಸರ, ಸಂಕೋಚ ಬ್ಯಾಡ್ರಿ. ರೊಟ್ಟಿ ಬಾಳ್ ಅದಾವು !' ಎಂದು ಆತಿಥ್ಯ ನೀಡಲು ಮುಂದಾಗುವವರು. ರೊಟ್ಟಿ ತಿಂದು ಮುಗಿಸಿ ಗಟಗಟ ನೀರು ಕುಡಿದು, ಟೊಂಕಕಟ್ಟಿ ಕೆಲಸಕ್ಕೆ ತಯಾರು.

ಕಾಂಕ್ರೀಟು ಹೊತ್ತ ಮಹಿಳೆಗೆ ಮನೆಯಲ್ಲಿ ಉಳಿದು, ಶಾಲೆಗೆ ಹೋಗುವ ಮಗನ ನೆನಪು. ರಜೆಯ ದಿನವಾದರೋ ಮಕ್ಕಳದು ಕೆಲಸದ ಸ್ಥಳದಲ್ಲೇ ಆಟ.

ಎಳೆಯ ಕೂಸಿಗೆ ಮಾಯದ ತೂಕಡಿಕೆ. ಭೂಮಿತಾಯಿಯೇ ಹಾಸಿಗೆ, ತೊಟ್ಟಿಲು. ಕಾಂಕ್ರೀಟ್ ಮಿಕ್ಸರಿನ ಜೋಗುಳ. ಈ ಗದ್ದಲದ ನಡುವೆ ಗಡದ್ದು ನಿದ್ದೆ ತೆಗೆಯುವ ಕಂದನ ಕಡೆಗೆ ಅವ್ವನ ಗಮನ !

ಇವರು ಕಟ್ಟುವವರು !

ಚಿತ್ರ-ಲೇಖನ : ಕೆ. ಪಿ. ಸ್ವಾಮಿ





# ...ಪ್ರಕಾಶನದ ಹೆಮ್ಮೆಯ ಕೊಡುಗೆ

...ಮಾಲೆ



ತಲಾ ರೂ. 40 ಬೆಲೆಯ, ಒಟ್ಟು ರೂ. 1000 ಮೌಲ್ಯದ ಪುಸ್ತಕಗಳು ಪ್ರಕಟಣಪೂರ್ವ ರಿಯಾಯಿತಿ ಬೆಲೆ ರೂ. 700ಕ್ಕೆ ಲಭ್ಯ. ಇಂದೇ ಬೇಡಿಕೆ ಸಲ್ಲಿಸಿ

...ಚಂದ್ರಶೇಖರ್




























...ಸಿ ನಮಗೆ ಎಂ.ಓ. ಅಥವಾ ಡಿ. ಡಿ. ಕಳಿಸಿ

**...ಪ್ರೈವೇಟ್ ಲಿಮಿಟೆಡ್**

...ಬೈ 5159, ಕುಮಾರ ಪಾರ್ಕ್ ಪೂರ್ವ

...0578022 ಫ್ಯಾಕ್ಸ್ : 30578023

...www.navakarnatakabooks.com

# ಅಕ್ರಿಲಿಕ್ ವರ್ಣ ಮಾಧ್ಯಮದಲ್ಲಿ

# ಶ್ವಾನ ವೈಭವ...



'**ಡಾ**ಗ್ ಬಾಸ್' ಇದು ಯುವ ಕಲಾವಿದನ ಮೆಚ್ಚಿನ ಸರಣಿ ಚಿತ್ರಗಳ ಶೀರ್ಷಿಕೆ. ನಿಯತ್ತಿನ ಸಾಕುಪ್ರಾಣಿ ನಾಯಿ ಯುವ ಕಲಾವಿದನ ಕಲಾಕೃತಿಗಳಲ್ಲಿ 'ಬಾಸ್' ಆಗಿ ವಿಜೃಂಭಿಸಿದೆ. ಇಲ್ಲಿನ ಕಲಾಕೃತಿಗಳು ಶ್ವಾನ ವೈಭವದಿಂದ ಕಲಾಸಕ್ತರನ್ನು ಆಕರ್ಷಿಸಿವೆ. ಸಂತೋಷ ಹೆಗಡೆ ಐದು ವರ್ಷಗಳ ಉನ್ನತ ಕಲಾ ಶಿಕ್ಷಣ ಪೂರೈಸಿದವರು, ಉತ್ತರ ಕನ್ನಡ ಜಿಲ್ಲೆ ಶಿರಸಿ ತಾಲ್ಲೂಕಿನ ಗಡಿಗೆಹೊಳೆಯವರು. ಬಿ.ಎಫ್.ಎ. ಕಲಾ ಪದವಿಯನ್ನು ೨೦೦೪-೦೫ರಲ್ಲಿ ಮುಗಿಸಿ ಭರವಸೆಯ ಚಿತ್ರಕಲಾವಿದರಾಗಿ ಹೊರಹೊಮ್ಮಿದ್ದಾರೆ.



ಅಕ್ರಿಲಿಕ್ ವರ್ಣ ಮಾಧ್ಯಮ ಇವರ ಹೆಚ್ಚಿನ ಕಲಾಕೃತಿಗಳಿಗೆ ಬಳಕೆಯಾಗಿದೆ. ಪಾರದರ್ಶಕ ಶೈಲಿಯಲ್ಲಿ ಹಾಗೂ ಸಾಕುಪ್ರಾಣಿ ನಾಯಿ-ಬೆಕ್ಕುಗಳನ್ನೇ ವಸ್ತು ವಿಷಯವಾಗಿ ಕಲಾಕೃತಿಗಳಿಗೆ ಬಳಸಿಕೊಂಡು ಇವುಗಳ ಕಲಾತ್ಮಕ ಸಂಯೋಜನೆಯಿಂದಲೇ ಕಲಾಕೃತಿಯನ್ನು ಶ್ರೀಮಂತಗೊಳಿಸುವ ಜಾಣ್ಮೆ ಮಾತ್ರವಲ್ಲ, ಅವುಗಳ ಗೂಢಾರ್ಥಗಳು ಕಲಾವಿದನ ವಿಚಾರಕ್ಕೂ ಮೀರಿದ ಕಲ್ಪನೆಗಳನ್ನು ನೋಡುಗನಿಗೆ ಮೂಡಿಸುತ್ತವೆ.

ಲೇಖನ : ಜಿ. ಎಂ. ಬೊಮ್ನಳ್ಳಿ
ಬೊಮ್ನಳ್ಳಿ - ೫೮೧ ೪೦೨, ಉತ್ತರ ಕನ್ನಡ ಜಿಲ್ಲೆ





# ಸಿಂಗೂರ್, ನಂದಿಗ್ರಾಮಗಳೆಂಬ ಅಭಿವೃದ್ಧಿಯ ಕೂಪಗಳು

# ಪಶ್ಚಿಮ ಬಂಗಾಳದ ವಿದ್ಯಮಾನಗಳು

ಎಡರಂಗ ಸರ್ಕಾರದ ಪ್ರಕಾರ ಕೃಷಿಯಿಂದ ಇನ್ನು ಪಶ್ಚಿಮ ಬಂಗಾಳದ ಅಭಿವೃದ್ಧಿ ಸಾಧ್ಯವಿಲ್ಲ, ಆದ್ದರಿಂದ ಕೈಗಾರಿಕೀಕರಣದಿಂದ ಮಾತ್ರ ಪಶ್ಚಿಮ ಬಂಗಾಳ ಇತರ ರಾಜ್ಯಗಳಂತೆ ಅಭಿವೃದ್ಧಿ ಹೊಂದಲು ಸಾಧ್ಯ. ಅದಕ್ಕೆ ಬಂಡವಾಳ ಬೇಕು. ಅದನ್ನು ಪಡೆಯಲು ಏನೇನೋ ಕಸರತ್ತುಗಳನ್ನು ಮಾಡಲೇಬೇಕು. ಆದರೆ ಪ್ರಶ್ನೆ ಈ ಬಗೆಯ ಕೈಗಾರಿಕೀಕರಣದಿಂದ ಪಶ್ಚಿಮ ಬಂಗಾಳ ಅಭಿವೃದ್ಧಿ ಹೊಂದಲು ಸಾಧ್ಯವೇ? ಅದನ್ನು ಅಭಿವೃದ್ಧಿ ಎಂದು ಕರೆಯಲು ಸಾಧ್ಯವೇ ? ಈ ಮಾದರಿ ಅಭಿವೃದ್ಧಿಗೂ "ಭಾರತ ಪ್ರಕಾಶಿಸುತ್ತಿದೆ" ಎಂದು ಬಿಜೆಪಿಗಳು ಮತ್ತು ಕಾಂಗ್ರೆಸ್ಸಿಗರು ಹೇಳುವ ಅಭಿವೃದ್ಧಿ ಮಾದರಿಗೂ ಏನು ವ್ಯತ್ಯಾಸ? ಆರ್ಥಿಕ ವಲಯಗಳು ಸೃಷ್ಟಿಸಲಿರುವುದು ದೊಡ್ಡ ದೊಡ್ಡ ಶಾಪಿಂಗ್ ಮಾಲ್‌ಗಳನ್ನು, ಎಕ್ಸ್‌ಪ್ರೆಸ್ ಹೈವೇಗಳನ್ನು, ಕುಬೇರರ ಟೌನ್‌ಶಿಪ್‌ಗಳನ್ನು. ಇದು ಅಭಿವೃದ್ಧಿಯೆನ್ನುವುದಾದರೆ ಕಾಂಗ್ರೆಸ್ ಅಥವಾ ಬಿಜೆಪಿಯನ್ನೇ ಅಧಿಕಾರದಲ್ಲಿರಲು ಬಿಟ್ಟರೆ ಸಾಕು, ಭಾರತ ಪ್ರಕಾಶಿಸುತ್ತದೆ! ಈ ಅಭಿವೃದ್ಧಿ ಮಾದರಿಯಿಂದ ಪಶ್ಚಿಮ ಬಂಗಾಳದ ಮೇಲ್‌ಮಧ್ಯಮವರ್ಗದ ಕನಸು ಈಡೇರಬಹುದು. ಪಶ್ಚಿಮ ಬಂಗಾಳ ದೇಶೀ ಮತ್ತು ವಿದೇಶೀ ಬಂಡವಾಳದ ಆಕರ್ಷಣೆಯ ಕೇಂದ್ರವೂ ಆಗಬಹುದು. ಆದರೆ ಇದರಿಂದ ನಿರುದ್ಯೋಗ ನಿವಾರಣೆಯಾಗುವುದೇ ?

**ಶಿವಸುಂದರ್**



*ನನ್ನ ಕಣ್ಣ ಮುಂದೆ ಕೊಳೆಯ ರಾಶಿ ಇದೆ ಎಂದರೆ*
*ನನ್ನ ಕಣ್ಣನ್ನೇ ಕೀಳಬಯಸಿದರು...*

*– ಚೆರಬಂಡರಾಜು*

ಸಿಂಗೂರು ಮತ್ತು ನಂದಿಗ್ರಾಮಗಳು ಈಗ ಕೇವಲ ಎರಡು ಹಳ್ಳಿಗಳ ಹೆಸರಾಗಿ ಉಳಿದಿಲ್ಲ. ಈ ದೇಶದ ಜನತೆಯ ಮೇಲೆ ಜಾಗತಿಕ ಮತ್ತು ಸ್ವದೇಶಿ ಬಂಡವಾಳ ಎರಡೂ ನಡೆಸುತ್ತಿರುವ 'ಅಭಿವೃದ್ಧಿ'ಯೆಂಬ ಯುದ್ಧದಲ್ಲಿ ಪಶ್ಚಿಮ ಬಂಗಾಳದ ಸಿಂಗೂರು ಮತ್ತು ನಂದಿಗ್ರಾಮಗಳು ರಣರಂಗವಾಗುತ್ತಿವೆ. ಒಂದೆಡೆ, ಜಾಗತೀಕರಣದ ಈ ಕಾಲಘಟ್ಟದಲ್ಲಿ ಸುಂದರ ಬದುಕು ಎಂಬುದೆಲ್ಲಾ ಕಾಗದದ ಭರವಸೆಗಳೆಂದು ಅನುಭವದಿಂದ ಅರ್ಥ ಮಾಡಿಕೊಂಡು ತಮ್ಮ ಉಳಿವಿನ ಏಕೈಕ ಜೀವನಾಧಾರವಾದ ಭೂಮಿಯನ್ನಾದರೂ ಉಳಿಸಿಕೊಳ್ಳಲೇಬೇಕೆಂದು ಅನಿವಾರ್ಯ ಸಮರಕ್ಕೆ ಸಜ್ಜಾಗಿರುವ ರೈತಾಪಿ ಜನತೆ. ಮತ್ತೊಂದೆಡೆ, ಪ್ರಭುತ್ವ ಶಕ್ತಿಯ ಬೆಂಬಲದೊಂದಿಗೆ ತಮ್ಮ ಲಾಭದ ದರವನ್ನು ಅತ್ಯಧಿಕ ಮಾಡಿಕೊಳ್ಳಲು ನಮ್ಮಂಥ ದೇಶಗಳನ್ನು ಸುಲಿಗೆ ಮಾಡಲು ಈ ದೇಶದ ರೈತಾಪಿ ಜನರು ಮತ್ತು ಬಡಜನತೆಯ ಮೇಲೆ ಆಕ್ರಮಣ ಮಾಡುತ್ತಿರುವ ಸ್ವದೇಶಿ ಮತ್ತು ದೇಶಿ ಬಂಡವಾಳ ಶಕ್ತಿಗಳ ಕೂಟ. ನ್ಯಾಯ ಮತ್ತು ಅನ್ಯಾಯಗಳ ನಡುವಿನ ಈ ಯುದ್ಧ, ಸಾರಾಂಶದಲ್ಲಿ ಭಾರತದ ಪ್ರಸ್ತುತ ರಾಜಕೀಯ ಮತ್ತು ಸಾಮಾಜಿಕ ಸಂದರ್ಭದಲ್ಲಿ ಯಾವುದು ಪ್ರಗತಿ ಮತ್ತು ಯಾವುದು ವಿಗತಿ ಎಂಬುದರ ಬಗೆಗಿನ ಸೈದ್ಧಾಂತಿಕ ಸಂಘರ್ಷವೂ ಆಗಿದೆ ಎಂಬುದರಲ್ಲಿ ಎರಡು ಮಾತಿಲ್ಲ. ಪ್ರಸ್ತುತ ಜಾಗತಿಕ ಸಂದರ್ಭದಲ್ಲಿ ರಾಜಿ-ಕಬೂಲಿಗಳಿಂದ ಸಂಘರ್ಷವನ್ನು ನಿವಾರಿಸಬಲ್ಲಂಥ ವಿದುರ ನೀತಿಗಳಿಗಾಗಲೀ, ಕರ್ಣಸಂಧಾನಗಳಿಗಾಗಲೀ ಅವಕಾಶವೇ ಇಲ್ಲದಿರುವುದರಿಂದ ಸೈದ್ಧಾಂತಿಕವಾಗಿಯೂ ರಾಜಕೀಯವಾಗಿಯೂ ನ್ಯಾಯಾನ್ಯಾಯಗಳು ಕುರುಕ್ಷೇತ್ರದಲ್ಲೇ ಬಗೆಹರಿಯಬೇಕಿದೆ. ಇದು ಇಂದಿನ ಚಾರಿತ್ರಿಕ ಸಂದರ್ಭ. ಈ ಸನ್ನಿವೇಶದಲ್ಲಿ ಸಿಂಗೂರು ಮತ್ತು ನಂದಿಗ್ರಾಮ ಎತ್ತುತ್ತಿರುವ ಕೆಲವು ಸೈದ್ಧಾಂತಿಕ ಪ್ರಶ್ನೆಗಳನ್ನು ಚರ್ಚಿಸಲೇಬೇಕಾದ ಅಗತ್ಯ ಉಂಟಾಗಿದೆ.

**ಇತಿಹಾಸದ ಪುಟಗಳನ್ನು ತಿರುವಿಹಾಕಿ ನೋಡಿದಾಗ**

ಸಾಮಾನ್ಯವಾಗಿ, ಆಳುವ ವರ್ಗಗಳು ತಾವು ಉತ್ತರಿಸಲಾಗದ ಅಥವಾ ತಮ್ಮನ್ನು ಬಯಲುಮಾಡುವ ಪ್ರಶ್ನೆಗಳನ್ನು ಎಂದಿಗೂ ಸಹಿಸಿಲ್ಲ ಎಂಬುದು ತಿಳಿದುಬರುತ್ತದೆ. ಹಾಗೆ ಪ್ರಶ್ನಿಸುವ ಅಂಥ ಚಾರ್ವಾಕರನ್ನು, ಲೋಕಾಯತರನ್ನು ಅಥವಾ ನಚಿಕೇತರನ್ನು ನಮ್ಮ ಪುರಾಣಗಳು ದುಷ್ಟಬುದ್ಧಿಯ ರಾಕ್ಷಸರೆಂದೋ ಅಥವಾ ತಂಟೆಕೋರರೆಂದೋ ಚಿತ್ರಿಸಿವೆ. ಪ್ರಸ್ತುತ ಸಂದರ್ಭದಲ್ಲಿ ಈ ವ್ಯವಸ್ಥೆ ಸಹಿಸದ ಪ್ರಶ್ನೆಗಳನ್ನು ಕೇಳುವವರಿಗೆ ಉಗ್ರಗಾಮಿಗಳೆಂದೋ, ನಕ್ಸಲೈಟರೆಂದೋ ಹಣೆಪಟ್ಟಿ ಕಟ್ಟಿ ಪ್ರಶ್ನೆಯ ಜೊತೆಗೆ ಪ್ರಶ್ನೆ ಕೇಳಿದವರನ್ನೂ ಇಲ್ಲವಾಗಿಸುವ ಪ್ರವೃತ್ತಿಯೇ ಪ್ರಭುತ್ವದ ಸಂಸ್ಕೃತಿಯಾಗಿದೆ. ಅದಕ್ಕೆಂದೇ ಆಂಧ್ರದ ಕ್ರಾಂತಿಕಾರಿ ಕವಿ ಚೆರಬಂಡರಾಜು "ನಮ್ಮ ಪ್ರಶ್ನೆಗಳಿಗೆ ಅವರ ಬಳಿ ಉತ್ತರವಿಲ್ಲದಿದ್ದಾಗ, ಅರ್ಧ ರಾತ್ರಿಯಲ್ಲಿ ಬಂದು ನಮ್ಮ ಮನೆಯ ಕದ ತಟ್ಟುತ್ತಾರೆ, ನಾನು ಮುತ್ತಿಟ್ಟ ಹಸುಕಂದನ ಕೆನ್ನೆಯನ್ನು ಕತ್ತಿಯಿಂದ ಕತ್ತರಿಸಿ ನಾನು ಹುದುಗಿಟ್ಟ ರಹಸ್ಯಕ್ಕಾಗಿ ಹುಡುಕುತ್ತಾರೆ" ಎಂದು ಆಳುವ ವರ್ಗದ ಸಂಸ್ಕೃತಿಯನ್ನು ಬಯಲುಗೊಳಿಸುತ್ತಾರೆ. ಆದರೆ ಸಿಂಗೂರಿನ ಪ್ರಕರಣದಲ್ಲಿ ಸಮಾಜದ ಬದಲಾವಣೆಗೆಂದೇ ಅಧಿಕಾರ ಗ್ರಹಣ ಮಾಡಿದವರು ಇರುವುದರಿಂದ ಪ್ರಶ್ನೆಗಳು ಕೇವಲ ಪ್ರಶ್ನೆಗಳಾಗಿ ಚರ್ಚಿಸಲ್ಪಡುತ್ತವೆ ಎಂಬ ನಿರೀಕ್ಷೆ ಹುಸಿಯಾಗಬಾರದು.

ಏಕೆಂದರೆ, ಸಿಂಗೂರಿನ ಪ್ರಶ್ನೆ ಕೇವಲ ಸೂಕ್ತ ಪರಿಹಾರ ಕುರಿತದ್ದಲ್ಲ ಅಥವಾ ಧನದ್ದಲ್ಲ, ಬದಲಿ ಉದ್ಯೋಗದ್ದಲ್ಲ ಅವೆಲ್ಲ

ಪ್ರಶ್ನೆಗಳೂ ಇದರಲ್ಲಿವೆ. ಅದನ್ನು ದಾಟಿ, ಪ್ರಶ್ನೆ ಅಭಿವೃದ್ಧಿ ಮಾದರಿಯದ್ದು ಮತ್ತು ಭವಿಷ್ಯದ ಭಾರತದ್ದು, ಭಾರತದ ನಿಜವಾದ ಜನತೆಯ ಸಾರ್ವಭೌಮತ್ವ ಮತ್ತು ಸ್ವಾತಂತ್ರ್ಯಕ್ಕೆ ಸಂಬಂಧಪಟ್ಟದ್ದು.

ಪಶ್ಚಿಮ ಬಂಗಾಳದ ಸಿಂಗೂರಿನಲ್ಲಿ ಟಾಟಾದವರು ಉತ್ಪಾದನೆ ಮಾಡಲಿರುವ ಒಂದು ಲಕ್ಷಕ್ಕೆ ದಕ್ಕಲಿರುವ ಪೀಪಲ್ಸ್ ಕಾರ್ ಯೋಜನೆಗೆ ಅಲ್ಲಿನ ೧೦೦೦ ಎಕರೆ ಜಮೀನನ್ನು ಸರ್ಕಾರ ವಶಪಡಿಸಿಕೊಂಡು ಟಾಟಾದವರಿಗೆ ನೀಡಬೇಕಾಗಿದೆ. ಅದನ್ನು ರೈತರು ವಿರೋಧಿಸುತ್ತಿದ್ದಾರೆ ಮತ್ತು ಪಶ್ಚಿಮ ಬಂಗಾಳದಲ್ಲಿ ಆಳ್ವಿಕೆಯಲ್ಲಿರುವುದು ಎಡರಂಗ ಸರ್ಕಾರವಾದ್ದರಿಂದ ಎಡಪಕ್ಷಗಳು ಸಹಾ ಬೂರ್ಜ್ವಾ ಪಕ್ಷಗಳಂತೆ ರೈತರನ್ನು ಬೀದಿಪಾಲು ಮಾಡಿದರೆ ಹೇಗೆ ಎಂಬ ಆತಂಕ ಎಲ್ಲಾ ಪ್ರಗತಿಪರರನ್ನು ಕಾಡುತ್ತಿದೆ. ಅದಕ್ಕೆ ಬದಲಾಗಿ ಎಡರಂಗ ಸರ್ಕಾರ, ಅದರಲ್ಲೂ ಅದರ ನೇತೃತ್ವ ವಹಿಸಿರುವ ಸಿಪಿಎಂ ಪಕ್ಷದ ವಕ್ತಾರರು ಸಿಂಗೂರಿನಲ್ಲಿ ಬರುತ್ತಿರುವುದು ವಿಶೇಷ ಆರ್ಥಿಕ ವಲಯ (SEZ)ವಲ್ಲ; ಸಿಂಗೂರಿನಲ್ಲಿ ರೈತರು ಸ್ವಇಚ್ಛೆಯಿಂದಲೇ ಭೂಮಿಯನ್ನು ಕೊಟ್ಟಿದ್ದಾರೆ; ಬಹಳಷ್ಟು ಜನರು ಆಗಲೇ ಒಪ್ಪಿಗೆ ಕೊಟ್ಟು ಪರಿಹಾರವನ್ನೂ ಪಡೆದುಕೊಂಡಿದ್ದಾರೆ; ಅಲ್ಲಿ ನೀಡುತ್ತಿರುವ ಪರಿಹಾರ ಅತ್ಯಂತ ಜನಸ್ನೇಹಿಯಾದದ್ದು; ಮತ್ತು ಅದರಿಂದ ಜನ ಸಂತುಷ್ಟರಾಗಿದ್ದಾರೆ; ಅಲ್ಲಿ ಗಲಭೆ ಮಾಡುತ್ತಿರುವವರು ಎಲ್ಲಾ ಹೊರಗಿನಿಂದ ಬಂದವರು ಎಂಬ ವಾದವನ್ನು ಮುಂದಿಡುತ್ತಿದ್ದಾರೆ. ಇದಲ್ಲದೆ, ಸಿಂಗೂರಿನಲ್ಲಿ ಮಾತ್ರವಲ್ಲದೆ ಇಡೀ ಪಶ್ಚಿಮ ಬಂಗಾಳದ ಬಗ್ಗೆ ಅಲ್ಲಿನ ಎಡರಂಗವು, ಎಡರಂಗದ ಭೂಸುಧಾರಣೆ ಯೋಜನೆಯಿಂದ ಅಲ್ಲಿ ಕೃಷಿ ಸಾಕಷ್ಟು ಪ್ರಗತಿ ಕಂಡಿದೆ; ಇನ್ನು ಅಲ್ಲಿ ಹೆಚ್ಚಿನ ಕೃಷಿ ಅಭಿವೃದ್ಧಿ ಸಾಧ್ಯವಿಲ್ಲ; ನಿರುದ್ಯೋಗವೂ ಹೆಚ್ಚುತ್ತಿದೆ; ಕೈಗಾರಿಕೆಯಲ್ಲಿ ಅಭಿವೃದ್ಧಿಯಾಗದೆ ಪ್ರಗತಿಯೂ ಆಗುವುದಿಲ್ಲ ಮತ್ತು ನಿರುದ್ಯೋಗವೂ ತೀರುವುದಿಲ್ಲ; ಮೇಲಾಗಿ ಕಮ್ಯುನಿಸ್ಟ್ ಸರ್ಕಾರವಿದ್ದರೂ ಪಶ್ಚಿಮ ಬಂಗಾಳ ಒಂದು ಭೂಮಾಲಿಕ ಮತ್ತು ಗುತ್ತೇದಾರಿ ಬಂಡವಾಳಶಾಹಿ ಭಾರತದ ಭಾಗವಾಗಿರುವುದರಿಂದ ಅಲ್ಲಿ ಕಮ್ಯುನಿಸ್ಟ್ ಸರ್ಕಾರವಿದ್ದರೂ ಕಟ್ಟುತ್ತಿರುವುದು ಬಂಡವಾಳಶಾಹಿಯನ್ನೇ; ಅದು ಈ ಕಾಲಘಟ್ಟದಲ್ಲಿ ಕಾರ್ಮಿಕ ವರ್ಗಕ್ಕೆ ಅನುಕೂಲಕಾರಿಯಾದದ್ದೇ; ಲೆನಿನ್ ಸಹ ಕ್ರಾಂತಿಯ ಪೂರ್ವದಲ್ಲಿ ಮತ್ತು ನಂತರದಲ್ಲಿ ಬಂಡವಾಳಶಾಹಿಯೊಂದಿಗೆ ರಾಜಿ ಮಾಡಿಕೊಂಡಿದ್ದರು; ಕಾರ್ಮಿಕವರ್ಗ ದುರ್ಬಲವಾಗಿದ್ದಾಗ ಇದು ಅನಿವಾರ್ಯ, ಇತ್ಯಾದಿಯಾಗಿ ಹೇಳಿದ್ದಾರೆ. ಇಷ್ಟು ಸಿಂಗೂರಿಗೆ ನೀಡಲಾಗುತ್ತಿರುವ ಸೈದ್ಧಾಂತಿಕ ಸಮರ್ಥನೆಗಳು.

ಒಂದು ರೀತಿಯಲ್ಲಿ ವಿಶ್ವದಾದ್ಯಂತ ಆವರಿಸಿರುವ ಮತ್ತು ಸಾಮ್ರಾಜ್ಯಶಾಹಿಗಳೇ ಹರಿಬಿಟ್ಟಿರುವ – "ಬೇರೆ ಪರ್ಯಾಯವಿಲ್ಲ" [There is no alternative TINA] ಎಂಬ ಹತಾಶ ವಾದದ ಮುಂದುವರಿಕೆಯಂತಿರುವ ಈ ವಾದಗಳನ್ನು ಪ್ರಜ್ಞಾವಂತ ವಲಯ ಗಂಭೀರವಾಗಿ ಸಿಂಗೂರಿನ ಸಂದರ್ಭದಲ್ಲಿಟ್ಟೇ ವಿಶ್ಲೇಷಿಸುವ ಅಗತ್ಯವಿದೆ.

**ಸಿಂಗೂರು : ಮೂಗಿನ ನೇರಕ್ಕಿಲ್ಲದ ಕೆಲವು ಸತ್ಯಗಳು**

ಸಿಂಗೂರಿನ ಬಗ್ಗೆ ನಡೆಯುತ್ತಿರುವ ವಾದ ಪ್ರತಿವಾದಗಳಲ್ಲಿ ಸತ್ಯವೆಷ್ಟು? ಮಿಥ್ಯವೆಷ್ಟು? ವಾಸ್ತವವಾಗಿ ಪಶ್ಚಿಮ ಬಂಗಾಳದ ಎಡರಂಗದ ಸತ್ವಪರೀಕ್ಷೆ ಇಲ್ಲಿಂದಲೇ ಆರಂಭವಾಗುತ್ತದೆ. ಸಾಮಾನ್ಯವಾಗಿ ಇಂಥ ವಾದಗಳಲ್ಲಿ ಮೊದಲು ಸಾಯುವುದು ಸತ್ಯವೇ. ಏಕೆಂದರೆ, ಶೋಷಕವರ್ಗದ ಧೋರಣೆಯುಳ್ಳ ಆಳುವ ಪಕ್ಷಗಳಿಗೆ ಸತ್ಯವನ್ನು ಮುಚ್ಚಿಡದೆ ಗತ್ಯಂತರವಿರುವುದಿಲ್ಲ. ಏಕೆಂದರೆ ಒಂದು ಬೂರ್ಜ್ವಾ ಪ್ರಜಾಪ್ರಭುತ್ವದಲ್ಲಿ ಅವರು ಜನರ ಹೆಸರಲ್ಲೇ ಎಲ್ಲಾ ಶೋಷಣೆಯನ್ನು ಮಾಡಬೇಕಿರುವುದರಿಂದ ಸತ್ಯವನ್ನು ಮುಚ್ಚಿಡಲೇಬೇಕಾಗುತ್ತದೆ. ಆದರೆ ಜನರ ಹಿತಾಸಕ್ತಿಗಾಗಿ ಎಂದೇ ಅಧಿಕಾರ ಗ್ರಹಣ ಮಾಡಿದವರಿಗೆ ಸತ್ಯವನ್ನು ಮುಚ್ಚಿಡುವ ಯಾವ ದರ್ದೂ ಇರುವುದಿಲ್ಲ. ಆದರೆ ಈವರೆಗೆ ಸರ್ಕಾರ ಹಾಗೆ ನಡೆದುಕೊಂಡಿಲ್ಲ. ಸರ್ಕಾರವೂ ಮತ್ತು ಸಮಾಜವೂ ಒಪ್ಪಿಕೊಳ್ಳುವ ಒಂದು ಸಮಾಜದ ಗಣ್ಯರನ್ನೊಳಗೊಂಡ ಸಮಿತಿಯಿಂದ ಒಂದು ನಿಷ್ಪಕ್ಷಪಾತ ತನಿಖೆ ಮಾಡಿಸಲು ಸರ್ಕಾರ ಈವರೆಗೆ ಒಪ್ಪಿಕೊಂಡಿಲ್ಲ. ಬದಲಿಗೆ ಮಹಾಶ್ವೇತಾದೇವಿ, ಮೇಧಾ ಪಾಟ್ಕರ್ ರಂಥವರನ್ನು ಹೊರಗಿನವರೆಂದೂ, ತಪ್ಪು ದಾರಿಗೆಳೆಯಲ್ಪಟ್ಟವರೆಂದೂ ಆರೋಪಿಸಿ ಪದೇ ಪದೇ ಬಂಧಿಸಿದ್ದಾರೆ. ಅದೇ ರೀತಿ ಜನರೆಲ್ಲಾ ಭೂಮಿಯನ್ನು ಕೊಡಲು ಸ್ವಇಚ್ಛೆಯಿಂದ ಒಪ್ಪಿಕೊಂಡಿದ್ದಾರೆ ಹಾಗೂ ಈಗಾಗಲೇ ಶೇ.೯೦ರಷ್ಟು ಜನ ಪರಿಹಾರ ಪಡೆದಿದ್ದಾರೆ ಎಂಬ ವಾದ. ಬೃಂದಾ ಕಾರಟ್‌ರನ್ನೂ ಒಳಗೊಂಡಂತೆ ಈ ಬಗ್ಗೆ ಸರಿಯಾದ ಮಾಹಿತಿಯನ್ನು ಯಾರೂ ನೀಡಿದಂತೆ ತೋರುತ್ತಿಲ್ಲ. ಕೊನೆಗೆ ಡಿಸೆಂಬರ್ ೩೧ರಂದು ಸಿಂಗೂರ್ ಬಗ್ಗೆ ಸರ್ಕಾರ ಅನಿವಾರ್ಯವಾಗಿ ನೀಡಲೇಬೇಕಾಗಿಬಂದ ವರದಿಯಲ್ಲಿ ಇನ್ನೂ ಶೇ. ೪೦ರಷ್ಟು ಜನ ಪರಿಹಾರ ಪಡೆದುಕೊಂಡಿಲ್ಲವೆಂಬುದೂ ಮತ್ತು ಶೇ. ೪೦ರಷ್ಟು ರೈತರು ಒಪ್ಪಿಗೆ ಕೊಟ್ಟಿಲ್ಲವೆಂಬುದೂ ಬಯಲಾಗಿದೆ. ಅದೇ ರೀತಿ ಪ್ರಾರಂಭದಲ್ಲಿ ಸಿಂಗೂರಿನಲ್ಲಿ



ವಶಪಡಿಸಿಕೊಳ್ಳುತ್ತಿರುವುದು ಬೀಳು ಭೂಮಿಯನ್ನು ಮಾತ್ರ ಮತ್ತು ಅದು ಒಂದು ಫಸಲನ್ನು ಕೂಡ ಕೊಡದ ಭೂಮಿಯೆಂದು ಸರ್ಕಾರ ಪ್ರಚಾರ ಮಾಡಿತ್ತು. ನಂತರ ಹೋರಾಟ ತೀವ್ರವಾದಂತೆ ಮತ್ತು ಸ್ವತಂತ್ರ ಸತ್ಯಶೋಧನೆಗಳು ನಡೆಯುತ್ತಿದ್ದಂತೆ ವಶಪಡಿಸಿ ಕೊಳ್ಳುತ್ತಿರುವ ಭೂಮಿಯೆಲ್ಲಾ ಕನಿಷ್ಠ ವರ್ಷಕ್ಕೆ ಎರಡು ಫಸಲು ಬೆಳೆಯುವಂಥ ಭೂಮಿಯೆಂಬುದು ಬಯಲಿಗೆ ಬಂತು. ಈಗ ಸರ್ಕಾರವೂ ಅದನ್ನೇನೂ ನಿರಾಕರಿಸುತ್ತಿಲ್ಲ. ಅದೇ ರೀತಿ ಸಿಂಗೂರ್ ಒಂದು ವಿಶೇಷ ಆರ್ಥಿಕ ವಲಯವಲ್ಲ ಎಂಬ ವಾದ. ಇದು ಕೇವಲ ಪದವ್ಯಾಖ್ಯಾನಗಳ ಮೇಲಾಟವೇ ಹೊರತು ಈ ವಾದದಲ್ಲಿ ಜನತೆಯನ್ನು ಕಾಯುವ ರಾಜಕೀಯವೇನೂ ಇರಲಿಲ್ಲ. ಏಕೆಂದರೆ, ಬಂಡವಾಳವನ್ನು ಪಶ್ಚಿಮ ಬಂಗಾಳ ಸರ್ಕಾರ ತನ್ನ ಶರತ್ತಿನ ಮೇಲೆ ಆಹ್ವಾನಿಸುತ್ತಿದೆಯೇ ವಿನಾ ದೇಶೀ ಆಗಲೀ ವಿದೇಶಿ ಬಂಡವಾಳದ ಶರತ್ತಿಗೆ ಮಣಿಯುತ್ತಿಲ್ಲ ಎಂಬ ವಾದ ಕರ್ನಾಟಕದಲ್ಲಂತೂ ಮಾಡಲಾಗುತ್ತಿದೆ. ತಮಗೂ ಇತರ ಸರ್ಕಾರಗಳಿಗೂ ಇರುವ ವ್ಯತ್ಯಾಸ ಅದೇ ಎಂದು ವಾದಿಸಲಾಗುತ್ತಿದೆ. ಹೀಗಾಗಿಯೇ ತಮ್ಮ ಸರ್ಕಾರ ವಿಶೇಷ ಆರ್ಥಿಕ ವಲಯವನ್ನು ವಿರೋಧಿಸುತ್ತದೆ; ಆದರೆ ಸಿಂಗೂರ್ ವಿಷಯ ಅದಲ್ಲ ಎನುತ್ತಾರೆ. ಆದರೆ ವಾಸ್ತವವೆಂದರೆ ಒಂದು ವಿಶೇಷ ಆರ್ಥಿಕ ವಲಯದಲ್ಲಿ ಯಾವ್ಯಾವ ರಿಯಾಯಿತಿಗಳನ್ನು ಒಂದು ಕಂಪನಿಗೆ ನೀಡಲಾಗುವುದೋ, ಯಾವ ಯಾವ ಕಾನೂನು ಗಳಿಂದ ವಿನಾಯತಿ ನೀಡಲಾಗುವುದೋ ಅವೆಲ್ಲವನ್ನೂ ಸಿಂಗೂರಿನಲ್ಲಿ ಟಾಟಾದವರಿಗೂ ನೀಡಲಾಗಿದೆ. ಉದಾಹರಣೆಗೆ, ಸಿಂಗೂರಿನ ಸ್ಥಳ ಆಯ್ಕೆ ಆಗಿದ್ದೇ ಅವರು ಕೇಳಿದ ಕಡೆ ಕೇಳಿದಷ್ಟು ಜಮೀನನ್ನು ಕೊಡುತ್ತೇವೆ ಎಂಬ ಶರತ್ತಿನ ಮೇಲೆ. ಅದೇ ರೀತಿ ಭೂಮಿ ವಶ ಪಡಿಸಿಕೊಳ್ಳುವ ಜವಾಬ್ದಾರಿ ಸರ್ಕಾರದ್ದೇ ಆಗಿದ್ದು, ಅದಕ್ಕೆ ಸರ್ಕಾರವೇ ಹೇಳುತ್ತಿರುವಂತೆ ೧೪೦ ಕೋಟಿ ರೂಪಾಯಿ ಖರ್ಚಾಗಲಿದೆ. ಆದರೆ ಅದಕ್ಕೆ ಟಾಟಾ ಕೊಡುತ್ತಿರುವುದು ಕೇವಲ ೨೦ ಕೋಟಿ ರೂಪಾಯಿ.ಅದೂ ಐದು ವರ್ಷಗಳಲ್ಲಿ. ಇದು ನಿಜವಲ್ಲವೇ ?

ಅದೇ ರೀತಿ ಸಿಂಗೂರ್ ಕಾರು ಕಾರ್ಖಾನೆ ಅಲ್ಲಿ ಕನಿಷ್ಠ ೧೦೦೦೦ ಹೊಸ ಉದ್ಯೋಗ ಗಳನ್ನು ಸೃಷ್ಟಿ ಮಾಡುತ್ತದೆ; ಕೃಷಿಯಲ್ಲಿ ಇನ್ನೂ ಅಂಥ ಉದ್ಯೋಗ ಸೃಷ್ಟಿಸುವ ಸಾಮರ್ಥ್ಯ ಇಲ್ಲ ಎಂಬ ಎನ್ನುವ ವಾದ. ಸರ್ಕಾರದ ಪ್ರಕಾರವೇ ಈಗ ಆ ೧೦೦೦ ಎಕರೆ ಭೂಮಿಯ ಮೇಲೆ ಆಧಾರಪಟ್ಟಿರುವವರು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಕನಿಷ್ಠ ೧೨೦೦೦ ಜನ. ಅವರಿಗೆಲ್ಲಾ ಇಲ್ಲಿ ಉದ್ಯೋಗ ಸಿಗುವುದೇ ? ಇನ್ನಿದುವರೆಗೂ ಟಾಟಾದವರು ಇಲ್ಲಿ ಎಷ್ಟು ಉದ್ಯೋಗ ಸೃಷ್ಟಿಯಾಗಬಹುದೆಂಬುದರ ಬಗ್ಗೆ ಸ್ಪಷ್ಟ ಮಾಹಿತಿ ನೀಡಿಲ್ಲ. ಅದರಲ್ಲಿ ಕೃಷಿಯನ್ನು ಬಿಟ್ಟರೆ ಬೇರೆ ಯಾವ ಕೌಶಲ್ಯವಿರದ ರೈತರ ಮಕ್ಕಳಿಗೆ ಎಂತಹ ಕೆಲಸ ಸಿಗುತ್ತದೆ ಎಂಬುದು ಸ್ಪಷ್ಟವಾಗಿಲ್ಲ. ಸರ್ಕಾರ ನೋಂದಾಯಿತ ನಿರ್ವಸಿತರಿಗೆ ಕೊಡುತ್ತಿರುವ ತರಬೇತಿಗೂ ಕಾರ್ ಉತ್ಪಾದನೆಗೂ ಯಾವ ಸಂಬಂಧವೂ ಇಲ್ಲ. ಮೇಲಾಗಿ ಒಂದು ಲಕ್ಷ ರೂಪಾಯಿಗೆ ಒಂದು ಕಾರು ಉತ್ಪಾದಿಸುವ ಕಾರ್ಖಾನೆ ಮೂಲಭೂತವಾಗಿ ಉತ್ಪಾದನಾ ವೆಚ್ಚವನ್ನು ನಿಗ್ರಹಿಸಲೇಬೇಕಾಗಿರುತ್ತದೆ ಮತ್ತು ಅಂಥ ಕಾರ್ಖಾನೆ ಕಾರ್ಮಿಕ ಕೇಂದ್ರಿತ ವಾಗಿರದೆ ಹೆಚ್ಚಾಗಿ ಬಂಡವಾಳ ಮತ್ತು ತಂತ್ರಜ್ಞಾನ ಕೇಂದ್ರಿತವೇ ಆಗಿರುತ್ತದೆ ಎಂಬುದರಲ್ಲಿ ಆಶ್ಚರ್ಯವೇನೂ ಇಲ್ಲ. ಆಶ್ಚರ್ಯವಾಗುವುದು ಪಶ್ಚಿಮ ಬಂಗಾಳ ಅಂಥ ವಾದವನ್ನು ಮುಂದಿಟ್ಟಾಗ !

**ಎಡರಂಗದ ಸಮ್ಮತಿಯೊಂದಿಗೆ ಪಶ್ಚಿಮ ಬಂಗಾಳಕ್ಕೆ ಬರುತ್ತಿರುವ ವಿಶೇಷ ಆರ್ಥಿಕ ವಲಯಗಳು**

ಎಲ್ಲಕ್ಕಿಂತ ಹೆಚ್ಚಾಗಿ ಸರ್ಕಾರ ಹೇಳುತ್ತಿರುವ ಮತ್ತೊಂದು ಹಸಿ ಸುಳ್ಳೆಂದರೆ, ತಮ್ಮ ಸರ್ಕಾರ ವಿಶೇಷ ಆರ್ಥಿಕ ವಲಯವನ್ನು ವಿರೋಧಿಸುತ್ತದೆ ಎಂಬುದು. ಸಿಂಗೂರು

ಶೀರ್ಷಿಕೆಯಿಲ್ಲದ ವಿಶೇಷ ಆರ್ಥಿಕ ವಲಯಗಳ ಭಾಗ ಆಗಿರಬಹುದು. ಆದರೆ ನಂದಿಗ್ರಾಮವೇನು ? ಅಲ್ಲಿ ಇಂಡೋನೇಷಿಯಾದ ಸಲೀಂ ಗ್ರೂಪ್ ಆಫ್ ಕಂಪನಿಗೆ ನ್ಯೂ ಕೊಲ್ಕತ್ತಾ ಇಂಟರ್‌ನ್ಯಾಷನಲ್ ಡೆವಲಪ್‌ಮೆಂಟ್ ಪ್ರೈವೇಟ್ ಲಿಮಿಟೆಡ್ ಎಂಬ ಹೆಸರಲ್ಲಿ ರಾಸಾಯನಿಕ ಕಾರ್ಖಾನೆಗೆಂದು ೪೦೦೦ ಎಕರೆ ಜಮೀನು ನೀಡಲಿರುವುದು ವಿಶೇಷ ಆರ್ಥಿಕ ವಲಯಕ್ಕಾಗಿಯೇ ಅಲ್ಲವೇ ? ಅದೇ ರೀತಿ ಇದೇ ಕಂಪನಿಗೆ ಹಾಲ್ದಿಯಾ ಬಳಿ ಮತ್ತೆ ೫೦೦೦ ಎಕರೆಗಳನ್ನು ವಿಶೇಷ ಆರ್ಥಿಕ ವಲಯಗಳೆಂದೇ ನೀಡಲಾಗುತ್ತದೆ. ಅದೇ ರೀತಿ ವಿಡಿಯೋಕಾನ್ ರಿಯಾಲ್ಟೀಸ್ ಆ್ಯಂಡ್ ಇನ್‌ಫ್ರಾಸ್ಟ್ರಕ್ಚರ್ಸ್ ಲಿಮಿಟೆಡ್ ಎಂಬ ಕಂಪನಿಗೆ ಉತ್ತರ ೨೪ ಪರಗಣ ಜಿಲ್ಲೆಯಲ್ಲಿ ೧೦೮೦ ಎಕರೆಯನ್ನೂ, ಖರಗ್‌ಪುರ್‌ದಲ್ಲಿ ೧೦೦೦೦ ಎಕರೆಯನ್ನೂ ನೀಡಲಾಗುತ್ತದೆ. ರ‍್ಯಾಮ್ಕಿ ಇನ್‌ಫ್ರಾಸ್ಟ್ರಕ್ಚರ್ಸ್ ಲಿಮಿಟೆಡ್‌ಗೆ ಹಾಲ್ದಿಯಾ ಬಳಿ ೧೦೧೨ ಎಕರೆ ಜಮೀನನ್ನೂ ಗ್ರಿಮಿಕ್ ಇನ್‌ಫ್ರಾಸ್ಟ್ರಕ್ಚರ್ಸ್ ಲಿಮಿಟೆಡ್ ಎಂಬ ಕಂಪನಿಗೆ ಧೀಘಾ ಪೋರ್ಟ್ ಬಳಿ ೧೦೧೨ ಎಕರೆಯನ್ನೂ ನೀಡಲಾಗುತ್ತದೆ. ಇವೆಲ್ಲವೂ ವಿಶೇಷ ಆರ್ಥಿಕ ವಲಯಗಳೇ ಆಗಿದ್ದು, ಇವೆಲ್ಲಕ್ಕೂ ರಾಜ್ಯ ಸರ್ಕಾರದ ಸಮ್ಮತಿಯ ಮೇರೆಗೆ ಕೇಂದ್ರ ಸರ್ಕಾರ ವಿಶೇಷ ಆರ್ಥಿಕ ವಲಯದ ಎಲ್ಲಾ ರಿಯಾಯಿತಿಗಳನ್ನೂ ಘೋಷಿಸಿದೆ. ಹೀಗಾಗಿ ಸಿಂಗೂರ್ ವಿಶೇಷ ಆರ್ಥಿಕ ವಲಯವಾಗಿದ್ದರೆ ನಾವು ವಿರೋಧಿಸುತ್ತಿದ್ದೆವು ಎಂಬ ವಾದದಲ್ಲಿ ಏನೂ ಹುರುಳಿಲ್ಲ. ಆದರೆ ಉಳಿಯುವ ಪ್ರಶ್ನೆ ಒಂದೇ : ಶೋಷಕವರ್ಗದ ಪಕ್ಷಗಳಂತೆ ಸುಳ್ಳುಗಳನ್ನೇಕೆ ಹೇಳಬೇಕು ? ಮತ್ತು ಉಳಿದ ಕಡೆ ಮಾಡುವ ತರ್ಕಗಳನ್ನು ಪಶ್ಚಿಮ ಬಂಗಾಳದ ಗಡಿಯೊಳಗೆ ಬಂದ ತಕ್ಷಣ ಏಕೆ ನಿಲ್ಲಿಸಬೇಕು?

**ಪಶ್ಚಿಮ ಬಂಗಾಳದ ಅಭಿವೃದ್ಧಿ ಈ ಬಗೆಯ ಕೈಗಾರಿಕೀಕರಣದಿಂದ ಸಾಧ್ಯವೇ?**

ಈಗ ಉಳಿಯುವ ಶೇಷಪ್ರಶ್ನೆ ಇಷ್ಟೆ: ಎಡರಂಗ ಸರ್ಕಾರದ ಪ್ರಕಾರ ಕೃಷಿಯಿಂದ ಇನ್ನು ಪಶ್ಚಿಮ ಬಂಗಾಳದ ಅಭಿವೃದ್ಧಿ ಸಾಧ್ಯವಿಲ್ಲ. ಆದ್ದರಿಂದ ಕೈಗಾರಿಕೀಕರಣದಿಂದ ಮಾತ್ರ ಪಶ್ಚಿಮ ಬಂಗಾಳ ಇತರ ರಾಜ್ಯಗಳಂತೆ ಅಭಿವೃದ್ಧಿ ಹೊಂದಲು ಸಾಧ್ಯ. ಅದಕ್ಕೆ ಬಂಡವಾಳ ಬೇಕು. ಅದನ್ನು ಪಡೆಯಲು ಇವೆಲ್ಲಾ ಕಸರತ್ತುಗಳನ್ನು ಮಾಡಲೇಬೇಕು. ಆದರೆ ಪ್ರಶ್ನೆ, ಈ ಬಗೆಯ ಕೈಗಾರಿಕೀಕರಣದಿಂದ ಪಶ್ಚಿಮ ಬಂಗಾಳ ಅಭಿವೃದ್ಧಿ ಹೊಂದಲು ಸಾಧ್ಯವೇ ? ಅದನ್ನು ಅಭಿವೃದ್ಧಿ ಎಂದು ಕರೆಯಲು ಸಾಧ್ಯವೇ ? ಈ ಮಾದರಿ ಅಭಿವೃದ್ಧಿಗೂ ''ಭಾರತ ಪ್ರಕಾಶಿಸುತ್ತಿದೆ'' ಎಂದು ಬಿಜೆಪಿಗಳು ಮತ್ತು ಕಾಂಗ್ರೆಸ್ಸಿಗರು ಹೇಳುವ ಅಭಿವೃದ್ಧಿ ಮಾದರಿಗೂ ಏನು ವ್ಯತ್ಯಾಸ ? ಮೇಲೆ ಪಟ್ಟಿ ಮಾಡಲಾದ ಅವೆಲ್ಲಾ ಆರ್ಥಿಕ ವಲಯಗಳು ಸೃಷ್ಟಿಸಲಿರುವುದು ದೊಡ್ಡ ದೊಡ್ಡ ಶಾಪಿಂಗ್ ಮಾಲ್‌ಗಳನ್ನು, ಎಕ್ಸ್‌ಪ್ರೆಸ್ ಹೈವೇಗಳನ್ನು, ಕುಬೇರರ ಟೌನ್‌ಶಿಪ್‌ಗಳನ್ನು. ಇದು ಅಭಿವೃದ್ಧಿಯೆನ್ನುವುದಾದರೆ ಕಾಂಗ್ರೆಸ್ ಅಥವಾ ಬಿಜೆಪಿಯನ್ನೇ ಅಧಿಕಾರದಲ್ಲಿರಲು ಬಿಟ್ಟರೆ ಸಾಕು, ಭಾರತ ಪ್ರಕಾಶಿಸುತ್ತದೆ! ಈ ಅಭಿವೃದ್ಧಿ ಮಾದರಿಯಿಂದ ಪಶ್ಚಿಮ ಬಂಗಾಳದ ಮೇಲ್ ಮಧ್ಯಮ ವರ್ಗದ ಕನಸು ಈಡೇರಬಹುದು. ಪಶ್ಚಿಮ ಬಂಗಾಳ ದೇಶೀ ಮತ್ತು ವಿದೇಶೀ ಬಂಡವಾಳದ ಆಕರ್ಷಣೆಯ ಕೇಂದ್ರವೂ ಆಗಬಹುದು. ಆದರೆ ಇದರಿಂದ ನಿರುದ್ಯೋಗ ನಿವಾರಣೆಯಾಗುವುದೇ ? ಇತ್ತೀಚಿನ ಚುನಾವಣೆಯಲ್ಲಿ ಎಡರಂಗ ಭರ್ಜರಿ ಜಯ ಸಾಧಿಸಿದ ಮೇಲೆ ಎಡರಂಗದ ಪ್ರಮುಖ ಚಿಂತಕ ಪ್ರಭಾತ್ ಪಟ್ನಾಯಕ್ ಇದೇ ಎಚ್ಚರಿಕೆ ನೀಡುತ್ತಾ ಹೀಗೆ ಬರೆದಿದ್ದರು : ''ಈ ನವ ಉದಾರವಾದಿ ಯುಗದಲ್ಲಿ ಅತ್ಯಂತ ಲಾಭ ಪಡೆದವರು ಮೇಲ್ ಮಧ್ಯಮವರ್ಗದವರೇ. ಅವರೂ ಎಡರಂಗ ಸರ್ಕಾರವನ್ನು ಬೆಂಬಲಿಸುತ್ತಿರುವುದನ್ನು ಈ ಚುನಾವಣೆಯ ಫಲಿತಾಂಶ ಸೂಚಿಸುತ್ತದೆ. ಅದೇ ಸಮಯದಲ್ಲಿ ಅದು ಒಂದು ವೈರುಧ್ಯವನ್ನು ಹುಟ್ಟಿಹಾಕುತ್ತದೆ. ಅವರ ಆಶಯಗಳನ್ನು ಈಡೇರಿಸುವುದರಿಂದ ಸಣ್ಣ ಪುಟ್ಟ ವ್ಯಾಪಾರಿಗಳು, ರೈತಾಪಿ ಮತ್ತು ಗ್ರಾಮೀಣ ಬಡವರ ಹಿತಾಸಕ್ತಿಗೆ ಹಾನಿಯುಂಟಾಗುತ್ತದೆ. ಶಾಪಿಂಗ್ ಮಾಲ್‌ಗಳು ಬೇಕೆಂಬ ಅವರ ಬೇಡಿಕೆ ಸಣ್ಣ ಪುಟ್ಟ ವ್ಯಾಪಾರಿಗಳನ್ನು ಹಾಳುಗೆಡುವುತ್ತದೆ. ಹೆಚ್ಚುತ್ತಿರುವ ಕಾರುಗಳು ಮತ್ತು ಇತರ ಸೌಲಭ್ಯಗಳ ದೃಷ್ಟಿಯಿಂದ ಅವರು ಕೇಳುವ ಎಕ್ಸ್‌ಪ್ರೆಸ್ ಹೈವೇಗಳು ರೈತರ ಜಮೀನನ್ನು ಹಾಳುಗೆಡವುತ್ತವೆ. ಅದೇ ರೀತಿ ಅವರು ಕೇಳುವ ಟೌನ್‌ಶಿಪ್‌ಗಳು ರೈತರನ್ನು ಒಕ್ಕಲೆಬ್ಬಿಸಬಹುದು. ಪಶ್ಚಿಮ ಬಂಗಾಳದಂತಹ ಅತಿ ಹೆಚ್ಚಿನ ಜನಸಾಂದ್ರತೆ ಹೊಂದಿದ ರಾಜ್ಯದಲ್ಲಿ ಭೂಮಿಗೆ ಬದಲಾಗಿ ಭೂಮಿಯನ್ನು ಕೊಡಲಾಗುವುದಿಲ್ಲ ಹಾಗೂ ಭೂಮಿಗೆ ಬದಲಾಗಿ ಹಣವನ್ನು ಕೊಡುವುದು ಆಹಾರ ಉತ್ಪಾದನೆ ಮತ್ತು ಉದ್ಯೋಗಗಳ ಮೇಲೆ ತೀವ್ರ ಅಹಿತಕರ ಪ್ರಭಾವವನ್ನು ಬೀರುವುದಲ್ಲದೆ ಅದು ಸೂಕ್ತ ಪರ್ಯಾಯವೂ ಆಗುವುದಿಲ್ಲ.'' ಅವರದೇ ಮತ್ತೊಂದು ಬರಹದಲ್ಲಿ ಪಟ್ನಾಯಕ್ ಅವರು ಕಾರ್ಮಿಕ ವರ್ಗದ ಸರ್ಕಾರ ಅನಿವಾರ್ಯ ಕಾರಣದಿಂದ ಬಂಡವಾಳಶಾಹಿ ಚೌಕಟ್ಟಿನೊಳಗೆ ಅಧಿಕಾರಕ್ಕೆ ಬಂದು ಬಂಡವಾಳಶಾಹಿಯನ್ನೇ ಕಟ್ಟಬೇಕಾಗಿಬಂದರೂ ಅದು ಬಂಡವಾಳಶಾಹಿ ಕಟ್ಟುವ ಬಂಡವಾಳಶಾಹಿಗಿಂತ ಭಿನ್ನವಾಗಿಲ್ಲದಿದ್ದರೆ ಪ್ರಯೋಜನವಿಲ್ಲವೆಂದು ಎಚ್ಚರಿಸಿದ್ದಾರೆ.




ದಿ:೮.೧.೨೦೦೮ರಂದು ಬೆಂಗಳೂರಿನಲ್ಲಿ ನವಕರ್ನಾಟಕದ ಆರು ಕೃತಿಗಳ ಲೋಕಾರ್ಪಣೆಯ ಕಾರ್ಯಕ್ರಮ ನಡೆಯಿತು. ಚಿತ್ರದಲ್ಲಿರುವವರು ಎಡದಿಂದ ಬಲಕ್ಕೆ : ಆರ್. ಎಸ್. ರಾಜಾರಾಮ್, ಡಾ|| ಬಿ. ಎಸ್. ಶೈಲಜಾ, ಶ್ರೀಮತಿ ವಿಜಯಾ ಶ್ರೀಧರ್, ಡಾ|| ವಸುಂಧರಾ ಭೂಪತಿ, ಡಾ|| ಆರ್. ಪೂರ್ಣಿಮಾ, ಡಾ|| ವಿಜಯಾ, ಪ್ರೊ|| ಚಂದ್ರಕಾಂತ ಪೋಕಳೆ, ಡಾ|| ಎಂ. ವಸುಂಧರ, ಡಾ|| ಗೀತಾ ಕೃಷ್ಣಮೂರ್ತಿ ಮತ್ತು ಡಾ|| ಶಾಂತಾರಾಮ ಸೋಮಯಾಜಿ.

**ನವ ಉದಾರವಾದ ಮತ್ತು ಮೂರನೇ ಜಗತ್ತಿನ ಕೈಗಾರಿಕೀಕರಣ**

ಸಿಂಗೂರಲ್ಲಾಗಲೀ, ನಂದಿಗ್ರಾಮದಲ್ಲಾಗಲೀ ಅಭಿವ್ಯಕ್ತಗೊಳ್ಳುತ್ತಿರುವುದು ಪ್ರಸುತ್ತ ಜಾಗತಿಕ ಬಂಡವಾಳದ ಅತಿ ಪ್ರತಿಗಾಮಿ ಮತ್ತು ಆಕ್ರಮಣಶೀಲ ಘಟ್ಟದ ಚಹರೆಯೇ ಆಗಿದೆ. ಈ ಚೌಕಟ್ಟಿನೊಳಗೆ ಕಟ್ಟಲ್ಪಡುವುದು ಬಂಡವಾಳಶಾಹಿಯಲ್ಲ. ಬದಲಿಗೆ ಹಣಕಾಸು ಬಂಡವಾಳದ ಅತಿ ನಗ್ನ ಮತ್ತು ದುರಾಕ್ರಮಣಕಾರಿ ಹಾಗೂ ಅತ್ಯಂತ ಪರಾವಲಂಬಿ ಮುಖವಾದ ಫ್ಯಾಸಿಸಂ ಬೆಳೆಯುತ್ತದೆ. ಆದ್ದರಿಂದ ಕಾರ್ಮಿಕವರ್ಗ ದುರ್ಬಲವಾಗಿದ್ದಾಗ ಬಂಡವಾಳದೊಂದಿಗೆ ರಾಜಿಯಾಗುವುದು ಅನಿವಾರ್ಯ ಎಂಬ ತರ್ಕ ಅನ್ವಯಿಸುವುದು ರಾಜಕೀಯವಾಗಿ ಅಸಂಬದ್ಧವಾಗುತ್ತದೆ.

ನವ ಉದಾರವಾದದ ಜಾಗತಿಕ ವ್ಯವಸ್ಥೆಯೊಳಗೆ ಭಾರತದ ಆರ್ಥಿಕತೆಯೂ ಬೆಸೆಯಲ್ಪಟ್ಟಿದೆ. ಅದೇ ವ್ಯವಸ್ಥೆಯೊಳಗೆ ಬಂಗಾಳದ ಆರ್ಥಿಕತೆಯೂ ಬೆಸೆಯಲ್ಪಡುತ್ತಿದೆ. ನವಉದಾರವಾದ ಕಾಲಘಟ್ಟವೇ ಜಾಗತಿಕ ಬಂಡವಾಳದ ಆತ್ಯಂತಿಕ ಬಿಕ್ಕಟ್ಟನ್ನು ಸೂಚಿಸುತ್ತದೆ. ಅದರಿಂದ ಹೊರಬರಲೆಂದೇ ಜಾಗತೀಕರಣ, ಖಾಸಗೀಕರಣ ಮತ್ತು ಉದಾರೀಕರಣ ನೀತಿಗಳನ್ನು ಜಾಗತಿಕ ಬಂಡವಾಳ ಭಾರತದಂಥ ಮೂರನೇ ಜಗತ್ತಿನ ಮೇಲೆ ಹರಿಬಿಟ್ಟಿದೆ. ಅತ್ಯಂತ ಲಾಭಭಕ್ಷಕ ಸ್ವರೂಪದ ಈ ಬಂಡವಾಳ ಹುಟ್ಟುಹಾಕುವ ಕೈಗಾರಿಕೀಕರಣ ಹಾಲಿ ಇರುವ ಲಕ್ಷಾಂತರ ಉದ್ಯೋಗಗಳನ್ನು ಕಿತ್ತುಕೊಂಡು ತನಗೆ ಬೇಕಾದ ಸಾವಿರ ದೀನ ಉದ್ಯೋಗಗಳನ್ನು ಸೃಷ್ಟಿಸುತ್ತದೆ. ದೇಶೀ ಸಂಪನ್ಮೂಲವನ್ನು ಆಧರಿಸಿ ಕಟ್ಟಬಹುದಾಗಿದ್ದ ದೇಶೀ ಬಂಡವಾಳವನ್ನು ನಿರ್ನಾಮ ಮಾಡಿ ಎಲ್ಲಾ ಸಂಪನ್ಮೂಲಗಳನ್ನು ತನ್ನ ಅಧೀನಕ್ಕೆ ತೆಗೆದುಕೊಳ್ಳುತ್ತದೆ.

ಒಟ್ಟಾರೆಯಾಗಿ, ಸಿಂಗೂರ್ ಮಾದರಿಯ, ನಂದಿಗ್ರಾಮ ಮಾದರಿಯ, ವಿಶೇಷ ಆರ್ಥಿಕ ವಲಯ ಮಾದರಿಯ, ಅಭಿವೃದ್ಧಿ ಮಾದರಿಯನ್ನು ಕ್ಲಾಸಿಕಲ್ ಬಗೆಯ ಒಂದು ಬಂಡವಾಳಶಾಹಿ ಅಭಿವೃದ್ಧಿ ಮಾದರಿ ಎಂದು ಪರಿಗಣಿಸುವುದೇ ತಪ್ಪು ರಾಜಕೀಯ. ಹೀಗಾಗಿ ಈ ಕಾಲಘಟ್ಟದ ಈ ನರಭಕ್ಷಕ ಸಾಮ್ರಾಜ್ಯವಾದಿ ನವ ಉದಾರವಾದದ ಕಾಲಘಟ್ಟವನ್ನು, ಸಮಾಜದ ಅಭಿವೃದ್ಧಿಗೆ



# ಸುಡುನೆರಳು

**ಈ**ಗ
ಕೆಲವರಿಗೆ ಸುಖ
ಉಳಿದವರಿಗೆ ತುಂಬಿದಾ ದುಃಖ.

ಕೈಕಟ್ಟಿ ಕುಳಿತ ಕೂಗು
ಅವಕಾಶಗಳ ಬೆನ್ನತ್ತಿ
ಅಣಕಿಸಿಕೊಂಡ ಕೊರಗು.

ಸಸಿ ನೆಟ್ಟು ಕಷ್ಟಪಟ್ಟು
ಇತರರಿಗೆ ನೆರಳು ಬಿಟ್ಟು
ಮನಸು ಸಂತೃಪ್ತಿಯ ನೋಟ.

ಕಟ್ಟಿದ್ದ ಗೂಡು
ತುಂಬಿದ್ದ ಸೊಗಡು
ಕೊಡಲಿ ಕಾವಿನ ಸುಡುಬಿಸಿಲು.

ಸ್ಥಿತ್ಯಂತರದ ಮೈಲುಗಲ್ಲುಗಳು
ದಾರಿ ಸವೆಸಿದ ನೆನಪಿಗೆ
ದಣಿವು ತುಂಬಿದ ಹೆಜ್ಜೆಗಳು.

ಕಾದ ನೆಲದ ಮಹದಾಸೆ
ಮೊದಲ ಮಳೆಯ ಹನಿಗಾಗಿ
ಬಿಚ್ಚಿದ ಚೀಲದ ಬೀಜದಾಸೆ.

**ಎಸ್. ಹನುಮೇಶ ಗುಮಗೇರಿ**
ಅಂಚೆ - ಗುಮಗೇರಾ - ೫೮೩ ೧೨೧
ಕುಷ್ಟಗಿ ತಾಲೂಕು, ಕೊಪ್ಪಳ ಜಿಲ್ಲೆ

ಪೂರಕವಾಗಿ ಉತ್ಪಾದಕ ಶಕ್ತಿಗಳನ್ನು ಬೆಳೆಸಬೇಕೆಂದು ಲೆನಿನ್ ಮತ್ತು ಮಾವೋ ಮಾಡಿಕೊಂಡ ಹೊಂದಾಣಿಕೆಯೊಂದಿಗೆ ಹೋಲಿಸುವುದು ಚರಿತ್ರೆಯ ವಿಕೃತಿ ಮಾತ್ರವಲ್ಲ, ಅದೊಂದು ವಿತಂಡವಾದ ಮತ್ತು ಮಾರ್ಕ್ಸ್‌ವಾದದ ತಿರಿಚುವಿಕೆ ಕೂಡ.

**ನವ ಸಾಮ್ರಾಜ್ಯವಾದದಡಿ ಮೂರನೇ ಜಗತ್ತಿನ ಪ್ರಭುತ್ವಕ್ಕಿರುವ ಸ್ವಾತಂತ್ರ್ಯವೆಷ್ಟು?**

ಇದು ನಮ್ಮ ಕೊನೆಯ ಪ್ರಶ್ನೆಯೆಡೆ ಕೊಂಡೊಯ್ಯುತ್ತದೆ. ಎಡರಂಗವಿರಬಹುದು, ಕಾಂಗ್ರೆಸ್, ಬಿಜೆಪಿಗಳಿರಬಹುದು - ಯಾವುದೇ ಸರ್ಕಾರವಿದ್ದರೂ ಈ ನವ ಸಾಮ್ರಾಜ್ಯಶಾಹಿ ಜಾಗತಿಕ ವ್ಯವಸ್ಥೆಯಡಿ ಎಷ್ಟು ಸ್ವಾತಂತ್ರ್ಯವನ್ನು ಪಡೆದಿವೆ ಎಂಬುದು. ಹಾಗಿದ್ದಲ್ಲಿ ಪರ್ಯಾಯವೇನು ಎಂಬುದು. (ಕಾಂಗ್ರೆಸ್ ಮತ್ತು ಬಿಜೆಪಿಗಳಿಗೆ ಯಾವುದೇ ಬಗೆಯ ಸ್ವಾತಂತ್ರ್ಯಾಪೇಕ್ಷೆಯೂ ಇಲ್ಲ. ಆದರೆ ಎಡರಂಗಕ್ಕೆ ಈ ವ್ಯವಸ್ಥೆಯೊಳಗೆ ಸ್ವಲ್ಪವಾದರೂ ಜನಪರ ಕೆಲಸ ಮಾಡಬೇಕೆಂಬ ಹಿತಾಸಕ್ತಿ ಇರುತ್ತದೆ ಎಂಬ ವ್ಯತ್ಯಾಸವನ್ನು ಗಣನೆಗೆ ತೆಗೆದುಕೊಂಡರೂ ಈ ಪ್ರಶ್ನೆ ಇದ್ದೇ ಇರುತ್ತದೆ.)

ಸಿಂಗೂರ್ ಮತ್ತು ನಂದಿಗ್ರಾಮಗಳು ಮತ್ತು ಇತರೆಡೆ ಬರುತ್ತಿರುವ ವಿಶೇಷ ಆರ್ಥಿಕ ವಲಯಗಳು ಸ್ಪಷ್ಟವಾಗಿ ಸೂಚಿಸುವಂತೆ ನವ ಉದಾರವಾದದ ಚೌಕಟ್ಟಿನಲ್ಲಿ ಪಶ್ಚಿಮ ಬಂಗಾಳ ಸರ್ಕಾರಕ್ಕೆ ಆ ರೀತಿಯ ಯಾವ ಬಗೆಯ ಸ್ವಾತಂತ್ರ್ಯವೂ ಇಲ್ಲ. ಇತರ ಸರ್ಕಾರಗಳಂತೆ ಅದು ಸಹ ೧೮೯೪ರ ಭೂಸ್ವಾಧೀನ ಕಾಯಿದೆಯೆಂಬ ವಸಾಹತುಶಾಹಿ ಕಾನೂನನ್ನು ಬಳಸಿಯೇ ರೈತರ ಜಮೀನನ್ನು ವಶಪಡಿಸಿಕೊಳ್ಳುತ್ತಿದೆ. ವಿಶೇಷ ಆರ್ಥಿಕ ವಲಯಗಳಲ್ಲಿ ನೀಡಲಾಗುವ ಎಲ್ಲ ಆಮಿಷಗಳನ್ನು ಬಂಡವಾಳದಾರರಿಗೆ ನೀಡುತ್ತಿದೆ. ಆದ್ದರಿಂದಲೇ ಸಿಐಐನ ಅಧ್ಯಕ್ಷ ಶೇಷಶಾಯಿ ಒಂದು ಸಂದರ್ಶನದಲ್ಲಿ ಪಶ್ಚಿಮ ಬಂಗಾಳದ ಮುಖ್ಯಮಂತ್ರಿಯನ್ನು ಇತರ ಎಲ್ಲಾ ಮುಖ್ಯಮಂತ್ರಿಗಳಿಗಿಂತ ಹೆಚ್ಚು ಬಂಡವಾಳಸ್ನೇಹಿ ಎಂದು ಹೊಗಳಿದರು; ನಾರಾಯಣಮೂರ್ತಿ ಇಡೀ ಭಾರತದಲ್ಲೇ ಪಶ್ಚಿಮ ಬಂಗಾಳ ಸರ್ಕಾರ ಮಾದರಿ ಸರ್ಕಾರ ಎಂದರು.

ಹೀಗಾಗಿ ಇರುವ ವ್ಯವಸ್ಥೆಯನ್ನು ಜನಪರವಾಗಿ ದುಡಿಸಿಕೊಳ್ಳಲು ಇದ್ದ ವ್ಯಾಪ್ತಿ ಕುಗ್ಗುತ್ತಾ ಇದೆ. ಬೂರ್ಜ್ವಾ ಪ್ರಜಾಪ್ರಭುತ್ವವೂ ತನ್ನ ಮುಖ ಕಳಚಿಕೊಳ್ಳುತ್ತಾ ಫ್ಯಾಸಿಸ್ಟ್ ಆಗುತ್ತಿದೆ. ಏಕೆಂದರೆ, ಆರ್ಥಿಕತೆಯಲ್ಲಿ ಅತ್ಯಂತ ಪ್ರತಿಗಾಮಿ ಜಾಗತಿಕ ಹಣಕಾಸು ಬಂಡವಾಳ ಆರ್ಥಿಕತೆಯನ್ನು ವಸಾಹತೀಕರಿಸಿದೆ. ಅವಕಾಶವಿದ್ದರೆ ಎಡಪಕ್ಷಗಳು ಜನಪರ ಕಾರ್ಯಕ್ರಮ ಕೊಡುತ್ತಿದ್ದವು ಎಂದುಕೊಂಡರೂ ಪರ್ಯಾಯ ಜನಪರ ನೀತಿಗಳ ಮೂಲಕ ಜನರನ್ನು ಕಮ್ಯುನಿಸ್ಟ್ ಪಕ್ಷಗಳೆಡೆ ಆಕರ್ಷಿಸುವ ಅವಕಾಶವನ್ನೇ ನವ ಸಾಮ್ರಾಜ್ಯವಾದಿ ಜಾಗತಿಕ ವ್ಯವಸ್ಥೆ ನಿರಾಕರಿಸುತ್ತಿದೆ. ಸಿಂಗೂರ್ ಮತ್ತು ನಂದಿಗ್ರಾಮ ಎರಡೂ ಅದರ ಅಭಿವ್ಯಕ್ತಿ ಅಷ್ಟೆ.

ಸಮಾಜ ಬದಲಾವಣೆಗೆ ಹಾಗೂ ಕ್ರಾಂತಿಗೆ ಪಾರ್ಲಿಮೆಂಟರಿ ಪ್ರಜಾಪ್ರಭುತ್ವವನ್ನು ಒಂದು ಕಾರ್ಯತಂತ್ರವನ್ನಾಗಿ ಉಪಯೋಗಿಸಿಕೊಳ್ಳಬಹುದೆಂದು ಪ್ರಪಂಚದಾದ್ಯಂತ ಹಲವಾರು ಕಮ್ಯುನಿಸ್ಟ್ ಪಕ್ಷಗಳು ಪ್ರಯತ್ನಿಸುತ್ತಿವೆ. ಪ್ರಾರಂಭದಲ್ಲಿ ಲೆನಿನ್ ಮಾಡಿದಂತೆ ಸಂಸತ್ತಿನ ನಿರುಪಯುಕ್ತತೆಯನ್ನು ಸಾಬೀತುಮಾಡಲು ಸಂಸತ್ ಪ್ರವೇಶ ಒಂದು ಕಾರ್ಯ ತಂತ್ರವಾಗಿತ್ತು. ಆದರೆ ಕ್ರಮೇಣ ಸಂಸತ್ತಿನ ಮೂಲಕ ಸಾಧ್ಯವಾದಷ್ಟು ಜನಪರ ಕೆಲಸ ಮಾಡಿಸಬೇಕೆಂಬ ಕಾರ್ಯತಂತ್ರವಾಗಿ ಅದು ಮಾರ್ಪಟ್ಟು ಮುಂದಿನ ಬೆಳವಣಿಗೆಗಳನ್ನು, ಅಂದರೆ ಪ್ರಭಾತ ಪಟ್ನಾಯಕ್ ಹೇಳುವಂತೆ, ಕ್ರಾಂತಿಯ ವಾಸ್ತವ ಸಂಭಾವ್ಯತೆಯ ದೃಷ್ಟಿಯಿಂದ ನೋಡದೆ ಅದನ್ನು ದೂರದ ಸಾಧ್ಯತೆಯೆಂದು ತಳ್ಳಿಹಾಕಿ ತತ್‌ಕ್ಷಣದ ಜನರ ಹಿತಾಸಕ್ತಿಯೆಂಬ ಪ್ರಾಗ್ಮಾಟಿಕ್ ಪ್ರಶ್ನೆಯನ್ನಾಗಿ ಮಾಡಲಾಯಿತು. ಈಗ ಆ ಸಾಧ್ಯತೆಯೂ ಇಲ್ಲದಿರುವಾಗ ಕಾರ್ಯತಂತ್ರಗಳು ಜನತೆಯ ಪ್ರಜಾಪ್ರಭುತ್ವಗಳನ್ನು ಸಾಧ್ಯಗೊಳಿಸುವ ಮಾರ್ಗ ಎಂದು ಅರ್ಥಮಾಡಿಕೊಳ್ಳುತ್ತೇವೆಂದರೆ ಭಾರತದಲ್ಲಿ ಪ್ರಜಾಪ್ರಭುತ್ವದ ಮುಸುಕಿನಲ್ಲಿ ಆಗುತ್ತಿರುವ ಆರ್ಥಿಕತೆಯ ನವ ವಸಾಹತೀಕರಣ, ರಾಜಕೀಯದಲ್ಲಿ ಬೆಳೆಯುತ್ತಿರುವ ಫ್ಯಾಸಿಸಂಅನ್ನು ಗುರುತಿಸದೇ ತಾವು ಕಟ್ಟುತ್ತಿರುವುದು ಸಮಾಜವಾದವನ್ನಲ್ಲ, ಬಂಡವಾಳ ಶಾಹಿ ಪ್ರಜಾಪ್ರಭುತ್ವವನ್ನು ಎಂದುಕೊಳ್ಳುವುದು, ಅದಕ್ಕೆ ಲೆನಿನ್ ಬೇರೆಯದೇ ಆದ ಐತಿಹಾಸಿಕ ಕಾಲಘಟ್ಟದಲ್ಲಿ ಬಂಡವಾಳಶಾಹಿಯೊಂದಿಗೆ ಮಾಡಿಕೊಂಡ ಸಂಧಾನವನ್ನು ಉದಾಹರಣೆಯಾಗಿ ನೀಡುವುದು ನಿರರ್ಥಕ ಬೌದ್ಧಿಕ ಕಸರತ್ತು ಆಗುತ್ತದೆ. ಸಮಾಜ ಬದಲಾವಣೆ ಮತ್ತು ಜನತೆಯ ಪ್ರಜಾತಂತ್ರ (ಸಮಾಜವಾದವಲ್ಲ) – ಮುಖ್ಯರಾದವರು ಈ ಸ್ವಯಂ ಹೇರಿಕೊಳ್ಳಲ್ಪಟ್ಟ ಚೌಕಟ್ಟಿನಿಂದ ಹೊರಬರದೆ ಹೊಸ ಮಾರ್ಗಗಳು, ಸಾಧ್ಯತೆಗಳು ಗೋಚರಿಸುವುದಿಲ್ಲ.

**ಶಿವಸುಂದರ್**
ನಂ. ೭೬, 'ಸೃಜನ', ೩ನೇ ಹಂತ, ವಿನಾಯಕ ಬಡಾವಣೆ, ವಿಜಯನಗರ, ಬೆಂಗಳೂರು - ೫೬೦ ೦೪೦

# ಶನಿಗ್ರಹದ ಪುನರಾಗಮನ

**ಸೂ**ರ್ಯಾಸ್ತವಾಗುತ್ತಿದ್ದಂತೆಯೇ ಪಶ್ಚಿಮ ಆಕಾಶದಲ್ಲಿ ಕಂಗೊಳಿಸುವ ಶುಕ್ರಗ್ರಹ ಈ ತಿಂಗಳಲ್ಲಿ ಇನ್ನಷ್ಟು ಮೇಲೇರಲಿದೆ. ತಿಂಗಳ ಮೊದಲ ವಾರದಲ್ಲಿ ಅದರೊಡನೆ ಬುಧಗ್ರಹವೂ ಸಂಜೆ ಕಂಗೊಳಿಸಲಿದೆ. ನೆತ್ತಿಯ ಮೇಲೆ ವೃಷಭ, ಅದರ ಪಕ್ಕದ ವಿಜಯಸಾರಥಿ (ಆರಿಗಾ), ಮಹಾವ್ಯಾಧ (ಒರೈಯನ್), ಮಿಥುನ, ಸಿಂಹ ಇವುಗಳೂ ಆಕಾಶದ ಸೌಂದರ್ಯವನ್ನು ಹೆಚ್ಚಿಸಿವೆ. ಉತ್ತರದಲ್ಲಿ ಕುಂತಿ (ಕಾಸಿಯೋಪಿಯ), ಪಾರ್ಥ (ಪರ್ಸಿಯುಸ್) ಇವುಗಳು; ದಕ್ಷಿಣದಲ್ಲಿ ಮಹಾಶ್ವಾನ (ಕಾನಿಸ್ ಮೇಜರ್), ಕರೀನಾದ ಅಗಸ್ತ್ಯ (ಕೆನೋಪಸ್) ಸ್ಫುಟವಾಗಿ ಕಾಣುವುವು. ಚಂದ್ರನಿಲ್ಲದಾಗ ಆಕಾಶಗಂಗೆಯ ವೈಭವವನ್ನೂ ಕಾಣಬಹುದು.

ಏಳರಂದು ಗರಿಷ್ಠ ಎತ್ತರದಲ್ಲಿ ಕಾಣುವ ಬುಧ ಕ್ರಮೇಣ ದಿಗಂತದ ಅಂಚಿಗೆ ಇಳಿಯುವುದು. ಅದೇ ಹೊತ್ತಿಗೆ ಪೂರ್ವದಲ್ಲಿ ಶನಿಗ್ರಹದ ಆಗಮನ ವಾಗುವುದು. ೧೦ರಂದು ಶನಿ ಪ ಗ್ರಹದ ಯುತಿ. ಈ ಪದದ ವ್ಯಾಖ್ಯೆ ಸರಳ. ಆ ದಿನದಿಂದ ಮುಂದೆ ಶನಿ ಗ್ರಹ ಸಂಜೆ ಕಾಣುವುದು; ಅಷ್ಟೇ ಅಲ್ಲ ರಾತ್ರಿ ಇಡೀ ನೋಡಲು ಸಿಗುವುದು; ಇನ್ನೂ ಒಂದಂಶವೆಂದರೆ ಭೂಮಿ-ಶನಿ ನಡುವಿನ ಅಂತರ ಕನಿಷ್ಠವಿರುವುದರಿಂದ ಪ್ರಕಾಶವೂ ಗರಿಷ್ಠವಿರುವುದು. ಒಟ್ಟಿನಲ್ಲಿ ಶನಿಗ್ರಹವನ್ನು ನೋಡಲು ಇದು ಸದವಕಾಶ; ಬರಿಗಣ್ಣಿಗೇ ಕಾಣುವ ಈ ಗ್ರಹವನ್ನು ದೂರದರ್ಶಕದಿಂದ ನೋಡಿದಿರಾದರೆ ಸುಂದರ ಉಂಗುರ ಕಣ್ಸೆಳೆಯುವುದು. ಮತ್ತೆ ಮತ್ತೆ ನೋಡಬೇಕೆನ್ನಿಸುವ ಏಕೈಕ ಆಕಾಶಕಾಯ ಶನಿ.

ಗುರು ಮತ್ತು ಮಂಗಳ ಗ್ರಹಗಳು ಬೆಳಗಿನ ಜಾವ ಕಾಣುವುವು. ಶನಿಗ್ರಹ ಮಘ ನಕ್ಷತ್ರದತ್ತ ಹೊರಡಬೇಕಾದದ್ದು ಈಗ ಹಿನ್ನಡೆಯುತ್ತಿದೆ. ಗುರುಗ್ರಹ ವೃಶ್ಚಿಕವನ್ನು ದಾಟಿದೆ; ಧನುವನ್ನಿನ್ನೂ ಮುಟ್ಟಿಲ್ಲ. ಇವೆರಡರ ನಡುವಿನ ಒಫಿಯೂಕಸ್ (ಉರಗಧರ) ಪುಂಜದಲ್ಲಿದೆ. ಮಂಗಳಗ್ರಹ ಧನುವಿನಿಂದ ಮಕರಕ್ಕೆ ಓಡುತ್ತಿದೆ.

ಈ ತಿಂಗಳ ಹುಣ್ಣಿಮೆಯಂದು ಚಂದ್ರನ ಸ್ಥಾನ ಗಮನಿಸಿಕೊಳ್ಳಿ. ಆ ದಿನ ಚಂದ್ರ, ಶನಿ ಸಮೀಪವಿರುವಂತೆ ಕಾಣುತ್ತದೆ. ಮುಂದಿನ ರಾತ್ರಿ ಅಂದರೆ ೩ರ ಸಂಜೆ ಚಂದ್ರನಿಗೆ ತಗುಲಿಕೊಂಡಂತೆ ಕಾಣುವ ನಕ್ಷತ್ರವೇ ಮಘ. ಇದನ್ನು ನೆನಪಿಟ್ಟುಕೊಳ್ಳಿ, ಮಾರ್ಚ್ ೩ರ ಹುಣ್ಣಿಮೆಯಂದು ಗ್ರಹಣವಿದೆ. ಅರ್ಧರಾತ್ರಿಯ ನಂತರ ಆರಂಭವಾಗುವ ಗ್ರಹಣ ಬೆಳಗಿನ ಜಾವದವರೆಗೂ ಮುಗಿದಿರುವುದಿಲ್ಲ. ಆದ್ದರಿಂದ ಮಾರ್ಚ್ ೩ರ ಬೆಳಗಿನ ಜಾವ ಚಂದ್ರನನ್ನು ತಪ್ಪದೆ ನೋಡಿ. (ಪಶ್ಚಿಮದಲ್ಲಿ) ಕೆಂಪು ಬಣ್ಣದ ಚಂದ್ರನ ಪಕ್ಕ ಮಘ ನಕ್ಷತ್ರವನ್ನು ಗುರುತಿಸಿ.

ಈ ತಿಂಗಳಲ್ಲಿ ಯಾವುದೇ ಮಹತ್ವದ ಉಲ್ಕಾವೃಷ್ಟಿ ಇಲ್ಲ. ಕ್ಷೀಣವಾದ ಧೂಮಕೇತುವೊಂದಿದೆ. ಆದರೆ ಕಳೆದ ತಿಂಗಳು ಇದ್ದಕ್ಕಿದ್ದಂತೆ ಪ್ರಕಾಶ ಪಡೆದು ಸುದ್ದಿ ಮಾಡಿದ ಮೆಕ್‌ನಾಚ್‌ನಂತಹ ಧೂಮಕೇತುಗಳು ಬರಬಹುದು. ದುರಾದೃಷ್ಟದ ಸಂಗತಿಯೆಂದರೆ ಅವುಗಳಿಗೆ ನಭಾವಲೋಕನದಲ್ಲಿ ಜಾಗವೇ ಸಿಗುವುದಿಲ್ಲ.

ಚಂದ್ರ ಈ ತಿಂಗಳಲ್ಲಿ ಅನೇಕ ಆಚ್ಛಾದನೆಗಳನ್ನು ಸೃಷ್ಟಿಸಲಿದೆ. ಅವೆಲ್ಲವೂ ನಮಗೆ ನೋಡಲು ಸಿಗುವುದಿಲ್ಲ ಆದರೆ ಛಾಯಾಗ್ರಹಣಕ್ಕೆ ಒಳ್ಳೆಯ ಅವಕಾಶಗಳಾಗಲಿವೆ. ಶನಿ, ಮಘ ನಕ್ಷತ್ರ, ಚಿತ್ತಾ ನಕ್ಷತ್ರ, ಜ್ಯೇಷ್ಠಾ ನಕ್ಷತ್ರ ಇವೆಲ್ಲವನ್ನೂ ಚಂದ್ರ ಮರೆಮಾಡಲಿದೆ. ಬರಿಗಣ್ಣಿನಿಂದ ನೋಡಿ ಆನಂದಿಸಿ ನಕ್ಷತ್ರಗಳನ್ನು ಗುರುತುಮಾಡಿಕೊಳ್ಳಲು ಇವು ಪೂ ವಿಶೇಷ ಅವಕಾಶಗಳು.

### ಖಗೋಳ ದಿನಚರಿ

೦೨ ಹುಣ್ಣಿಮೆ ೧೧:೧೫ಕ್ಕೆ
ಶನಿ-ಚಂದ್ರ ನಡುವೆ ಕನಿಷ್ಠ ಕೋನ *
ಆಚ್ಛಾದನೆ ಕಾಣುವುದಿಲ್ಲ *
೦೩ ಚಂದ್ರ - ಮಘ ನಡುವೆ ಕನಿಷ್ಠ ಕೋನ *
ಆಚ್ಛಾದನೆ ಕಾಣುವುದಿಲ್ಲ
೦೭ ಶುಕ್ರ-ಯುರೇನಸ್ ನಡುವೆ ಕನಿಷ್ಠ ಕೋನ
ಬುಧ ಗ್ರಹದ ಗರಿಷ್ಠ ಕೋನೋನ್ನತಿ
೦೯ ಚಂದ್ರ-ಚಿತ್ತಾ ನಡುವೆ ಕನಿಷ್ಠ ಕೋನ *
ಆಚ್ಛಾದನೆ ಕಾಣುವುದಿಲ್ಲ

೧೦ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ) ಶನಿಗ್ರಹದ ಯುತಿ
೧೧ ಚಂದ್ರ-ಜ್ಯೇಷ್ಠಾ ನಡುವೆ ಕನಿಷ್ಠ ಕೋನ * ಆಚ್ಛಾದನೆ ಕಾಣುವುದಿಲ್ಲ
೧೨ ಚಂದ್ರ-ಗುರು ನಡುವೆ ಕನಿಷ್ಠ ಕೋನ
೧೫ ಚಂದ್ರ-ಮಂಗಳ ನಡುವೆ ಕನಿಷ್ಠ ಕೋನ
೧೭ ಅಮಾವಾಸ್ಯೆ ೨೧:೪೪ಕ್ಕೆ
೧೮ ಚಂದ್ರ-ಬುಧ ನಡುವೆ ಕನಿಷ್ಠ ಕೋನ
೧೯ ಚಂದ್ರ-ಶುಕ್ರ ನಡುವೆ ಕನಿಷ್ಠ ಕೋನ
೨೪ ಚಾಂದ್ರಮಾಸದ ಪ್ರಥಮ ಪಾದ (ಚಂದ್ರಾಸ್ತ ನಡುರಾತ್ರಿಗೆ)

**ಮಾರ್ಚ್**

೨ ಶನಿ-ಚಂದ್ರ ನಡುವೆ ಕನಿಷ್ಠ ಕೋನ * ಆಚ್ಛಾದನೆ ಕಾಣುವುದಿಲ್ಲ
೩ ಹುಣ್ಣಿಮೆ ಚಂದ್ರಗ್ರಹಣ *
(೪ರ ಬೆಳಗಿನ ಜಾವ ೦೧ ಗಂ.೪೬ ನಿ. ದಿಂದ ಚಂದ್ರಾಸ್ತದವರೆಗೂ ಕಾಣುವುದು)
ಹುಣ್ಣಿಮೆ ಎಂಬ ಘಟನೆ ೪ರ ಬೆಳಗಿನ ಜಾವ ೦೪:೪೭ಕ್ಕೆ

* ಛಾಯಾಗ್ರಹಣಕ್ಕೆ ಅತ್ಯುತ್ತಮ ಅವಕಾಶ

*೧೨ರ ಬೆಳಗಿನ ಜಾವ ಚಂದ್ರ ಮತ್ತು ಜ್ಯೇಷ್ಠಾ*

*೩ ರ ಬೆಳಗಿನ ಜಾವ ಶನಿ ಮತ್ತು ಚಂದ್ರ*

ಡಾ॥ ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧



*ಬಾಹುಬಲಿ ನಿಂತ ಜಾಗ ತಲುಪಬೇಕಾದರೆ ಮೆಟ್ಟಿಲುಗಳನ್ನು ಹತ್ತಿ ಹೋಗಬೇಕು. ಅಷ್ಟು ಮೆಟ್ಟಿಲುಗಳನ್ನು ಏರುವುದು ನಿಜವಾಗಿಯೂ ವಯಸ್ಸಾದವರಿಗೆ ಸಾಧ್ಯವಾಗುವುದಿಲ್ಲ. ಅದಕ್ಕಾಗಿ ಅಲ್ಲಿ ಡೋಲಿಯನ್ನು ಉಪಯೋಗಿಸಲಾಗುತ್ತಿದೆ. ಕುರ್ಚಿಯಾಕಾರದ ಡೋಲಿಯ ಮೇಲೆ ಭಕ್ತನನ್ನು ಕೂಡ್ರಿಸಿಕೊಂಡು ನಾಲ್ಕು ಜನ ಹೆಗಲ ಮೇಲೆ ಹೊತ್ತುಕೊಂಡು ಬಾಹುಬಲಿ ನಿಂತ ಗಿರಿಯನ್ನು ತಲುಪಿಸುತ್ತಾರೆ.*

# ಬಾಹುಬಲಿ ಮತ್ತು ಡೋಲಿ

■ ಬಸವರಾಜ ಹೂಗಾರ

**ಹ**ನ್ನೆರಡು ವರ್ಷಗಳಿಗೊಮ್ಮೆ ನಡೆಯುವ ಬಾಹುಬಲಿಯ ಮಜ್ಜನವನ್ನು ಅದ್ದೂರಿಯಾಗಿ ಮುಗಿಸಿದೆವು. ಹಾಲು ತುಪ್ಪದ ಅಭಿಷೇಕ, ಕಲಶಗಳು, ಜೈನಮುನಿಗಳ ದರ್ಶನ, ದೇಶದ ಮೂಲೆಮೂಲೆಯಿಂದ ಬಂದ ಜನ ಸಮೂಹ, ಅಲ್ಲಿಗೆ ಹೋಗಿ ನೋಡಲಿಕ್ಕಾಗದವರಿಗೆ ಟಿ.ವಿ.ಯಲ್ಲಿ ಮಜ್ಜನದ ನೇರ ಪ್ರಸಾರ, ಭಕ್ತವೃಂದ ನಿಜ ವಾಗಿಯೂ ಆನಂದ ತುಂದಿಲರಾದ ಸಂದರ್ಭ ಅದು.

ಒಂದು ಧರ್ಮದ ಉತ್ಸವದಲ್ಲಿ ಸೇರಿರುವ ಅಪಾರ ಜನಸ್ತೋಮವನ್ನು ನೋಡಿದರೆ ಜನತೆಯ ಮೇಲೆ ಧರ್ಮದ ಪ್ರಭಾವ ಎಷ್ಟು ಅಗಾಧವಾಗಿದೆ ಎನ್ನುವುದನ್ನು ಗುರುತಿಸಬಹುದು. ಜಗತ್ತಿನಲ್ಲಿ ಹಲವು ಧರ್ಮಗಳಿವೆ. ಪ್ರತಿ ಧರ್ಮಕ್ಕೂ ಅದರದೇ ಆದ ಜನವಲಯ ಇದೆ. ಒಂದೊಂದು ಧರ್ಮಕ್ಕೂ ಒಂದೊಂದು ಮಗ್ಗಲುಗಳಿವೆ. ಇದು ಆ ಧರ್ಮದ ವಿಶೇಷತೆ ಎಂದು ನಾವು ಹೇಳುತ್ತೇವೆ. ಇಸ್ಲಾಂನ ಏಕದೇವೋಪಾಸನೆ, ಕ್ರಿಸ್ತನ ಕರುಣೆ, ಬುದ್ಧನ 'ಆಶೆಯೇ ದುಃಖಕ್ಕೆ ಮೂಲ' ಎಂಬ ತತ್ವ, ಇತ್ಯಾದಿಗಳು ಆಯಾ ಧರ್ಮದ ವಿಶೇಷತೆಗಳು. ಪ್ರತಿಯೊಂದು ಧರ್ಮವೂ ತನ್ನ ಅನುಯಾಯಿಗಳಿಗೆ ಕೆಲವು ನಿಯಮಾ ಚರಣೆಗಳನ್ನು ಹೇಳಿರುವಂತೆ ಜೈನ ಧರ್ಮದಲ್ಲಿಯೂ ಕೆಲವು ಶಿಸ್ತಿನ ನಿಯಮಗಳಿವೆ. ಕಣ್ಣಿಗೆ ಕಾಣದೇ ಇರುವ ಅತೀಸೂಕ್ಷ್ಮ ಜೀವಿಗಳು ನಮ್ಮ ದೇಹದೊಳಗೆ ಪ್ರವೇಶ ಮಾಡಿದರೆ ಜೀವಹತ್ಯೆಯಾದೀತು ಎಂಬ ಆಲೋಚನೆ ಯಿಂದ ಬಾಯಿಗೆ ಬಟ್ಟೆ ಕಟ್ಟಿಕೊಂಡಿರುವ ಸಾಧಕರನ್ನು ನಾವು ಕಾಣುತ್ತೇವೆ. ಮಾಂಸಾಹಾರವಂತೂ ಈ ಧರ್ಮದಲ್ಲಿ ವರ್ಜ್ಯ.

ಯಶೋಧರರಾಜ ಕೆಟ್ಟ ಕನಸನ್ನು ಕಂಡು ಅದನ್ನು ತಾಯಿಯ ಮುಂದೆ ಹೇಳುತ್ತಾನೆ. ತಾಯಿಯ ಆಣತಿಯಂತೆ ಕನಸಿನ ಪ್ರಾಯಶ್ಚಿತ್ತಕ್ಕಾಗಿ ಹಿಟ್ಟಿನ ಕೋಳಿಯನ್ನು ಬಲಿಕೊಡ ಲಾಗುತ್ತದೆ. ಜೀವಂತ ಕೋಳಿಯ ಬದಲಾಗಿ ಹಿಟ್ಟಿನ ಕೋಳಿಯನ್ನು ಬಲಿಕೊಟ್ಟರೂ ಅದು ಕೂಗುತ್ತದೆ. ಹಿಂಸೆ ಯಾವುದೇ ರೂಪದಲ್ಲಿರಲಿ ಹಿಂಸೆ ಹಿಂಸೆಯೇ ಎನ್ನುವುದನ್ನು ಜನ್ನ 'ಯಶೋಧರ ಚರಿತೆ'ಯಲ್ಲಿ ಪ್ರಸ್ತಾಪಿಸುತ್ತಾನೆ. ಜೈನಧರ್ಮದ ಆಶಯದಂತೆ ಹಿಂಸೆ ಈ ಅರ್ಥದಲ್ಲಿ ಕೇವಲ ಭೌತಿಕವಾಗಿರದೆ ಅದೊಂದು ಮನೋವ್ಯಾಪಾರವೂ ಹೌದು ಎನ್ನುವುದನ್ನು ನಾವು ಇಲ್ಲಿ ಗಮನಿಸಬೇಕಾದದ್ದು. ತಾನು ದುಡಿದ ಕನಿಷ್ಠ ಭಾಗವನ್ನು ಪರೋಪಕಾರಕ್ಕಾಗಿ ಉಪಯೋಗಿಸಬೇಕು ಎನ್ನುವುದನ್ನು ಜೈನಧರ್ಮದಲ್ಲಿ ಹೇಳಲಾಗಿದೆ. ಆಧುನಿಕ ಸಂದರ್ಭದಲ್ಲಿ 'ಗೋಶಾಲಾ', 'ಅನಾಥಾಶ್ರಮ', 'ಅರವಟ್ಟಿಗೆ' ರೂಪ ದಲ್ಲಿ ಇದು ನಮಗೆ ಕಾಣುತ್ತದೆ.

ವಿಂಧ್ಯಗಿರಿ ಬೆಟ್ಟದ ಮೇಲೆ ನಿಂತ ಬಾಹುಬಲಿ ತ್ಯಾಗದ ಸಂಕೇತ. ಭೋಗದ ನಿರಾಕರಣೆ, ವಾಂಛೆಯ ಕ್ಷಣಿಕತೆ, ಎಲ್ಲವನ್ನೂ ಬಿಟ್ಟು ಮಣ್ಣಲ್ಲಿ ಮಣ್ಣಾಗಿ ಹೋಗುವ ನಿಸರ್ಗ ಋಣ, ಅದರ ನಡುವೆ ಉಳಿದು ಬಾಳಿ ಬದುಕಿದ ನ್ಯಾಯದ ಬದುಕಿನ ಭವ್ಯತೆ, ಇವು ಬಾಹುಬಲಿ ನಾವಂದುಕೊಂಡಂತೆ ತಿಳಿಸಿರುವ ಸತ್ಯಗಳು.

ಇಂತಹ ಬಾಹುಬಲಿಯ ಮಜ್ಜನ ೧೨ ವರ್ಷ ಗಳಿಗೊಮ್ಮೆ ಬಂದಾಗ ಅಪಾರ ಜನಸ್ತೋಮ ಭಯ ಭಕ್ತಿಯಿಂದ ಪಾಲ್ಗೊಳ್ಳುತ್ತದೆ. ಸರಕಾರ ಖುದ್ದು ನಿಂತು ಇದರ ಉಸ್ತುವಾರಿ ನೋಡಿಕೊಳ್ಳುತ್ತದೆ. ಈ ಅದ್ದೂರಿತನ, ತುಪ್ಪದ ಅಭಿಷೇಕ, ನೋಡಿದರೆ ಎಲ್ಲವನ್ನೂ ನಿರಾಕರಣೆ ಮಾಡಿ ಬೆತ್ತಲೆಯಾಗಿ ನಿಂತ ಬಾಹುಬಲಿಗೆ ನಾವು ಎಲ್ಲವನ್ನೂ ನೀಡುತ್ತಿದ್ದೇವೆ ಎಂದೆನಿಸುತ್ತದೆ. ಬದುಕಿನ ಭವ್ಯತೆಯನ್ನು ತ್ಯಾಗದಲ್ಲಿ ಕಂಡ ಮನುಷ್ಯ ನಮ್ಮಿಂದ ತುಪ್ಪದ ಅಭಿಷೇಕವನ್ನು ಖಂಡಿತ ಕೇಳುವುದಿಲ್ಲ. ಹಳ್ಳಿಗಾಡಿನ ಹೆಣ್ಣುಮಕ್ಕಳು ಬಡತನದ ಪರಿಸ್ಥಿತಿಯಿಂದ ಪ್ರತಿನಿತ್ಯ ಸ್ವಲ್ಪ ಬೆಣ್ಣೆ ಕಡೆದು ಅದನ್ನು ಅಡಿಕಲಗಡಿಗೆಯಲ್ಲಿ ಕೂಡಿಹಾಕಿ ವಾರಕ್ಕೊಮ್ಮೆ ಮಾರುತ್ತಾರೆ. ಎಷ್ಟೋ ಸಾರೆ ಮಕ್ಕಳು ಕಾಡಿದರೂ 'ಪಾಪ', ಬೆಣ್ಣೆಯನ್ನು ಕೊಡುವುದಿಲ್ಲ. ಅದನ್ನು ಮಾರಿ ಗಳಿಸಿದ ತುಸು ರೊಕ್ಕದಿಂದ ಮನೆಯ ಸಂಸಾರದ ಆಪತ್ಕಾಲದ ಖರ್ಚಿಗೆ ಅದನ್ನು ಬಳಸುತ್ತಾರೆ. ಇದನ್ನು ಹಳ್ಳಿಗಾಡಿನಲ್ಲಿ ಇಂದಿಗೂ 'ಅವ್ವನ ಬೆಣ್ಣೆ ರೊಕ್ಕ' ಎಂದೇ ಕರೆಯುತ್ತಾರೆ. ಈ ಬೆಣ್ಣೆ ರೊಕ್ಕದಲ್ಲಿ ದಿನಾ ಉಡಲು ಒಂದು ವರ್ಷದ ಜೊತೆ ಸೀರೆ ಕೂಡ ಕೊಂಡು ಕೊಳ್ಳುತ್ತಾರೆ. ಇಂಥ ಶ್ರೇಷ್ಠ ಬೆಲೆಯುಳ್ಳ ಹಾಗೂ ಬಡವರ ಉತ್ಪಾದನೆಯಾದರೂ ಬಡವರಿಗೆ ದಕ್ಕದ ತುಪ್ಪವನ್ನು ಬ್ಯಾರಲ್‌ಗಟ್ಟಲೆ ತನಗೆ ಎರೆಯಿರಿ ಎಂದು ಬಾಹುಬಲಿ ಕೇಳುತ್ತಾನಾ ? (ಇದು ಬರೀ ಬಾಹುಬಲಿಗೆ ಮಾತ್ರ ಸಂಬಂಧಿಸಿದ್ದಲ್ಲ, ಇದು ನಮ್ಮ ಅಡ್ಡ ಪಲ್ಲಕ್ಕಿಯಿಂದ ಹಿಡಿದು ಉದ್ದ ಪಲ್ಲಕ್ಕಿವರೆಗೂ ಅನ್ವಯವಾಗುತ್ತದೆ.) ಇದು ಖಂಡಿತ ಧರ್ಮ ವಿರೋಧಿ, ನಾಸ್ತಿಕತನ ಅಲ್ಲ. ಬರಿಗೈಲಿ ಕೈಮುಗಿಯುವ ಸಾಮಾನ್ಯನೊಬ್ಬನ ದೈವಶಕ್ತಿಯ ಮುಂದೆ ಈ ಎಲ್ಲ ಅಭಿಷೇಕಗಳೂ ಕಳಾಹೀನವಾಗುತ್ತವೆ. ಈ ಸಂದರ್ಭವನ್ನೇ ಗಮನದಲ್ಲಿಟ್ಟು ನೋಡಿದರೆ ಒಟ್ಟು ಬಾಹುಬಲಿಯ ವ್ಯಕ್ತಿತ್ವವನ್ನೇ ಇದು ಸ್ಥಾವರ ಮಾಡಿ ಬಿಡುವ ಕ್ರಮವೇನೋ ಎಂದು ಭಾಸವಾಗುತ್ತದೆ. ಭಾರತೀಯ ಜನಸಮುದಾಯದಲ್ಲಿ ಇಂಥ ವ್ಯಕ್ತಿತ್ವಗಳು ಅದ್ದೂರಿ ಪೂಜಾ ಆರಾಧನೆಗಳಿಂದ ಮುಚ್ಚಿ ಹೋಗುವುದೇ ಹೆಚ್ಚು. ಕೊನೆಕೊನೆಗೆ ಅದು ವ್ಯಕ್ತಿಗಳ ಸಾಧನೆಗಳನ್ನು ಅರ್ಥೈಸಿಕೊಳ್ಳದೇ ಬರೀ ದೇವರಾಗಿ ಕೈಮುಗಿಯುವಷ್ಟಕ್ಕೆ ಬಂದು ನಿಲ್ಲುತ್ತದೆ. ಹೆಚ್ಚು ಕಡಿಮೆ ಭಾರತದ ಬಹುತೇಕ ವ್ಯಕ್ತಿತ್ವಗಳಿಗೆ ಇಂಥ ಹಣೆ ಬರಹವನ್ನು ನಾವು ತಂದಿಟ್ಟಿದ್ದೇವೆ.

ಬಾಹುಬಲಿ, ಬುದ್ಧ, ಬಸವ, ಅಂಬೇಡ್ಕರ್ ಇವರ‍್ಯಾರೂ ದೇವರುಗಳಲ್ಲ. ಅವರು ನಮ್ಮ ನಡುವೆ ಬಾಳಿ ಬದುಕಿದವರು. ಅವರಿಗೊಂದು ಚರಿತ್ರೆ, ಚಾರಿತ್ರ್ಯ ಇದೆ.



ಬುದ್ಧ ದೈವತ್ವವನ್ನು ಅರಸುತ್ತಾ ಜನಸಾಮಾನ್ಯರ ಕಡೆಗೆ ಹೋದವನು. ಒಂದು ಚಳುವಳಿಯಾಗಿ ಮುಂದುವರೆಯುವ ಎಲ್ಲ ಅವಕಾಶಗಳೂ ಬೌದ್ಧ ಧರ್ಮದಲ್ಲಿ ಇದ್ದವು. ನಮ್ಮ ಇಂಥ ಆರಾಧನಾ ಸಂಸ್ಕೃತಿಯೇ ಅದಕ್ಕೆ ಅವಕಾಶ ಮಾಡಿಕೊಡಲಿಲ್ಲ. ಬಸವಣ್ಣನ ಪರಿಸ್ಥಿತಿಯನ್ನಂತೂ ಸದ್ಯಕ್ಕೆ ದೇವರೇ ಬಲ್ಲ. ಅವನನ್ನು ಹೊರಗೆ ಬಿಡಲೇಬಾರದೆಂದು ಕಟ್ಟಾಜ್ಞೆಯಾಗಿದೆ. ಅಂಬೇಡ್ಕರ್ ಅವರು ದಲಿತರ ಪರವಾಗಿ ಹೋರಾಡಿದರು. ಅವರೊಳಗಿನ ಆ ಗಟ್ಟಿ ಧ್ವನಿ ಒಟ್ಟು ಭಾರತೀಯ ಸಮಾಜದ ಶೋಷಿತರ ಧ್ವನಿ ಎಂದು ನಾವು ಅರ್ಥೈಸಿಕೊಳ್ಳಲು ಇಂದಿಗೂ ವಿಫಲರಾಗಿದ್ದೇವೆ. ಮೆರವಣಿಗೆ ಸಂಸ್ಕೃತಿಯನ್ನು ಕೊಚ್ಚಿಹಾಕಲು ಪ್ರವಾಹದ ರೀತಿಯಲ್ಲಿ ಬಂದ ಆ ಮನುಷ್ಯನ ಫೋಟೋ ಇಟ್ಟು ನಾವು ಮೆರವಣಿಗೆ ಮಾಡುತ್ತೇವೆ. ಭೋಗದ ನಿರಾಕರಣೆ ಹಾಗೂ ಅಹಿಂಸಾವಾದಿ ಬಾಹುಬಲಿಯ ಸಂದರ್ಭ ಕೂಡ ಇಂಥದ್ದೆ. ಇವರನ್ನೆಲ್ಲ ಪೂಜಾ ಆರಾಧನೆಯಲ್ಲಿ ತೊಡಗಿಸಿದರೆ ಅವರ ಗತಿ ಏನಾಗಬೇಡ! ಯಾವಾಗ ಅವರು ಸ್ಥಾವರವಾಗುತ್ತಾರೋ ಆಗ ಅವರು ಜನತೆಯಿಂದ ದೂರವಾಗುತ್ತಾರೆ. ಇಲ್ಲಿ ಜಂಗಮವನ್ನು ಪ್ರತಿಪಾದಿಸಿದ ಬಸವನ ಕುದುರೆ ಓಡದೇ ನಿಂತು ಲಾಂಛನವಾಗಿ ಬಿಡುತ್ತದೆ. ಕ್ರಿಸ್ತ ಶಿಲುಬೆ ಮಾತ್ರವೇ ಆಗಿ ಉಳಿಯುತ್ತಾನೆ. ಧರ್ಮದ ಅಮಲಿನ ಗದ್ದಲದಲ್ಲಿ ಕಾಲ್ತುಳಿತಕ್ಕೆ ಸಿಕ್ಕ ಅಮಾಯಕರ ಬಗ್ಗೆ ಪೈಗಂಬರನಿಗೆ ಕರುಣೆಯೇ ಇರುವುದಿಲ್ಲ. ಒಂದು ಸಾಮಾನ್ಯ ದಾಯಾದಿ ಮತ್ಸರ ಬಾಹುಬಲಿಗೆ 'ಎಂಥ ಹಾದಿಯನ್ನು ನಿರ್ಮಾಣ ಮಾಡಿತು!' ಎಂಬುದು ಅಭಿಷೇಕದ ಗದ್ದಲದಲ್ಲಿ ನಮ್ಮ ಗಮನಕ್ಕೆ ಬರುವುದೇ ಇಲ್ಲ. ಆರಾಧನೆಯ ಮುಸುಕು ತೆರೆದಾಗ ಮಾತ್ರ ಇವೆಲ್ಲ ನಮಗೆ ಅರ್ಥವಾಗುತ್ತವೆ.

ಹಾಗಾದರೆ ಘನತೆಯ ವ್ಯಕ್ತಿತ್ವಗಳನ್ನು ಜನತೆಗೆ ತಲುಪಿಸುವ ಪರ್ಯಾಯ ಮಾರ್ಗಗಳೇನು? ಅದರ ಬಗ್ಗೆ ನಾವೀಗ ಯೋಚಿಸಬೇಕು. ಒಂದು ಸೀಮಿತ ಚೌಕಟ್ಟು ಹಾಗೂ ಬಾಜಾಬಜಂತ್ರಿ, ವ್ಯಕ್ತಿತ್ವಗಳನ್ನು ಮಸಕಾಗಿಸಿಬಿಡುತ್ತದೆ. ಇಲ್ಲಿ ಆಗಬೇಕಾದದ್ದು ಎಂದರೆ, ಈ ರೀತಿಯ ವ್ಯಕ್ತಿತ್ವಗಳನ್ನು ನಾವು ವರ್ತಮಾನಕ್ಕೆ ಮುಖಾಮುಖಿಯಾಗಿಸಬೇಕು. ಅವರು ಹಾಕಿದ ಪ್ರಶ್ನೆಗಳು ನಮ್ಮನ್ನು ಎದ್ದು ನಿಲ್ಲಿಸಬೇಕು. ಅವರು ಹಿಡಿದ ಹಠ ನಮ್ಮ ಬೆನ್ನ ತಟ್ಟಬೇಕು. ಆರಾಧನಾ ಸಂಸ್ಕೃತಿಯಲ್ಲಿ ಅವರು ದೇವರಾಗಿ ಕಳೆದುಹೋಗಬಾರದೆನ್ನುವುದೇ ನಮ್ಮೆದುರಿಗಿರುವ ಆತಂಕ.

**ಬಾಹುಬಲಿ ಮತ್ತು ಡೋಲಿ:** ಬಾಹುಬಲಿ ನಿಂತ ಜಾಗ ತಲುಪಬೇಕಾದರೆ ಮೆಟ್ಟಿಲುಗಳನ್ನು ಹತ್ತಿ ಹೋಗಬೇಕು. ಅಷ್ಟು ಮೆಟ್ಟಿಲುಗಳನ್ನು ಏರುವುದು ನಿಜವಾಗಿಯೂ ವಯಸ್ಸಾದವರಿಗೆ ಸಾಧ್ಯವಾಗುವುದಿಲ್ಲ. ಅದಕ್ಕಾಗಿ ಅಲ್ಲಿ ಡೋಲಿಯನ್ನು ಉಪಯೋಗಿಸಲಾಗುತ್ತಿದೆ. ಕುರ್ಚಿಯಾಕಾರದ ಡೋಲಿಯ ಮೇಲೆ ಭಕ್ತನನ್ನು ಕೂಡ್ರಿಸಿಕೊಂಡು ನಾಲ್ಕು ಜನ ಹೆಗಲ ಮೇಲೆ ಹೊತ್ತುಕೊಂಡು ಬಾಹುಬಲಿ ನಿಂತ ಗಿರಿಯನ್ನು ತಲುಪಿಸುತ್ತಾರೆ. ಹೀಗೆ ಹೊತ್ತುಕೊಂಡು ಹೋಗುವವರು ಬಡ ಕೂಲಿಯಾಳುಗಳು. ಡೋಲಿಯಲ್ಲಿ ಹೊತ್ತುಕೊಂಡು ಹೋಗಿಬಂದ ಕೂಲಿಯಲ್ಲಿ ಶೇ. ೨೦ರಷ್ಟು ದೇವಸ್ಥಾನಕ್ಕೆ



ಕಾಣಿಕೆ ನೀಡಿ ಉಳಿದಿದ್ದನ್ನು ನಾಲ್ಕೂ ಜನ ಹಂಚಿಕೊಳ್ಳುತ್ತಾರಂತೆ. ಆದರೆ ಈಗ ಹತ್ತುವುದಕ್ಕೆ ಸಾಮರ್ಥ್ಯವಿರುವ ಶ್ರೀಮಂತ ಭಕ್ತರೂ ಈ ಡೋಲಿಯನ್ನು ಉಪಯೋಗಿಸುತ್ತಾರೆ. ವಯಸ್ಸಾದವರಿಗೇನೋ ಇದು ಅನಿವಾರ್ಯ; ಒಂದು ಅರ್ಥದಲ್ಲಿ ನೋಡಿದರೆ ವಯಸ್ಸಾದವರೂ ಕೂಡ ಇದನ್ನು ಉಪಯೋಗ ಮಾಡಬಾರದು. ಒಂದು, ಈ ರೀತಿ ಇಳಿವಯಸ್ಸಿನಲ್ಲಿ ದರ್ಶನ ಮಾಡಬೇಕು ಎನ್ನುವವರು ತಮ್ಮ ಶರೀರ ಗಟ್ಟಿಯಾಗಿದ್ದಾಗ ಒಂದಲ್ಲಾ ಒಂದು ಬಾರಿ ಬೆಟ್ಟ ಏರಿರುತ್ತಾರೆ. ಒಂದು ಬಾರಿಯೂ ಭೇಟಿ ನೀಡದೆ ಇರುವವರಿಗೆ ಬೇಕಿದ್ದರೆ ಇದರಲ್ಲಿ ರಿಯಾಯಿತಿ ಇರಲಿ. ಆದರೆ ಧನ್ಯತೆಯನ್ನು ಅನುಭವಿಸಲು, ನಿಟ್ಟುಸಿರು ಬಿಡುವ ಕೂಲಿಯಾಳುಗಳ ಹೆಗಲಮೇಲೆ ಕುಳಿತು ಪದೇ ಪದೇ ಬೆಟ್ಟ ಹತ್ತಬೇಕಿಲ್ಲ. ಅದನ್ನು ಅನುಭವಿಸಲಿಕ್ಕೆ ಒಂದೇ ಒಂದು ಭೇಟಿ ಮಾತ್ರ ಸಾಕು. ಜೈನಧರ್ಮ ಸಂಕಲ್ಪ [illegible] ಪ್ರತಿಪಾದಿಸುತ್ತದೆ. ಬಾಹುಬಲಿ ಹೇಳಿಕೇಳಿ ಆ ಧರ್ಮದ ಹಾದಿಯಲ್ಲಿ ನಡೆದು ಸಾಧನೆ ಮಾಡಿದವನು. ಅಂಥವನನ್ನು ಭೇಟಿಯಾಗಲು ತೇಕುವ ಬಡಜೀವಗಳು ನಿಟ್ಟುಸಿರು ಬಿಡುತ್ತಾ ಬೆಟ್ಟ ಹತ್ತುತ್ತಿದ್ದರೆ ಮೇಲೆ ಕುಳಿತ ನಮಗೆ ಯಾವ ಬಾಹುಬಲಿ ತಾನೆ ಒಲಿದಾನು ?! ನಿಜವಾಗಿಯೂ ನಾವು ಅಹಿಂಸಾವಾದಿಗಳಾಗಿದ್ದರೆ ಆ ನಿಟ್ಟುಸಿರು, ಬೆವರು, ನಮಗೆ ಕಿರಿಕಿರಿ ಅನ್ನಿಸಬೇಕು. ಹಿಂಸೆ ಅನ್ನಿಸಬೇಕು. ಅಂದಾಗ ಮಾತ್ರ ನಮ್ಮನ್ನು ಆವರಿಸಿದ ಧರ್ಮದ ಯಾತ್ರೆ ಪರಿಪೂರ್ಣವಾಗುತ್ತದೆ.

ಆರಾಧನೆಯ ಕಲ್ಪನೆಯೇ ಹೀಗೆ. ಅದು ಉತ್ತುಂಗಕ್ಕೇರಿದಾಗ ಮನುಷ್ಯ ಯಾವ ಸೂಕ್ಷ್ಮತೆಗಳನ್ನೂ ಗಮನಿಸುವುದಿಲ್ಲ. ಅದರಲ್ಲೂ ಇವತ್ತು ದೇವರು ಮತ್ತು ಧರ್ಮ ನಮ್ಮ ಬದುಕನ್ನು ಮೀರಿ ತಾವೇ ನಿರ್ಣಾಯಕವಾಗಿಬಿಟ್ಟಿವೆ. ಜಗತ್ತಿನಲ್ಲಿಯೇ ಒಂದು ಅಪರೂಪದ ಸಂದೇಶವನ್ನು ನೀಡಿದ, ವರ್ತಮಾನಕ್ಕೆ ತುಂಬ ಅಗತ್ಯವಾಗಿರುವ ಅಹಿಂಸೆಯನ್ನು ಒತ್ತಿಹೇಳುವ ಜೈನಧರ್ಮ ತುಂಬ ಸೂಕ್ಷ್ಮತೆಗಳನ್ನು ಒಳಗೊಂಡಿರುವ ಧರ್ಮ. ಇಲ್ಲಿ ಎಂಥ ಸಣ್ಣ ಸಂಗತಿಯೂ ಮುಖ್ಯವಾಗಬೇಕು. ಎಲ್ಲರೂ ಅದ್ದೂರಿ ಆರಾಧನೆಯಲ್ಲಿ ತೊಡಗಿಸಿ ಕೊಂಡಾಗ 'ಇಂಥ ಸಣ್ಣ ಸಂಗತಿಗಳನ್ನು ಯಾರು ಕೇಳುತ್ತಾರೆ ಬಿಡ್ರಿ' ಎಂದರೆ ಅಂಥವರಿಗೆ ನಿಜವಾಗಿಯೂ ಉತ್ತರ ಹೇಳುವುದು ಕಷ್ಟವೇ.

**ಬಸವರಾಜ ಹೂಗಾರ**
ಕನ್ನಡ ಸಂಸ್ಕೃತಿ ಇಲಾಖೆ, ಒಡೆಯರ್ ಕಲಾಮಂದಿರ,
ವಿ.ವಿ. ನಗರ, ಮಂಡ್ಯ

## ನವಕರ್ನಾಟಕ ಪ್ರಕಾಶನದ ಹೊಸ ಪ್ರಕಟಣೆಗಳು



ಪುಟ : ೨೭೨ ಬೆಲೆ : ರೂ. ೨೦೦



ಪುಟ : ೧೦೪ ಬೆಲೆ : ರೂ. ೮೦



ಪುಟ : ೧೪೪ ಬೆಲೆ : ರೂ. ೧೦೦



ಸ್ಥಳೀಯ ಪುಸ್ತಕದಂಗಡಿಯಲ್ಲಿ ವಿಚಾರಿಸಿ ಇಲ್ಲವೇ
ಅಂಚೆ ವೆಚ್ಚ ರೂ. 20 ಸೇರಿಸಿ ನಮಗೆ ಎಂ.ಒ/ಡಿ.ಡಿ. ಕಳಿಸಿ

ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್
ಎಂಬೆಸಿ ಸೆಂಟರ್, ನಂ. 11, ಕ್ರೆಸೆಂಟ್ ರಸ್ತೆ, ಅಂ. ಪೆ. 5159, ಬೆಂಗಳೂರು - 560 001
ದೂರವಾಣಿ : 22203580,81,82/ 30578020,21,22, ಫ್ಯಾಕ್ಸ್: 30578023
e-mail: navakarnataka@vsnl.com web: www.navakarnatakabooks.com

2007ರ ಫೆಬ್ರವರಿ 17ರಂದು ಲೋಕಾರ್ಪಣೆ






**ಬೀದರ್ ಜಿಲ್ಲೆಯ ತತ್ವಪದಕಾರರು**

*ಡಾ|| ಗುರುಲಿಂಗಪ್ಪ ಧಬಾಲೆ*

**ಪುಟ : viii+೧೨೮** **ಬೆಲೆ : ರೂ. ೪೫**

**ಕನ್ನಡ ಸಾಹಿತ್ಯ ಪರಿಷತ್ತು**, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

ಬೀದರ್ ಜಿಲ್ಲೆ ತತ್ವಪದಗಳ ತವರುಮನೆಯಾಗಿದೆ. ಬೀದರ್ ಜಿಲ್ಲೆಯವರೇ ಆದ ಗುರಲಿಂಗಪ್ಪನವರು ಐದಾರು ವರುಷ ತತ್ವಪದಕಾರರ ಬಗ್ಗೆ ಅಧ್ಯಯನ ಮಾಡಿ ಅವರ ಚರಿತ್ರೆ ಹಾಗೂ ಸಾಹಿತ್ಯವನ್ನು ಸಂಗ್ರಹಿಸಿದ್ದಾರೆ. ಪ್ರಸ್ತುತ ಪುಸ್ತಕದಲ್ಲಿ ೩೦ ಜನ ತತ್ವಪದಕಾರರನ್ನು ಕುರಿತು ವಿವರವಾಗಿ ಹಾಗೂ ಉಳಿದವರ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಬೀದರ್ ಜಿಲ್ಲೆಯ ಐತಿಹಾಸಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ತತ್ವಪದ ಪರಂಪರೆ, ತತ್ವಪದಕಾರರ ಪಟ್ಟಿ, ಜೀವನ ವೃತ್ತಾಂತ, ಸಾಹಿತ್ಯ ಮತ್ತು ಈ ವಿಷಯದ ಓದಿಗೆಂದು ಗ್ರಂಥಗಳ ಪಟ್ಟಿ ಇಲ್ಲಿದೆ. ತತ್ವಪದ ಕುರಿತು ಅಧ್ಯಯನ ಮಾಡಬಯಸುವವರಿಗೆ ಈ ಪುಸ್ತಕ ದಾರಿದೀಪವಾಗಬಲ್ಲುದು.

**ಒಡಕಲು ಬಿಂಬ** ('ಬಿಂಬ' ನಾಟಕದ ಪರಿಷ್ಕೃತ ಆವೃತ್ತಿ)

*ಗಿರೀಶ ಕಾರ್ನಾಡ*

**ಪುಟ : viii+೩೨** **ಬೆಲೆ : ರೂ. ೩೦**

**ಮನೋಹರ ಗ್ರಂಥ ಮಾಲಾ**, ಲಕ್ಷ್ಮೀ ಭವನ, ಸುಭಾಸ ರಸ್ತೆ, ಧಾರವಾಡ - ೫೮೦ ೦೦೧

'ಒಡಕಲು ಬಿಂಬ' ಒಂದು ನವೀನ ರಂಗ ಪ್ರಯೋಗ. ಪಾತ್ರಧಾರಿಗಳು ಇಬ್ಬರೆ. ನಾಯಿಕೆ ಮತ್ತು ಗೋಡೆಗೆ ನೇತುಬಿಟ್ಟ ದೊಡ್ಡ ಟಿ.ವಿ. ಪರದೆಯ ಮೇಲೆ ಮೂಡಿದ ಆಕೆಯದೇ ಬಿಂಬದೊಡನೆ ಸಂಭಾಷಣೆ ಜರುಗುತ್ತದೆ. ಸುಂದರಿಯೂ, ಜಾಣೆಯೂ, ಸೂಕ್ಷ್ಮ ಸಂವೇದನೆ ಹಾಗೂ ಇಂಗ್ಲಿಷ್ ಭಾಷಾ ಪ್ರವೀಣಳಾದ ಯುವತಿಯೊಬ್ಬಳು ಕೆಲವು ವರ್ಷ ತೀವ್ರ ಕಾಯಿಲೆಯಿಂದ ನರಳಿ, ತನ್ನದೇ ಜೀವನ ಕಥೆಯನ್ನು ಕಾದಂಬರಿಯಾಗಿ ರಚಿಸಿ ಕಣ್ಮುಚ್ಚುತ್ತಾಳೆ. ಅವಳ ಪಾಲನೆ, ಆರೈಕೆ ಮಾಡಿದ ಆಕೆಯ ಅಕ್ಕ ಈ ಕಾದಂಬರಿಯನ್ನು ತಾನೇ ರಚಿಸಿದ್ದೆಂದು ಪ್ರಕಟಿಸಿ ಮೇರು ಪ್ರಶಸ್ತಿ ಪಡೆಯುತ್ತಾಳೆ. ತಂಗಿಯ ಜಾಣ್ಮೆ, ರೂಪ, ಲಾವಣ್ಯಗಳನ್ನು ಕಂಡು ಅಸೂಯಾಪರಳಾಗಿದ್ದ ಈಗ ಕೃತಿಚೌರ್ಯ ಮಾಡಿ ಪ್ರಶಸ್ತಿ ಗೆದ್ದ ಅಕ್ಕನ ಅಂತರಂಗದಲ್ಲಿ ನಡೆಯುವ ತುಮುಲ, ಗುದ್ದಾಟ, ಪಾಪಪ್ರಜ್ಞೆ ಮತ್ತು ಅದನ್ನು ಮೆಟ್ಟಿ ತಾನೇ ಸರಿಯೆಂದು ನಡೆಯುವ ಅಹಂ, ಇದು ನಾಟಕದ ವಸ್ತು.



**ಮದುವೆಯ ಆಲ್ಬಮ್** (ನಾಟಕ) *ಗಿರೀಶ ಕಾರ್ನಾಡ*

**ಪುಟ : xvi+೮೪** **ಬೆಲೆ : ರೂ. ೬೦**

**ಮನೋಹರ ಗ್ರಂಥ ಮಾಲಾ**, ಲಕ್ಷ್ಮೀ ಭವನ, ಸುಭಾಸ ರಸ್ತೆ, ಧಾರವಾಡ - ೫೮೦ ೦೦೧

ಪುಸ್ತಕದ ಆರಂಭದಲ್ಲಿ ಶ್ರೀ ಜಿ. ಬಿ. ಜೋಶಿಯವರ ಕುರಿತು ಕಾರ್ನಾಡರ ಲೇಖನವಿದೆ. ಮನೋಹರ ಗ್ರಂಥ ಮಾಲೆಯನ್ನು ಕಟ್ಟಿ ಬೆಳೆಸಿದ ಜಿ. ಬಿ. ಪ್ರಕಾಶನ ಸಂಸ್ಥೆಯನ್ನು ಕಟ್ಟುವಾಗಿನ ಪಡಿಪಾಟಲು, ಕನ್ನಡ ಸಾಹಿತ್ಯದ ದಿಗ್ಗಜರನೇಕರ ಪರಿಚಯ ಈ ಲೇಖನ ಮಾಡಿಕೊಡುತ್ತದೆ. ಕಾರ್ನಾಡರು ಮತ್ತು ಹಿರಿಯ ಲೇಖಕರ ಒಡನಾಟದ ಸ್ವಾರಸ್ಯ ವರ್ಣನೆ ಇಲ್ಲಿದೆ. ಇನ್ನು 'ಮದುವೆಯ ಆಲ್ಬಮ್' ಕಾರ್ನಾಡರೇ ಹೇಳಿಕೊಂಡಂತೆ ಒಂದು ಸಮಕಾಲೀನ ನಾಟಕ. ವಿದೇಶದಲ್ಲಿ ನೆಲೆಸಿದ ಮದುಮಗ, ತನ್ನದೇ ಮದುವೆಗೆಂದೂ ಬಿಡುವು ಮಾಡಿಕೊಳ್ಳಲಾಗದ ವೃತ್ತಿಜೀವನ, ತಮ್ಮ ಸಂಪ್ರದಾಯವನ್ನು ಬಿಡಲೊಲ್ಲದ ಹಿರಿಯರು, ತರಾತುರಿಯ ಮದುವೆ, ಪಾಸ್‌ಪೋರ್ಟ್ - ವೀಸಾಗಾಗಿ ಪರದಾಟ, ವಿದೇಶಗಳಿಗೆ ಹಾರಿದ ಮಕ್ಕಳನ್ನು ನೆನೆಯುತ್ತಾ ಮರುಗುವ ಒಬ್ಬಂಟಿಗರಾದ ಪಾಲಕರು, ಅತಿ ಹೆಚ್ಚು ಸಂಬಳ, ಸುಖ, ಸೌಲಭ್ಯಗಳನ್ನು ಹೊಂದಿಯೂ ಅತೃಪ್ತಿ ಅನುಭವಿಸುವ ಯುವಕ ಯುವತಿಯರು ವಿವಾಹವಾದಷ್ಟೇ ಬೇಗ ಹಳಸಿಬಿಡುವ ಬಾಳುವೆ, ಸೆಕ್ಸ್, ಕ್ರೌರ್ಯ ತುಂಬಿಕೊಂಡ ಕಾದಂಬರಿ, ಸಿನೆಮಾಗಳ ಮೋಡಿಗೆ ಸಿಲುಕಿ ಹಾಳಾಗುವ ಮಕ್ಕಳು. ಹೀಗೆ ಮಧ್ಯಮವರ್ಗದವರ ಪರದಾಟಗಳನ್ನು ತೆರೆದಿಡುವ ಪ್ರಯತ್ನ ಇಲ್ಲಿದೆ.



**ನಿರುಪಾಧಿ** (ಅಭಿನಂದನ ಗ್ರಂಥ)

*ಪ್ರ.ಸಂ : ಡಾ|| ಬಿ. ಕೆ. ಹಿರೇಮಠ*

**ಪುಟ : xvi+೫೦೦** **ಬೆಲೆ : ರೂ. ೫೦೦**

**ಮರೆಗುದ್ದಿಯ ಪೂಜ್ಯ ಶ್ರೀ ನಿರುಪಾಧೀಶ ಮಹಾಸ್ವಾಮಿಗಳ ಅಭಿನಂದನ ಸಮಿತಿ**, ಮುಧೋಳ, ಬಾಗಲಕೋಟ ಜಿಲ್ಲೆ

ಶ್ರೀ ಗುರುಪಾದಸ್ವಾಮಿಗಳು ಬಾಗಲಕೋಟೆ ಜಿಲ್ಲೆಗೆ ಸೇರಿದ ಮರೆಗುದ್ದಿಯ ಶ್ರೀ ಅಡವಿ ಸಿದ್ಧೇಶ್ವರ ಮಠದ ಪಂಚಮ ಪೀಠಾಧೀಶರು. ಇವರಿಂದ ಸ್ಥಾಪಿಸಲ್ಪಟ್ಟ ಶ್ರೀಮಠದ ಶಾಖೆಗಳು ಅನೇಕ. ಅವರಿಗೆ ಸಲ್ಲಿಸಿರುವ ಈ ಅಭಿನಂದನಾ ಗ್ರಂಥದಲ್ಲಿ ಅಡವಿ ಸಿದ್ಧೇಶ್ವರ ಮಠ ಮತ್ತು ಶ್ರೀಗಳ ಸಂಕ್ಷಿಪ್ತ ಆತ್ಮಚರಿತ್ರೆ, ಆತ್ಮೀಯರು ಅವರ ಕುರಿತು ಬರೆದ ಲೇಖನಗಳು, ಶ್ರೀಗಳ ಸಂಪೂರ್ಣ ಸಾಹಿತ್ಯ ದರ್ಶನ, ಅವರ ಸಾಹಿತ್ಯ ವಿಮರ್ಶೆ ಇದೆ. ಗ್ರಂಥದ ರೂಪು-ರೇಷೆ, ಮುದ್ರಣ, ಛಾಯಾಚಿತ್ರಗಳು ಅಂದವಾಗಿ ಮೂಡಿಬಂದಿವೆ. ಪ್ರತಿಯೊಂದು ಲೇಖನವೂ ಅತ್ಯಂತ ಶ್ರದ್ಧೆಯಿಂದ ರಚಿಸಿದ್ದಾಗಿದೆ. ಗ್ರಂಥದ ತಯಾರಿಕೆಯ ಅಚ್ಚುಕಟ್ಟು, ಇದರ ಹಿಂದಿರುವ ಶ್ರಮ ಅನುಕರಣೀಯ.



**ವರ್ತಮಾನ** (ಸಾಮಾಜಿಕ ಕಾದಂಬರಿ)

*ಬಿ. ಪಿ. ಶಿವಾನಂದ ರಾವ್*

**ಪುಟ : ix + ೧೧೭** **ಬೆಲೆ : ರೂ. ೮೫**

**ಸೃಷ್ಟಿ ಪಬ್ಲಿಕೇಷನ್ಸ್**, ೨/೨, ೧ನೇ ಕ್ರಾಸ್, ೧ನೇ ಮುಖ್ಯರಸ್ತೆ, ಗೋವಿಂದಪ್ಪ ಲೇಔಟ್, ನಾಗಶೆಟ್ಟಿಹಳ್ಳಿ, ಬೆಂ - ೯೪

ಕನ್ನಡಪ್ರಭ ಪತ್ರಿಕೆಯಲ್ಲಿ ದೈನಿಕ ಧಾರಾವಾಹಿಯಾಗಿ ಪ್ರಕಟಗೊಂಡ ಕಾದಂಬರಿಯ ಪುಸ್ತಕ ರೂಪವಿದು. ಇದು ಬಿ. ಪಿ. ಶಿವಾನಂದರಾವ್ ಅವರ ಇಪ್ಪತ್ತೈದನೆಯ ಕೃತಿ. ತನ್ನ ಊರಿನ ಸರ್ವತೋಮುಖ ಏಳ್ಗೆಗಾಗಿ ಹಂಬಲಿಸುವ ಪ್ರಬುದ್ಧ ಚಿಂತನೆಯ ಯುವಕನ ಕನಸು ಹೆಜ್ಜೆ ಹೆಜ್ಜೆಗೆ ಸ್ವಾರ್ಥಿಗಳೆದುರು ಕುಸಿದು ಕೊಚ್ಚಿಹೋಗುವ ದುರ್ಪ್ರಸಂಗದ ಚಿತ್ರಣ ಇಲ್ಲಿದೆ. ಮಾನವೀಯ ಮೌಲ್ಯಗಳ ಕುಸಿತವನ್ನು ವ್ಯವಸ್ಥಿತವಾಗಿ ನಮ್ಮವರೇ ಹೇಗೆಲ್ಲ ವಾಸ್ತವದಲ್ಲಿ ನಡೆಸುತ್ತಾರೆ ಎಂಬುದರ ದುರಂತ ಚಿತ್ರಣ ಕಥಾಹಂದರದ ಪ್ರಧಾನ ವಸ್ತು. ಇಷ್ಟಾದರೂ ಇದು ಸುಖಾಂತ್ಯ ಕಾದಂಬರಿ. ಭಾಷಾ ಪ್ರೌಢಿಮೆ, ನಿಸರ್ಗದ ಪರಿಚಯ, ಕಾಳಜಿಯುಳ್ಳ ದೃಷ್ಟಿಕೋನ, ಗಟ್ಟಿ ಕಥಾವಸ್ತು, ಓದುಗರಿಗೆ ಸ್ಪಂದಿಸುವ ರಂಜನೀಯ ಶೈಲಿಯನ್ನು ಈ ಕಾದಂಬರಿಯಲ್ಲಿ ಕಾಣಬಹುದು.



**ಭ್ರಮೆ ಮತ್ತು ವಾಸ್ತವ** (ಅಂಕಣ ಬರಹ)

*ಗೋಪಾಲ ಬಿ. ಶೆಟ್ಟಿ*

**ಪುಟ : vi+೨೦೨** **ಬೆಲೆ : ರೂ. ೧೦೦**

**ನೂತನ ಪಬ್ಲಿಕೇಶನ್ಸ್**, 'ಆರಾಧನಾ' ಇಂದ್ರಾಳಿ, ೩ನೇ ಅಡ್ಡರಸ್ತೆ, ಕುಂಜಿಬೆಟ್ಟು, ಉಡುಪಿ - ೫೭೬ ೧೦೨

ಶಿಕ್ಷಕ, ಪತ್ರಕರ್ತ, ಬರಹಗಾರ, ನಾಸ್ತಿಕ, ವಿಚಾರವಾದಿಯೆಂದು ಪರಿಚಿತರಾಗಿರುವ ಗೋಪಾಲ ಬಿ. ಶೆಟ್ಟಿಯವರು ಬರೆದು, 'ವಾರ್ತಾ ಭಾರತಿ' ದಿನಪತ್ರಿಕೆಯಲ್ಲಿ ಪ್ರಕಟವಾದ ಅಂಕಣಗಳ ಸಂಕಲನ. ಇಲ್ಲಿಯ ಅಂಕಣಗಳು ಭಗವದ್ಗೀತೆ, ದಶಾವತಾರ, ಮನು ಮತ್ತು ಮಾಂಸ, ಮದಿರೆಯ ಒಗಟು – ಈ ನಾಲ್ಕು ವಿಷಯಗಳ ಕುರಿತದ್ದಾಗಿದೆ. ಪ್ರತಿಯೊಂದು ಅಂಕಣವೂ ವೈಚಾರಿಕವಾಗಿ ಮತ್ತು ವಸ್ತುನಿಷ್ಠವಾಗಿ ವಿಶ್ಲೇಷಿಸಿ ತಾರ್ಕಿಕವಾಗಿ ಮಂಡಿಸಿದವು. ಆಧ್ಯಾತ್ಮಿಕ, ಧಾರ್ಮಿಕ, ಮತೀಯ ಅಂಧಶ್ರದ್ಧೆ, ಮೂಢನಂಬಿಕೆಗಳಿಗೆ ಸಿಲುಕಿ ನಲುಗುತ್ತಿರುವ ಇಂದಿನ ಸಮಾಜದಲ್ಲಿನ ಯುವಪೀಳಿಗೆಗೆ ವೇದ, ಉಪನಿಷತ್ತು, ರಾಮಾಯಣ, ಮಹಾಭಾರತ, ಭಗವದ್ಗೀತೆ ಮತ್ತು ಪುರಾಣ ಕಥೆಗಳಲ್ಲೇನಿದೆ, ಸತ್ಯವೆಷ್ಟು, ಪ್ರತ್ಯಕ್ಷವಾಗಿ ನಡೆದದ್ದೇನೆಂದು ಅರಿವು ಮೂಡಿಸುವ ಅಂಕಣಗಳಿವು. ಈ ಪುಸ್ತಕವನ್ನೋದುವಾಗ ರಾಹುಲ ಸಾಂಕೃತ್ಯಾಯನರ 'ವೋಲ್ಗಾ ಗಂಗಾ' ಮತ್ತು ಎ. ಎನ್. ಮೂರ್ತಿರಾಯರ 'ದೇವರು' ಪುಸ್ತಕದಲ್ಲಿನ ಬರಹ ನೆನಪಾಯಿತು. ಲೇಖಕರ ಬರವಣಿಗೆಯ ಶೈಲಿ ಅತ್ಯಂತ ನೇರ ಮತ್ತು ತೀಕ್ಷ್ಣವಾದದ್ದು.

– ಸಹನ, ನಂ. ೩, 'ಕೆರೆಮನೆ' ಅಪಾರ್ಟ್‌ಮೆಂಟ್,
'ದೇವರಕೆರೆ' ಎಕ್ಸ್‌ಟೆನ್ಶನ್, ಇಸ್ರೋ ಲೇಔಟ್, ಬೆಂಗಳೂರು - ೫೬೦ ೦೭೮

# ಸಾವಯವ ಕೃಷಿಯ ಹಿಂದು–ಮುಂದು

ಹೆಚ್. ಸಿದ್ಧಲಿಂಗಯ್ಯ



**ಮೂ**ರು ದಶಕಗಳಿಗೂ ಹೆಚ್ಚುಕಾಲ ನಮ್ಮನ್ನು ತನ್ನ ಮೋಹದ ಬಲೆಯಲ್ಲಿ ಸಿಕ್ಕಿಸಿಕೊಂಡಿದ್ದ ಹಸಿರುಕ್ರಾಂತಿ ಮೊದಮೊದಲು ನಮ್ಮ ರಾಷ್ಟ್ರದ ಆಹಾರ ಸಮೃದ್ಧಿಗೆ ಕಾರಣವಾಗಿದ್ದುದೇನೋ ನಿಜ. ಆದರೆ ಕೆಲವು ಕಾರಣಗಳಿಂದ ಇತ್ತೀಚೆಗೆ ಅದು ಶಾಪವಾಗಿ ಪರಿಣಮಿಸಿದೆ. ಆ ಕಾರಣಗಳು ಇವು –

೧. ರಾಸಾಯನಿಕ ಗೊಬ್ಬರಗಳ ಅತಿ ಬಳಕೆಯಿಂದ ಕೃಷಿಭೂಮಿ ಬರಡಾಗಿ ತನ್ನ ಸಹಜ ಉತ್ಪಾದನಾ ಸಾಮರ್ಥ್ಯವನ್ನೇ ಕಳೆದುಕೊಂಡಿರುವುದು.

೨. ಮಾರಕ ಕೀಟನಾಶಕಗಳ ಮತ್ತು ಕಳೆನಾಶಕಗಳ ವಿವೇಚನಾರಹಿತ ಬಳಕೆಯಿಂದಾಗಿ ಇಂದಿನ ಕೃಷಿ ಉತ್ಪಾದನೆಯೆಲ್ಲ ವಿಷಮಯವಾಗಿರುವುದು.

೩. ಅಧಿಕ ಇಳುವರಿ ಬೀಜೋತ್ಪಾದನೆ ಖಾಸಗಿ ವಿದೇಶಿ ಕಂಪನಿಗಳ ಸರ್ವಸ್ವಾಮ್ಯಕ್ಕೊಳಪಟ್ಟು ಅವುಗಳ ಬೆಲೆ ಸಾಮಾನ್ಯ ಕೃಷಿಕರ ಕೈಗೆಟುಕದಂತಾಗಿರುವುದು.

ಈ ಕಾರಣಗಳು ಕಾಲ್ಪನಿಕವೂ ಅಲ್ಲ, ಉತ್ಪ್ರೇಕ್ಷಿತವೂ ಅಲ್ಲ, ವಾಸ್ತವಿಕವಾದುವು.

ಈ ಹಿನ್ನೆಲೆಯಲ್ಲಿ ರಾಸಾಯನಿಕ ಕೃಷಿ ಸರ್ವಮಾರಕ; ಸಾವಯವ ಕೃಷಿ ಸರ್ವಸುರಕ್ಷಕ ಎಂಬ ಕೂಗೆದ್ದಿದೆ. ನಾವು ಮತ್ತು ನಮ್ಮ ಭೂಮಿ ಜೀವಂತವಾಗಿ ಉಳಿಯಬೇಕಾದರೆ ಸಾವಯವ ಕೃಷಿಯೊಂದನ್ನೇ ಅವಲಂಬಿಸಬೇಕು ಎಂಬ ಪ್ರಚಾರ ಪ್ರಾರಂಭವಾಗಿದೆ. ಸಾವಯವ ಕೃಷಿ ನಮಗೆ ಹೊಸದೇನೂ ಅಲ್ಲ. ಅದು ನಮ್ಮ ಪಾರಂಪರಿಕ ಕೃಷಿಪದ್ಧತಿ. ಅದು ಪ್ರಚಲಿತವಿದ್ದ ಕಾಲದಲ್ಲಿ ಕೃಷಿಭೂಮಿಯ ವಿಸ್ತೀರ್ಣ ಹೆಚ್ಚಿರಲಿಲ್ಲ. ಕೃಷಿಭೂಮಿಯಲ್ಲಿ ದುಡಿಯುತ್ತಿದ್ದವರ ಸಂಖ್ಯೆ ಹೆಚ್ಚಾಗಿತ್ತು. ಅಗತ್ಯವಾಗಿದ್ದ ತಿಪ್ಪೆಗೊಬ್ಬರವನ್ನು ಉತ್ಪಾದಿಸುತ್ತಿದ್ದ ಜಾನುವಾರುಗಳ ಸಂಖ್ಯೆ ಹೆಚ್ಚಾಗಿದ್ದುವು. ಅಂದಿನ ಮಿತ ಜನಸಮೂಹಕ್ಕೆಲ್ಲ ಸಾಕಾಗುವಷ್ಟು ಪೌಷ್ಟಿಕ ಆಹಾರವನ್ನು ಉತ್ಪಾದಿಸುವ ಸಾಮರ್ಥ್ಯವನ್ನು ಹೊಂದಿತ್ತು. ಇಂದು ಜನಸಂಖ್ಯೆ ಅಕ್ಷಯವಾಗಿದೆ. ಅಂದು ಸಾವಿರಾರು ಎಕರೆಗಳಷ್ಟಿದ್ದ ಕೃಷಿಭೂಮಿ ಇಂದು ಲಕ್ಷಾಂತರ ಎಕರೆಗಳಷ್ಟಾಗಿದೆ. ಆದರೆ ಲಕ್ಷಾಂತರ ಎಕರೆಗಳಿಗಾಗುವಷ್ಟು ತಿಪ್ಪೆಗೊಬ್ಬರ ಇಂದು ಲಭ್ಯವಿಲ್ಲ. ಏಕೆಂದರೆ ಕೃಷಿಭೂಮಿಯ ಹೆಚ್ಚಳಕ್ಕೆ ಅನುಗುಣವಾಗಿ ಜಾನುವಾರುಗಳ ಸಂಖ್ಯೆಯಲ್ಲಿ ಹೆಚ್ಚಳವಾಗಿಲ್ಲ. ಹೆಚ್ಚು ಉತ್ಪಾದಿಸುವ ಶಕ್ತಿ ಸಾವಯವ ಕೃಷಿಯಲ್ಲಿ ಬೆಳೆಸುವ ನಾಟಿತಳಿಯ ಬೀಜಗಳಿಗಿಲ್ಲ. ಆದ್ದರಿಂದ ಹೆಚ್ಚು ಇಳುವರಿ ಕೊಡುವ ಸಾಮರ್ಥ್ಯವಿಲ್ಲದ ನಾಟಿ ತಳಿಯ ಬೀಜಗಳನ್ನು ಲಕ್ಷಾಂತರ ಎಕರೆಗಳಲ್ಲಿ ಬಿತ್ತಿ ಸಾವಯವ ಕೃಷಿ ಮಾಡಿ ಇಂದಿನ ಅಪಾರ ಜನಸಂಖ್ಯೆಗಾಗುವಷ್ಟು ಆಹಾರವನ್ನು ಉತ್ಪಾದಿಸುವುದು ಅಸಂಭವ.

ನಾಟಿತಳಿಯ ಬೀಜಗಳಿಗೆ ಬದಲಾಗಿ ಹೈಬ್ರಿಡ್ ಬೀಜಗಳನ್ನು ಸಾವಯವ ಕೃಷಿಗೆ ಅಳವಡಿಸುವುದು ಇನ್ನೂ ಕಷ್ಟ. ಸಾವಯವ ಗೊಬ್ಬರವನ್ನೇ ಬಳಸಿ ಅವುಗಳಿಂದ ಬೆಳೆ ತೆಗೆಯಬೇಕಾದರೆ ಒಂದು ಎಕರೆಗೆ ಟನ್‌ಗಟ್ಟಲೆ ಸಾವಯವ ಗೊಬ್ಬರವನ್ನು ಸುರಿಯಬೇಕಾಗುತ್ತದೆ. ಏಕೆಂದರೆ ಯಾವುದೇ ಹೈಬ್ರಿಡ್ ಬೀಜದ ಬೆಳೆ ಕನಿಷ್ಠ ೪೦-೩೦-೩೦ರ ಪ್ರಮಾಣದ ಸತ್ವವನ್ನು ಬಯಸುತ್ತದೆ (ಅಂದರೆ ಸಾರಜನಕ ಶೇಕಡ ೪೦, ರಂಜಕ ೩೦, ಪೊಟಾಷ್ ೩೦). ದನದ ಗೊಬ್ಬರ ಸೇರಿದಂತೆ ಯಾವ ಸಾವಯವ ಗೊಬ್ಬರದಲ್ಲೂ ಮೇಲ್ಕಂಡ ಸತ್ವಗಳ ಪ್ರಮಾಣ ಶೇಕಡ ೧ರಿಂದ ೧.೫ಕ್ಕಿಂತ ಹೆಚ್ಚಿರುವುದಿಲ್ಲ. ಅಷ್ಟು ಕಡಿಮೆ ಸತ್ವದ ಗೊಬ್ಬರವನ್ನು ಶೇಕಡ ೪೦-೩೦-೩೦ಕ್ಕೆ ಹೊಂದಿಸಬೇಕಾದರೆ ಅಗಾಧ ಪ್ರಮಾಣದ ಸಾವಯವ ಗೊಬ್ಬರವನ್ನು ಒಂದು ಎಕರೆಗೆ ಸುರಿಯಬೇಕಾಗುತ್ತದೆ. ದನದ ಗೊಬ್ಬರ ಅಷ್ಟು ಅಗಾಧ ಪ್ರಮಾಣದಲ್ಲಿ ದೊರೆಯುವುದಿಲ್ಲ. ದೊರೆಯುವ ಅಷ್ಟಿಷ್ಟು ಗೊಬ್ಬರಕ್ಕೂ ದುಬಾರಿ ಬೆಲೆ ತೆರಬೇಕು. ಹಾಗಾಗಿ ಮಾರುಕಟ್ಟೆಯಲ್ಲಿ ದೊರೆಯುವ ಎರೆಹುಳುವಿನ ಗೊಬ್ಬರ ಮುಂತಾದ ಕೃತಕ ಸಾವಯವ ಗೊಬ್ಬರಗಳನ್ನೇ ಬಳಸಬೇಕಾಗುತ್ತದೆ. ಯಾವುದೇ ಕೃತಕ ಸಾವಯವ ಗೊಬ್ಬರದ ಬೆಲೆ ಟನ್ನಿಗೆ ೪ರಿಂದ ೫ ಸಾವಿರ ರೂಪಾಯಿಗಳಷ್ಟಿದೆ. ಎರೆಹುಳುವಿನ ಗೊಬ್ಬರವನ್ನು ರೈತರೇ ಉತ್ಪಾದಿಸಿಕೊಳ್ಳಬಹುದೆಂದು ಕೆಲವರು ಹೇಳುತ್ತಾರೆ. ಆದರೆ ಅದರ ಉತ್ಪಾದನೆಗೆ ಅಗತ್ಯವಾದ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಿಕೊಳ್ಳುವುದು ಎಲ್ಲರಿಗೂ ಸಾಧ್ಯವಾಗುವುದಿಲ್ಲ. ಅಲ್ಲದೆ ಒಂದೆರಡು ಎಕರೆಗಳಿಗಾಗುವಷ್ಟನ್ನು ಉತ್ಪಾದಿಸಿಕೊಳ್ಳಬಹುದೇ ಹೊರತು ಹಲವಾರು ಎಕರೆಗಳಿಗಾಗುವಷ್ಟನ್ನು ಉತ್ಪಾದಿಸಿಕೊಳ್ಳಲಾಗುವುದಿಲ್ಲ. ಹಾಗೆಯೇ ಹಸಿರುಗೊಬ್ಬರದ ಉತ್ಪಾದನೆಯೂ ಎಲ್ಲರಿಗೂ ಸಾಧ್ಯವಾಗುವುದಿಲ್ಲ.

ಮೇಲಾಗಿ ಹೈಬ್ರಿಡ್ ಬೀಜಗಳ ಬೆಳೆಗೆ ಕೀಟನಾಶಕಗಳನ್ನು ಸಿಂಪಡಿಸಲೇಬೇಕು. ಅಂಗಡಿಗಳಲ್ಲಿ ದೊರೆಯುವ ನೀಮ್‌ಗೋಲ್ ಮುಂತಾದ ಸಾವಯವ ಕೀಟನಾಶಕಗಳು ರಾಸಾಯನಿಕ ಕೀಟನಾಶಕಗಳಿಗಿಂತ ದುಬಾರಿ. ಮನೆಯಲ್ಲೇ ತಯಾರಿಸಿಕೊಳ್ಳಬಹುದಾದ ಪಂಚಗವ್ಯ ಮುಂತಾದ ಸಾವಯವ ಕೀಟನಾಶಕಗಳು ಇನ್ನೂ ದುಬಾರಿಯಾಗುತ್ತವೆ. ಇದನ್ನೆಲ್ಲ ಹೇಗೋ ನಿಭಾಯಿಸಿದರೂ ಹೈಬ್ರಿಡ್ ಬೀಜಗಳ ಬೆಳೆಗಳು ರಾಸಾಯನಿಕ ಗೊಬ್ಬರ ಹಾಗೂ ಕೀಟನಾಶಕಗಳಿಗೆ ಸ್ಪಂದಿಸಿದಂತೆ ಸಾವಯವ ಗೊಬ್ಬರ ಹಾಗೂ ಕೀಟನಾಶಕಗಳಿಗೆ ಸ್ಪಂದಿಸುವುದಿಲ್ಲ. ಆದ್ದರಿಂದ ಸಾವಯವ ಕೃಷಿ ರಾಸಾಯನಿಕ ಕೃಷಿಗಿಂತ ದುಪ್ಪಟ್ಟು ಮುಪ್ಪಟ್ಟು ದುಬಾರಿಯಾಗುವುದಲ್ಲದೆ ಇಳುವರಿಯ ಮೇಲೂ ಪ್ರತಿಕೂಲ ಪರಿಣಾಮ ಬೀರುತ್ತದೆ. ಆದರೂ 'ಸಾವಯವ ಕೃಷಿ ಮಾಡಿ ಅವರು ಅಷ್ಟು ಬೆಳೆದರು ಇವರು ಇಷ್ಟು ಬೆಳೆದರು' ಎಂಬ ಸುದ್ದಿಗಳು ವೃತ್ತಪತ್ರಿಕೆಗಳ ಕೃಷಿ ಪುರವಣಿಗಳಲ್ಲಿ ಪ್ರಕಟ

---

**ಇಂದು ಸಾವಯವ ಕೃಷಿ ಪ್ರಚಾರ ಒಂದು ಆಂದೋಲನದಂತೆ ನಡೆಯುತ್ತಿದೆ. ಕೇಂದ್ರ ಸರ್ಕಾರವೂ ರಾಜ್ಯ ಸರ್ಕಾರಗಳೂ ಕೆಲವು ಸಂಘಟನೆಗಳೂ ಆ ಪ್ರಚಾರದಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡಿವೆ. ಇದೆಲ್ಲದರ ಹಿಂದೆ ಶ್ರೀಮಂತ ರಾಷ್ಟ್ರಗಳ ಪರೋಕ್ಷ ಕೈವಾಡವಿದೆ ಎಂಬ ಆರೋಪವೂ ಕೇಳಿಬರುತ್ತಿದೆ. ಆ ಆರೋಪದಲ್ಲಿ ಹುರುಳಿದ್ದರೂ ಇರಬಹುದು. ಏಕೆಂದರೆ ಹಿಂದೊಮ್ಮೆ ಶ್ರೀಮಂತ ರಾಷ್ಟ್ರಗಳ ಒತ್ತಡಕ್ಕೆ ಮಣಿದು ಬೌದ್ಧಿಕಸ್ವಾಮ್ಯ ಕಾನೂನಿನ ತಿದ್ದುಪಡಿ ಬೀಜ ಕಾಯ್ದೆಯ ಅನುಮೋದನೆ ಮುಂತಾದ ಕ್ರಮಗಳನ್ನು ಕೈಗೊಂಡ ಭಾರತ, ಇತ್ತೀಚೆಗೆ ಅಂತರರಾಷ್ಟ್ರೀಯ ಸಭೆಗಳಲ್ಲಿ ಸ್ವಾವಲಂಬನೆಯ ಆತ್ಮಸ್ಥೈರ್ಯದಿಂದ ಸೆಟೆದುನಿಂತು, ತನ್ನ ಪ್ರಸ್ತಾವಗಳನ್ನು ಆ ರಾಷ್ಟ್ರಗಳ ಮೇಲೆ ಹೇರುವಷ್ಟು ಸಾಮರ್ಥ್ಯವನ್ನು ಪ್ರದರ್ಶಿಸುತ್ತಿದೆ.**

ವಾಗುತ್ತಲೇ ಇರುತ್ತವೆ. ಅಂಥವರಲ್ಲಿ ಕೆಲವರು ಕೃಷಿ ಪಂಡಿತ ಮುಂತಾದ ಪ್ರಶಸ್ತಿಗಳಿಗೂ ಭಾಜನರಾಗಿದ್ದಾರೆ. ಅವರ ಸಾವಯವ ಕೃಷಿ ಪರಿಮಿತ ಪ್ರಮಾಣದ ಕೃಷಿಭೂಮಿಗೆ ಸೀಮಿತವಾಗಿರುತ್ತದೆಯೇ ಹೊರತು ವಿಶಾಲ ಕೃಷಿಭೂಮಿಗೆ ವ್ಯಾಪಿಸಿರುವುದಿಲ್ಲ. ಆದ್ದರಿಂದ ಸಾವಯವ ಕೃಷಿ ಪ್ರದರ್ಶನ ತಾಕುಗಳಿಗೆ (ಎಕ್ಸಿಬಿಷನ್ ಪ್ಲಾಟ್ಸ್) ಹೊಂದುತ್ತದೆಯೇ ಹೊರತು ಲಕ್ಷಾಂತರ ಎಕರೆಗಳಷ್ಟು ವಿಸ್ತೀರ್ಣದ ಕೃಷಿಭೂಮಿಗೆ ಹೊಂದುವುದಿಲ್ಲ. ಈ ಎಲ್ಲ ಕಾರಣಗಳಿಂದ ಸಾವಯವ ಕೃಷಿ ಉತ್ತಮ ಗುಣಮಟ್ಟದ ಪೌಷ್ಟಿಕ ಆಹಾರೋತ್ಪಾದನೆಗೆ ನೆರವಾಗಬಲ್ಲುದಾದರೂ ರಾಷ್ಟ್ರದ ಆಹಾರೋತ್ಪಾದನೆಯನ್ನು ಗಣನೀಯ ಪ್ರಮಾಣದಲ್ಲಿ ಕುಂಠಿತ ಗೊಳಿಸಿ ಆಹಾರ ಸ್ವಾವಲಂಬಿ ಭಾರತವನ್ನು ಮತ್ತೊಮ್ಮೆ ಆಹಾರಪರಾವಲಂಬನೆಯ ಅಂಚಿಗೆ ತಂದುನಿಲ್ಲಿಸುತ್ತದೆ.

ಪರಿಸ್ಥಿತಿ ಹೀಗಿದ್ದರೂ ಇಂದು ಸಾವಯವ ಕೃಷಿ ಪ್ರಚಾರ ಒಂದು ಆಂದೋಲನದಂತೆ ನಡೆಯುತ್ತಿದೆ. ಕೇಂದ್ರ ಸರ್ಕಾರವೂ ರಾಜ್ಯ ಸರ್ಕಾರಗಳೂ ಕೆಲವು ಸಂಘಟನೆಗಳೂ ಆ ಪ್ರಚಾರದಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡಿವೆ. ಇದೆಲ್ಲದರ ಹಿಂದೆ ಶ್ರೀಮಂತ ರಾಷ್ಟ್ರಗಳ ಪರೋಕ್ಷ ಕೈವಾಡವಿದೆ ಎಂಬ ಆರೋಪವೂ ಕೇಳಿಬರುತ್ತಿದೆ. ಆ ಆರೋಪದಲ್ಲಿ ಹುರುಳಿದ್ದರೂ ಇರಬಹುದು. ಏಕೆಂದರೆ ಹಿಂದೊಮ್ಮೆ ಶ್ರೀಮಂತ ರಾಷ್ಟ್ರಗಳ ಒತ್ತಡಕ್ಕೆ ಮಣಿದು ಬೌದ್ಧಿಕಸ್ವಾಮ್ಯ ಕಾನೂನಿನ ತಿದ್ದುಪಡಿ ಬೀಜ ಕಾಯ್ದೆಯ ಅನುಮೋದನೆ ಮುಂತಾದ ಕ್ರಮಗಳನ್ನು ಕೈಗೊಂಡ ಭಾರತ, ಇತ್ತೀಚೆಗೆ ಅಂತರರಾಷ್ಟ್ರೀಯ ಸಭೆಗಳಲ್ಲಿ ಸ್ವಾವಲಂಬನೆಯ ಆತ್ಮಸ್ಥೈರ್ಯದಿಂದ ಸೆಟೆದುನಿಂತು, ತನ್ನ ಪ್ರಸ್ತಾವಗಳನ್ನು ಆ ರಾಷ್ಟ್ರಗಳ ಮೇಲೆ ಹೇರುವಷ್ಟು ಸಾಮರ್ಥ್ಯವನ್ನು ಪ್ರದರ್ಶಿಸುತ್ತಿದೆ. ಮೊನ್ನೆ ಮೊನ್ನೆ ವಿಶ್ವವಾಣಿಜ್ಯ ಒಪ್ಪಂದವನ್ನು ಕುರಿತು ಚರ್ಚಿಸಲು ಏರ್ಪಡಿಸಿದ್ದ ಅಂತರರಾಷ್ಟ್ರೀಯ ಸಭೆಯಲ್ಲಿ, ಅಮೆರಿಕಾ ಮುಂತಾದ ಮುಂದುವರಿದ ರಾಷ್ಟ್ರಗಳು ತಮ್ಮ ರೈತರಿಗೆ ನೀಡುತ್ತಿರುವ ಕೃಷಿ ಉತ್ಪನ್ನಗಳ ಮೇಲಿನ ಸಬ್ಸಿಡಿಯನ್ನು ಕಡಿತಗೊಳಿಸಬೇಕೆಂದು ಅಭಿವೃದ್ಧಿಶೀಲ ರಾಷ್ಟ್ರಗಳ ಪರವಾಗಿ ತಾನು ಮಂಡಿಸಿದ ಪ್ರಸ್ತಾಪವನ್ನು ಮುಂದುವರಿದ ದೇಶಗಳ ಪ್ರತಿನಿಧಿಗಳು ಒಪ್ಪಲು ನಿರಾಕರಿಸಿದಾಗ, ಭಾರತದ ಪ್ರತಿನಿಧಿ ಆ ನಿರಾಕರಣೆಯನ್ನು ಪ್ರತಿಭಟಿಸಿ ಸಭೆಯಿಂದ ಹೊರಬಂದು ಸಭೆಯ ಭರ್ಕಾಸ್ತಾಗುವಂತೆ ಮಾಡಿದ್ದು ಆ ಸಾಮರ್ಥ್ಯಕ್ಕೊಂದು ನಿದರ್ಶನ. ಭಾರತದ ಈ ದಿಟ್ಟತನ ಶ್ರೀಮಂತ ರಾಷ್ಟ್ರಗಳಿಗೆ ನುಂಗಲಾರದ ತುತ್ತಾಗಿದೆ. ಅಲ್ಲದೆ ತಮ್ಮ ರೈತರಿಗೆ ಅಧಿಕ ಪ್ರಮಾಣದ ಸಬ್ಸಿಡಿ ನೀಡುತ್ತಿರುವ ಆ ರಾಷ್ಟ್ರಗಳು ಸಬ್ಸಿಡಿ ಪಡೆದ ರೈತರು ಉತ್ಪಾದಿಸಿದ ಅಗಾಧ ಪ್ರಮಾಣದ ಗೋಧಿ, ಸೋಯ ಮುಂತಾದ ಕೃಷಿ ಉತ್ಪನ್ನಗಳ ವಿಲೇವಾರಿ ಸಮಸ್ಯೆಯನ್ನು ಬಗೆಹರಿಸಿಕೊಳ್ಳಲಾರದೆ ತತ್ತರಿಸುತ್ತಿವೆ. ಏಕೆಂದರೆ ಅಪಾರ ಪ್ರಮಾಣದ ರಾಸಾಯನಿಕ ಗೊಬ್ಬರಗಳನ್ನೂ ಕೀಟನಾಶಕಗಳನ್ನೂ ಸುರಿದು ಉತ್ಪಾದಿಸಿದ ಆ ಉತ್ಪನ್ನಗಳು ಅಪಾಯಕಾರಿಗಳೆಂದು ಭಾವಿಸಿರುವ ಆ ರಾಷ್ಟ್ರಗಳ ಜನತೆ ಅವುಗಳನ್ನು ಕೊಳ್ಳಲು ಹಿಂಜರಿಯುತ್ತಿದ್ದಾರೆ. ಆದ್ದರಿಂದ ಆಮದು ಮಾಲೆಂದು ಏನನ್ನೇ ತಂದುಹಾಕಿದರೂ ತೆರೆದ ಕೈಗಳಿಂದ ಸ್ವೀಕರಿಸುವ ಭಾರತದ ಬೃಹತ್ ಮಾರುಕಟ್ಟೆಗೆ ಅವುಗಳನ್ನು ತಂದುಹಾಕುವ ಮಾರ್ಗೋಪಾಯಗಳನ್ನು ಆ ರಾಷ್ಟ್ರಗಳು ಹುಡುಕಾಡುತ್ತಿವೆ. ಆಹಾರೋತ್ಪಾದನೆಯಲ್ಲಿ ಸ್ವಾವಲಂಬನೆ ಸಾಧಿಸಿರುವ ಭಾರತದ ಆಹಾರೋತ್ಪಾದನೆಯನ್ನು ಕುಂಠಿತಗೊಳಿಸುವ ಸಾವಯವ ಕೃಷಿ ಪ್ರಚಾರಕ್ಕೆ ಪರೋಕ್ಷ ಕುಮ್ಮಕ್ಕು ನೀಡುವುದು ಆ ಹುಡುಕಾಟದ ಮೊದಲ ಘಟ್ಟ. ಅದನ್ನು ಯಶಸ್ವಿಯಾಗಿ ಕಾರ್ಯಗತಗೊಳಿಸಿದ್ದೇ ಆದರೆ ಆಹಾರಕ್ಕಾಗಿ ತಮ್ಮ ಮುಂದೆ ಕೈಯೊಡ್ಡಿ ನಿಲ್ಲುವಂತಹ ದೈನೇಸಿ ಸ್ಥಿತಿಗೆ ಭಾರತವನ್ನು ಮತ್ತೊಮ್ಮೆ ತಳ್ಳಬಹುದು; ಜಗತ್ತಿನ ಬಹುದೊಡ್ಡ ಪ್ರಜಾಪ್ರಭುತ್ವ ರಾಷ್ಟ್ರವನ್ನು ತಮ್ಮ ತಾಳಕ್ಕೆ ತಕ್ಕಂತೆ ಕುಣಿಸಬಹುದು; ಆಹಾರಾಭಾವದಿಂದ ನರಳುತ್ತಿರುವ ಅಭಿವೃದ್ಧಿಶೀಲ ಪ್ರಜಾಪ್ರಭುತ್ವ ರಾಷ್ಟ್ರವೊಂದಕ್ಕೆ ನೆರವಾಗುವ ಸೋಗುಹಾಕಿ ತಮ್ಮ ಆಂತರಿಕ ಮಾರುಕಟ್ಟೆಯಲ್ಲಿ ವಿಲೇವಾರಿಯಾಗದ ಕೃಷಿ ಉತ್ಪನ್ನಗಳನ್ನು ಭಾರತ ಕೃತಜ್ಞತೆಯಿಂದ ಸ್ವೀಕರಿಸುವಂತೆ ಮಾಡಬಹುದು – ಎಂದೆಲ್ಲಾ ಅವು ಲೆಕ್ಕಾಚಾರ ಹಾಕುತ್ತಿವೆ.



ಇಷ್ಟೆಲ್ಲ ಆಗುತ್ತಿರುವಾಗ ಭಾರತದಲ್ಲಿ ಬೇರೂರಿ ಭರ್ಜರಿ ವ್ಯವಹಾರ ನಡೆಸುತ್ತಿರುವ ವಿದೇಶಿ ಕಂಪನಿಗಳು ಸುಮ್ಮನೆ ಕುಳಿತಿಲ್ಲ. ತಮ್ಮ ರಾಷ್ಟ್ರಗಳು ನೀಡುತ್ತಿರುವ ಪರೋಕ್ಷ ಕುಮ್ಮಕ್ಕನ್ನು ಲಾಭದಾಯಕವಾಗಿ ಬಳಸಿಕೊಳ್ಳುವ ದಿಶೆಯಲ್ಲಿ ಕಾರ್ಯಪ್ರವೃತ್ತವಾಗಿವೆ. ಅರಿಶಿಣ, ಬೇವು ಮುಂತಾದ ನಮ್ಮ ಸ್ಥಳೀಯ ಮೂಲವಸ್ತುಗಳನ್ನು ಬಳಸಿಕೊಂಡು ತಾವು ಉತ್ಪಾದಿಸಿರುವ ಸಾವಯವ ಗೊಬ್ಬರ ಹಾಗೂ ಕೀಟನಾಶಕಗಳಿಗೆ ಈಗಾಗಲೇ ಜಾಗತಿಕ ಬೌದ್ಧಿಕಸ್ವಾಮ್ಯದ ಹಕ್ಕನ್ನು (ಪೇಟೆಂಟ್) ಪಡೆದುಕೊಂಡು ಸಾವಯವ ಕೃಷಿ ಪ್ರಚಾರವನ್ನು ಅದ್ದೂರಿಯಾಗಿಯೇ ಮಾಡುತ್ತಿವೆ. ಅಷ್ಟು ಮಾತ್ರವಲ್ಲದೆ ಭಾರತದ ವಿವಿಧ ನಗರಗಳಲ್ಲಿ ನಡೆಯುವ ಸಾವಯವ ಕೃಷಿಮೇಳಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ಅತ್ಯಾಕರ್ಷಕ ಪ್ರಚಾರದ ಮೂಲಕ ತಮ್ಮ ಉತ್ಪನ್ನಗಳನ್ನು ಜನಪ್ರಿಯಗೊಳಿಸಲು ಯತ್ನಿಸುತ್ತಿವೆ. ಇತ್ತೀಚೆಗೆ ಬೆಂಗಳೂರಿನಲ್ಲಿ ನಡೆದ ಸಾವಯವ ಕೃಷಿಮೇಳದಲ್ಲಿ ಸ್ವದೇಶಿ ಕಂಪನಿಗಳಿಗಿಂತ ವಿದೇಶಿ ಕಂಪನಿಗಳೇ ಹೆಚ್ಚು ಭಾಗವಹಿಸಿದ್ದುದು ಈ ಉದ್ದೇಶ ಸಾಧನೆಗಾಗಿಯೇ. ಇಷ್ಟಕ್ಕೇ ಸುಮ್ಮನಾಗದ ವಿದೇಶೀ ಕಂಪನಿಗಳು ಇನ್ನೂ ಮುಂದುವರಿದು ನಮ್ಮ ರೈತರಿಗೆ ಮತ್ತು ಅಧಿಕಾರಾರೂಢರಿಗೆ ಹಲವಾರು ಆಮಿಷಗಳನ್ನೊಡ್ಡುತ್ತಿವೆ. ಆ ಆಮಿಷಗಳಲ್ಲಿ ಪ್ರಮುಖವಾದುದು ಸಾವಯವ ಕೃಷಿ ಉತ್ಪನ್ನಗಳನ್ನು ಬೃಹತ್‌ಪ್ರಮಾಣದಲ್ಲಿ ಆಮದು ಮಾಡಿಕೊಳ್ಳುವಂತೆ ತಮ್ಮ ರಾಷ್ಟ್ರಗಳ ಮೇಲೆ ಪ್ರಭಾವ ಬೀರುವುದಾಗಿ ಅವು ನೀಡುತ್ತಿರುವ ಭರವಸೆ. ಈಗಾಗಲೇ ನಮ್ಮ ರೈತರೂ ಅಧಿಕಾರಾರೂಢರೂ ಆ ಆಮಿಷಕ್ಕೆ ಮರುಳಾಗಿದ್ದಾರೆ. ತಮ್ಮ ಸಾವಯವ ಉತ್ಪನ್ನಗಳನ್ನು ವಿದೇಶಗಳಿಗೆ ರಫ್ತುಮಾಡಿ ಅಪಾರ ಲಾಭಗಳಿಸುವ ಕನಸನ್ನು ರೈತರು ಕಾಣುತ್ತಿದ್ದಾರೆ. ರಾಜ್ಯ ಹಾಗೂ ಕೇಂದ್ರ ಸರ್ಕಾರಗಳೂ ಕೃಷಿ ವಿಶ್ವವಿದ್ಯಾನಿಲಯಗಳೂ ಕೃಷಿ ಉತ್ಪನ್ನ ರಫ್ತು ಮಂಡಳಿ (ಒಪೆಡ) ಮುಂತಾದ ಸಂಸ್ಥೆಗಳೂ ರಫ್ತು ಗುಣಮಟ್ಟ ಉತ್ಪನ್ನಗಳನ್ನುತ್ಪಾದಿಸುವ ತರಬೇತಿಯನ್ನು ಆಸಕ್ತರಿಗೆ ನೀಡಲು ಮುಂದಾಗಿವೆ.

ವಿದೇಶಿ ಕಂಪನಿಗಳು ಒಡ್ಡುತ್ತಿರುವ ಆಮಿಷಗಳ ಹಿಂದಿನ ಮರ್ಮ ನಮ್ಮವರಿಗೆ ಇನ್ನೂ ಅರ್ಥವಾಗಿಲ್ಲ. ಆ ಮರ್ಮ ಇದು : ರೈತರು ಉತ್ಪಾದಿಸಿದ ಎಲ್ಲ ಸಾವಯವ ಕೃಷಿ ಉತ್ಪನ್ನಗಳೂ ರಫ್ತಿಗೆ ಅರ್ಹವಾಗುವುದಿಲ್ಲ. ಸಾವಯವ ದೃಢೀಕರಣಪತ್ರ (ಆರ್ಗಾನಿಕ್ ಸರ್ಟಿಫಿಕೇಟ್) ಪಡೆದ ಉತ್ಪನ್ನಗಳು ಮಾತ್ರ ರಫ್ತು ಅರ್ಹತೆ ಪಡೆಯುತ್ತವೆ. ಅಂಥ ದೃಢೀಕರಣಪತ್ರ ನೀಡುವ ಅಧಿಕಾರ ಆಮದು ಮಾಡಿಕೊಳ್ಳುವ ದೇಶಗಳ ಕಂಪನಿಗಳ ಕೈಯಲ್ಲಿದೆ. ಏಕೆಂದರೆ ತಮ್ಮ ದೇಶದ ಕಂಪನಿಗಳು ಕೊಟ್ಟ ದೃಢೀಕರಣ ಪತ್ರಕ್ಕೆ ಮಾತ್ರ ಆಮದು ಮಾಡಿಕೊಳ್ಳುವ ದೇಶಗಳು ಮಾನ್ಯತೆ ನೀಡುತ್ತವೆ. ಆದ್ದರಿಂದ ದೃಢೀಕರಣ ಪತ್ರ ವ್ಯವಹಾರವೆಲ್ಲ ವಿದೇಶಿ ಕಂಪನಿಗಳ ಅಥವಾ ಅವುಗಳ ಶಾಖಾ ಕಂಪನಿಗಳ ನೇರ ಉಸ್ತುವಾರಿಯಲ್ಲಿ ನಡೆಯುತ್ತದೆ. ಆ ಕಂಪನಿಗಳು ದೃಢೀಕರಣಪತ್ರ ನೀಡಲು ಅತ್ಯಂತ ಕಟ್ಟುನಿಟ್ಟಾದ ಷರತ್ತುಗಳನ್ನು ವಿಧಿಸುತ್ತವೆ. ಆ ಷರತ್ತುಗಳಲ್ಲಿ ಪ್ರಧಾನವಾದುದು ದೃಢೀಕರಣಪತ್ರ ಪಡೆಯಲು ಅರ್ಹವಾದ ಸಾವಯವ ಉತ್ಪನ್ನಗಳನ್ನು ಉತ್ಪಾದಿಸುವ ಜಮೀನಿನಲ್ಲಿ ಮಾತ್ರವಲ್ಲದೆ ಅದರ ಆಸುಪಾಸಿನ ಜಮೀನಿನಲ್ಲಿ ಕೂಡ ೩ ವರ್ಷಗಳಷ್ಟು ಹಿಂದಿನಿಂದ ಯಾವುದೇ ಬೆಳೆಗೆ ರಾಸಾಯನಿಕ ಗೊಬ್ಬರವನ್ನಾಗಲಿ ಕೀಟನಾಶಕವನ್ನಾಗಲಿ ಬಳಸಿರಬಾರದು ಎಂಬ ಷರತ್ತು. ಆ ಷರತ್ತಿನ ಪ್ರಕಾರ ದೃಢೀಕರಣ ಪತ್ರಕ್ಕೆ ಅರ್ಜಿ ಸಲ್ಲಿಸಿದವರು ೩ ವರ್ಷಗಳವರೆಗೆ ಕಂಪನಿಯ ಕಣ್ಗಾವಲಿನಲ್ಲಿದ್ದು ಪರಿಶೀಲನೆಗೆ ಒಳಪಡುವುದರ ಜೊತೆಗೆ ತಮ್ಮ ಆಸುಪಾಸಿನ ಜಮೀನುಗಳವರು ಕೂಡ ರಾಸಾಯನಿಕ ಗೊಬ್ಬರಗಳನ್ನು ಕೀಟನಾಶಕಗಳನ್ನು ಬಳಸದಂತೆ ನೋಡಿಕೊಳ್ಳಬೇಕು. ಅದೆಲ್ಲವನ್ನು ಖಚಿತಪಡಿಸಿಕೊಳ್ಳಲು ಕಂಪನಿ ತನ್ನ ತಾಂತ್ರಿಕ ಸಿಬ್ಬಂದಿಯನ್ನು ಕಳುಹಿಸಿ ಪರಿಶೀಲನೆ ನಡೆಸುತ್ತದೆ. ೩-೪ ತಿಂಗಳುಗಳಿಗೊಮ್ಮೆ ಬಂದು ಹೋಗುವ ಆ ಸಿಬ್ಬಂದಿಯ ವೆಚ್ಚವನ್ನು, ಅವರ ಆತಿಥ್ಯಗಳ ವೆಚ್ಚವನ್ನು ಜಮೀನಿನ ಮಾಲಿಕರೇ ಭರಿಸಬೇಕು. ಪರಿಶೀಲನಾ ಅವಧಿಯಲ್ಲಿ ಕಂಪನಿ ಶಿಫಾರಸು ಮಾಡಿದ ಬೀಜ, ಗೊಬ್ಬರ, ಕೀಟನಾಶಕಗಳನ್ನೇ

ಬಳಸಬೇಕು. ಅಷ್ಟೇ ಅಲ್ಲದೆ, ಎಕರೆಯೊಂದಕ್ಕೆ ಹಲವು ಸಾವಿರಗಳಷ್ಟು ಸೇವಾಶುಲ್ಕವನ್ನು ಕಂಪನಿಗೆ ಪಾವತಿಸಬೇಕು. ಇಷ್ಟೆಲ್ಲ ಖರ್ಚುವೆಚ್ಚಗಳನ್ನು ಸಾಮಾನ್ಯ ರೈತರಿರಲಿ, ಶ್ರೀಮಂತ ರೈತರೂ ಭರಿಸಲಾರರು.

ಹೀಗೆ ಕಂಪನಿ ಹೇಳಿದ್ದನ್ನೆಲ್ಲ ಮಾಡಿದರೂ ೩ ವರ್ಷಗಳ ಪರಿಶೀಲನಾ ಅವಧಿಯಲ್ಲಿ ಉತ್ಪಾದಿಸಿದ ಉತ್ಪನ್ನಗಳನ್ನು ಸದರಿ ಕಂಪನಿ ಸಾವಯವ ಉತ್ಪನ್ನಗಳೆಂದು ಪರಿಗಣಿಸುವುದಿಲ್ಲ. ೩ ವರ್ಷಗಳ ಅನಂತರ ಉತ್ಪಾದಿಸಿದ ಉತ್ಪನ್ನಗಳನ್ನು ಮಾತ್ರ ರಫ್ತು ಗುಣಮಟ್ಟದ ಸಾವಯವ ಉತ್ಪನ್ನಗಳೆಂದು ಪರಿಗಣಿಸಿ ದೃಢೀಕರಣಪತ್ರ ನೀಡುತ್ತದೆ. ಆದ್ದರಿಂದ ಪರಿಶೀಲನಾ ಅವಧಿಯಲ್ಲಿ ಉತ್ಪಾದಿಸಿದ ಉತ್ಪನ್ನಗಳನ್ನು ಆಂತರಿಕ ಮಾರುಕಟ್ಟೆಯಲ್ಲೇ ಮಾರಬೇಕಾಗುತ್ತದೆ. ತಾಂತ್ರಿಕ ಸಿಬ್ಬಂದಿ ವೆಚ್ಚ, ಸೇವಾಶುಲ್ಕ, ಬೀಜ ಇತ್ಯಾದಿಗಳ ಖರ್ಚುವೆಚ್ಚಗಳ ಪರಿಣಾಮವಾಗಿ ಅವುಗಳ ಉತ್ಪನ್ನವೆಚ್ಚ ಅತ್ಯಂತ ದುಬಾರಿಯಾಗುವುದರಿಂದ ಅವುಗಳನ್ನು ಇತರ ಉತ್ಪನ್ನಗಳ ಬೆಲೆಗಿಂತ ಹೆಚ್ಚಿನ ಬೆಲೆಯಲ್ಲಿ ಮಾರಬೇಕಾಗುತ್ತದೆ. ಹಾಗೆ ಮಾರಲು ಹರಸಾಹಸ ಮಾಡಬೇಕಾಗುತ್ತದೆ. ಹಾಗಾಗಿ ಬೆಳೆದವನಿಗೆ ನಷ್ಟ ಕಟ್ಟಿಟ್ಟ ಬುತ್ತಿ.

ಇದೆಲ್ಲವನ್ನು ನಿಧಾನವಾಗಿ ಅರ್ಥಮಾಡಿಕೊಂಡಿರುವ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು – ''ವೈಯಕ್ತಿಕ ಮಟ್ಟದಲ್ಲಿ ಸಾವಯವ ದೃಢೀಕರಣಪತ್ರ ಪಡೆಯಲು ಪ್ರಯತ್ನಿಸಬೇಡಿ. ಒಂದು ಹಳ್ಳಿ ಅಥವಾ ಪ್ರದೇಶದ ರೈತರೆಲ್ಲ ಒಂದಾಗಿ ಸಾಮೂಹಿಕ ದೃಢೀಕರಣಪತ್ರ ಪಡೆಯಲು ಪ್ರಯತ್ನಿಸಿ. ಅಂಥ ಪ್ರಯತ್ನಕ್ಕೆ ನಾವು ಸಬ್ಸಿಡಿ ಕೊಡುತ್ತೇವೆ. ಅಷ್ಟರಮಟ್ಟಿಗೆ ಖರ್ಚುವೆಚ್ಚಗಳು ಕಡಿಮೆಯಾಗುತ್ತವೆ ಮತ್ತು ಹಂಚಿಕೆಯಾಗುತ್ತವೆ'' ಎಂದೆಲ್ಲಾ ಪ್ರಚಾರ ಮಾಡಲು ಪ್ರಾರಂಭಿಸಿವೆ. ತಮಗೆ ಬೇಕಾದ ಬೆಳೆಯನ್ನು ಬೆಳೆಯುವ ಸ್ವಾತಂತ್ರ್ಯವನ್ನು ಕಳೆದುಕೊಂಡು ಮೂರುವರ್ಷ ಕಾದು ಸಾಮೂಹಿಕ ದೃಢೀಕರಣಪತ್ರ ಪಡೆಯುವ ವ್ಯವಧಾನ ಎಷ್ಟು ಜನ ರೈತರಿಗಿದ್ದೀತು ? ಆದ್ದರಿಂದ ಸಾಮೂಹಿಕ ದೃಢೀಕರಣಪತ್ರ ಯೋಜನೆ ವಿದೇಶಿ ಕಂಪನಿಗಳಿಗೆ ಲಾಭ ದೊರಕಿಸಿಕೊಡುವ ಕಾರ್ಯಕ್ರಮವಾಗುತ್ತದೆಯೇ ಹೊರತು ಸ್ಥಳೀಯ ರೈತರನ್ನು ರಫ್ತುದಾರರನ್ನಾಗಿ ಮಾಡುವ ಕಾರ್ಯಕ್ರಮವಾಗುವುದಿಲ್ಲ.

ಇದೆಲ್ಲಕ್ಕಿಂತ ಮುಖ್ಯವಾದ ಸಂಗತಿ ಇನ್ನೊಂದಿದೆ. ಅದು ರಫ್ತು ಮಾಡಬಹುದಾದ ಉತ್ಪನ್ನಗಳಿಗೆ ಸಂಬಂಧಿಸಿದ್ದು. ಸಾವಯವ ದೃಢೀಕರಣಪತ್ರ ಪಡೆದ ಕಾಫಿ, ಟೀ, ವೆನಿಲ್ಲಾ ಮುಂತಾದವುಗಳಿಗೂ ಕೆಲವು ಬಗೆಯ ತರಕಾರಿಗಳಿಗೂ ಹಣ್ಣುಹಂಪಲುಗಳಿಗೂ ವಿದೇಶಗಳಲ್ಲಿ ಹೆಚ್ಚು ಬೇಡಿಕೆ ಇದೆಯೇ ಹೊರತು ದವಸಧಾನ್ಯಗಳಿಗಲ್ಲ.

ಇಷ್ಟು ಸಾಲದೆಂಬಂತೆ ಕೆಲವು ವಿದೇಶಿ ಕಂಪನಿಗಳು, ಅವುಗಳನ್ನು ಅನುಕರಿಸಲು ಹೊರಟಿರುವ ಕೆಲವು ಸ್ವದೇಶಿ ಬೃಹತ್ ಕಂಪನಿಗಳು, ನಮ್ಮ ರೈತರನ್ನು ಹೊಸ ಬಗೆಯ ಬಲೆಯೊಂದರಲ್ಲಿ ಬೀಳಿಸಿಕೊಳ್ಳಲು ಹವಣಿಸುತ್ತಿವೆ. ಗುತ್ತಿಗೆ ಕೃಷಿ ಪದ್ಧತಿಯೇ ಆ ಹೊಸ ಬಗೆಯ ಬಲೆ. ಗುತ್ತಿಗೆ ಕೃಷಿ ಪದ್ಧತಿ ಎಂದರೆ ಯಾವುದೇ ಕಂಪನಿ ಸಣ್ಣ ರೈತರ ಹಾಗೂ ದೊಡ್ಡ ರೈತರ ಹಲವು ನೂರು ಅಥವಾ ಸಾವಿರ ಎಕರೆಗಳಷ್ಟು ಕೃಷಿಭೂಮಿಯನ್ನು ಒಟ್ಟುಗೂಡಿಸಿ ಗುತ್ತಿಗೆಗೆ ತೆಗೆದುಕೊಂಡು ಆ ಭೂಮಿಯಲ್ಲಿ ತಾನು ನಿಗದಿಪಡಿಸಿದ ಸಾವಯವ ಬೆಳೆಯನ್ನೇ ಬೆಳೆಯಬೇಕೆಂದು ಮಾಡಿಕೊಳ್ಳುವ ಒಪ್ಪಂದದ ಕೃಷಿಪದ್ಧತಿ. ಒಪ್ಪಂದ ಮಾಡಿಕೊಂಡ ರೈತರು ತಮ್ಮ ಜಮೀನನ್ನು ಕಂಪನಿಗೆ ಗುತ್ತಿಗೆ ಕೊಡುವುದರ ಜೊತೆಗೆ ಎಕರೆ ಒಂದಕ್ಕೆ ಕನಿಷ್ಠ ಒಂದು ಸಾವಿರ ರೂಪಾಯಿಗಳಷ್ಟು ಸೇವಾ ಶುಲ್ಕವನ್ನು ತೆರಬೇಕಾಗುತ್ತದೆ. ಆ ಶುಲ್ಕವನ್ನು ನಗದಾಗಿ ಕೊಡುವ ಚೈತನ್ಯವಿಲ್ಲದಿದ್ದರೆ ಅಂತಿಮ ಲೆಕ್ಕ ಚುಕ್ತ ಮಾಡುವಾಗ ಅದನ್ನು ಮುರಿದುಕೊಳ್ಳುವ ಅಧಿಕಾರವನ್ನು ಕಂಪನಿಗೆ ಕೊಡಬೇಕಾಗುತ್ತದೆ. ಅಷ್ಟೇ ಅಲ್ಲ, ಕಂಪನಿ ಒದಗಿಸುವ ಬೀಜ, ಗೊಬ್ಬರ, ನೀರಾವರಿ ವ್ಯವಸ್ಥೆ ಮುಂತಾದುವಕ್ಕೆ ತಗಲುವ ವೆಚ್ಚವನ್ನು ಮುರಿದುಕೊಳ್ಳುವ ಅಧಿಕಾರ ಕೊಡಬೇಕು. ಇದಕ್ಕೆಲ್ಲ ಒಪ್ಪಿದರೆ ಬೆಳೆ ಬಿತ್ತಿದ ಕೂಡಲೇ ಉತ್ಪನ್ನಕ್ಕೆ ವೆಚ್ಚಾಧಾರಿತ ಬೆಲೆಯನ್ನು ಕಂಪನಿ ನಿಗದಿಮಾಡುತ್ತದಂತೆ. ಫಸಲು ಬರುವ ಹೊತ್ತಿಗೆ ಮಾರುಕಟ್ಟೆಯಲ್ಲಿ ಬೆಲೆ ಬಿದ್ದುಹೋದರೂ ತಾನು ನಿಗದಿ ಮಾಡಿದ ಬೆಲೆಗೇ ಉತ್ಪನ್ನವನ್ನೆಲ್ಲ ಕೊಳ್ಳುತ್ತದಂತೆ. ಆದರೆ ಆ ಉತ್ಪನ್ನ ಕಂಪನಿ ಒದಗಿಸಿದ ಬೀಜ, ಗೊಬ್ಬರ, ಕೀಟನಾಶಕಗಳನ್ನು ಬಳಸಿ ಉತ್ಪಾದಿಸಿದ್ದೇ ಆಗಿರಬೇಕಂತೆ. ಅಂದರೆ ರೈತ ತಾನು ಗುತ್ತಿಗೆಗೆ ಕೊಟ್ಟ ಜಮೀನಿನಲ್ಲಿ ತನಗೆ ಬೇಕಾದ ಬೆಳೆ ಬೆಳೆಯುವ ಸ್ವಾತಂತ್ರ್ಯವನ್ನು ಕಳೆದುಕೊಳ್ಳುವುದು ಮಾತ್ರವಲ್ಲದೆ ಕಂಪನಿ ಹೇಳಿದಂತೆ ಕೇಳುವ ಗುಲಾಮನಾಗಬೇಕಾಗುತ್ತದೆ. ಅವನು ಮತ್ತು ಅವನ ಮನೆಯವರು ಜಮೀನಿನಲ್ಲಿ ಕೆಲಸ ಮಾಡಿದರೆ ಬೇರೆ ಕೂಲಿಯವರಿಗೆ ಕೊಡುವಷ್ಟೇ ಕೂಲಿಯನ್ನು ಕಂಪನಿ ಕೊಡುತ್ತದೆ. ಹೀಗೆ ರೈತನನ್ನು ಗುಲಾಮನನ್ನಾಗಿ ಮತ್ತು ಕೂಲಿಯವನನ್ನಾಗಿ ಮಾಡಿಕೊಳ್ಳುವ ಕಂಪನಿ ಉತ್ಪನ್ನದ ಬೆಲೆಯ ಬಗ್ಗೆ ಹೇಳುತ್ತದೆಯೇ ಹೊರತು ಬೆಳೆಯ ಪ್ರಮಾಣದ ಬಗ್ಗೆ ಏನನ್ನೂ ಹೇಳುವುದಿಲ್ಲ. ಅಂದರೆ ತಾನು ಸರಬರಾಜು ಮಾಡಿದ ಗೊಬ್ಬರ, ಬೀಜ, ಕೀಟನಾಶಕಗಳನ್ನು ಬಳಸಿ ತಾನು ವಿಧಿಸಿದ ವಿಧಾನದಲ್ಲೇ ಕೃಷಿ ಮಾಡಿದರೆ ಇಷ್ಟು ಪ್ರಮಾಣದ ಫಸಲು ಬರಬೇಕು. ಅಕಸ್ಮಾತ್ ಅಷ್ಟು ಪ್ರಮಾಣದ ಫಸಲು ಬರದಿದ್ದರೆ ಕೊರತೆಯ ನಷ್ಟವನ್ನು ತುಂಬಿಕೊಡಲಾಗುವುದು ಎಂಬ ಗ್ಯಾರಂಟಿ ಕೊಡುವುದಿಲ್ಲ. ಮೇಲಾಗಿ, ಅತಿವೃಷ್ಟಿ ಮುಂತಾದ ಪ್ರಾಕೃತಿಕ ಕಾರಣಗಳಿಂದ ಅಥವಾ ರೋಗರುಜಿನಗಳಿಂದ ಬೆಳೆ ಹಾಳಾಗಿ ಫಸಲಿನ ಪ್ರಮಾಣ ಕಡಿಮೆಯಾದರೆ ಅಥವಾ ಫಸಲೇ ಬಾರದಿದ್ದರೆ ಏನು ಪರಿಹಾರ ಎಂಬುದನ್ನೂ ಖಚಿತವಾಗಿ ಹೇಳುವುದಿಲ್ಲ. ಅಂತಹ ಸಂದರ್ಭಗಳನ್ನು ನಿಭಾಯಿಸಲೆಂದೇ ಬೆಳೆ ವಿಮೆ ಮಾಡಿಸುವುದಾಗಿ ಕಂಪನಿ ಹೇಳಿದರೂ ಒಂದು ನಿರ್ದಿಷ್ಟ ಪ್ರಮಾಣಕ್ಕೆ ಮಾತ್ರ (ಸ್ಟ್ಯಾಂಡರ್ಡ್ ಕ್ವಾಂಟಿಟಿ) ವಿಮಾ ಪರಿಹಾರ ದೊರೆಯುತ್ತದೆಯೇ ಹೊರತು ನಿರೀಕ್ಷಿತ ಪ್ರಮಾಣದ ಫಸಲಿಗಲ್ಲ. ಉದಾಹರಣೆಗೆ, ವಿಮಾ ಕಂಪನಿ ಒಂದು ಎಕರೆಗೆ ಒಂದು ಬೆಳೆಯ ಇಳುವರಿ ಇಷ್ಟೇ ಎಂದು ನಿಗದಿಮಾಡಿ ಅಷ್ಟಕ್ಕೇ ವಿಮೆ ಮಾಡಿಸಿಕೊಂಡಿರುತ್ತದೆ. ಆ ನಿಗದಿತ ಇಳುವರಿಗಿಂತ ಎಷ್ಟು ಕಡಿಮೆಯಾಗುತ್ತದೋ ಅಷ್ಟಕ್ಕೆ ಮಾತ್ರ ವಿಮಾ ಪರಿಹಾರ ನೀಡುತ್ತದೆ. ನಾವು ಇಷ್ಟು ಇಳುವರಿ ನಿರೀಕ್ಷಿಸಿದ್ದೆವು ಅಷ್ಟಕ್ಕಿಂತ ಎಷ್ಟು ಕಡಿಮೆಯಾಗಿದೆ ಅದಕ್ಕೆ ಪರಿಹಾರ ಕೊಡಿ ಎಂದರೆ ಕೊಡುವುದಿಲ್ಲ. ಎಲ್ಲಕ್ಕಿಂತ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ವಿಮಾ ಪರಿಹಾರ ಪಾವತಿಯಾಗುವುದು ಕಂಪನಿಗೇ ಹೊರತು ಜಮೀನನ್ನು ಗುತ್ತಿಗೆಗೆ ಕೊಟ್ಟ ರೈತರಿಗಲ್ಲ. ಹಾಗೆ ಬಂದ ಪರಿಹಾರದಲ್ಲಿ ಸೇವಾಶುಲ್ಕ, ಬೀಜ, ಗೊಬ್ಬರ, ಕೀಟನಾಶಕಗಳ ಖರ್ಚುವೆಚ್ಚಗಳನ್ನು ಕಂಪನಿ ಮುರಿದುಕೊಂಡರೆ ರೈತನಿಗೆ ಉಳಿಯುವುದು ತನ್ನ ಜಮೀನಿನಲ್ಲಿ ತಾನೇ ಕೂಲಿಯಾಗಿ ದುಡಿದದ್ದಕ್ಕೆ ಸಿಗುವ ಕೂಲಿ ಮಾತ್ರ. ಆದ್ದರಿಂದ ಗುತ್ತಿಗೆ ಕೃಷಿಪದ್ಧತಿ ನಿಜವಾದ ಅರ್ಥದಲ್ಲಿ ರೈತರಿಗೊಡ್ಡಿದ ಹೊಸಬಗೆಯ ಬಲೆ ಮತ್ತು ವಸಾಹತುಶಾಹಿ ವ್ಯವಸ್ಥೆಯನ್ನು ಪುನರುಜ್ಜೀವಗೊಳಿಸುವ ಹುನ್ನಾರ.

ಹೀಗೆ ಸಾವಯವ ಕೃಷಿ ಗುತ್ತಿಗೆ ಕೃಷಿಪದ್ಧತಿಯ ರೂಪದಲ್ಲಾಗಿರಲಿ ಅಥವಾ ಇನ್ನಾವುದೇ ರೂಪದಲ್ಲಾಗಿರಲಿ, ಅದು ರೈತ ಶೋಷಣೆಯ ಪ್ರಬಲ ಸಾಧನವಾಗಿ ಪರಿಣಮಿಸಿದೆ. ಅಷ್ಟು ಮಾತ್ರವಲ್ಲದೆ ಈಗಾಗಲೇ ಸ್ಪಷ್ಟಪಡಿಸಿರುವಂತೆ ಆಹಾರೋತ್ಪಾದನೆಯನ್ನು ಕುಂಠಿತಗೊಳಿಸಿ ಆಹಾರ ಸ್ವಾವಲಂಬೀ ಭಾರತವನ್ನು ಆಹಾರ ಪರಾವಲಂಬಿ ರಾಷ್ಟ್ರವನ್ನಾಗಿ ಪರಿವರ್ತಿಸುತ್ತಿದೆ.

ಈ ಹಿನ್ನೆಲೆಯಲ್ಲಿ ಎಲ್ಲರೂ ಪರ್ಯಾಯ ಕೃಷಿ ಪದ್ಧತಿಯ ಅನ್ವೇಷಣೆಗೆ ಮುಂದಾಗಿದ್ದಾರೆ. ಇಂಥ ಸಂಕ್ರಮಣ ಕಾಲದಲ್ಲಿ ಮಹಾರಾಷ್ಟ್ರದ ಸುಭಾಷ್ ಪಾಳೇಕರ್ ಅವರು ರೂಪಿಸಿರುವ ಸುಸ್ಥಿರ ಕೃಷಿ (ಸಸ್ಟೈನಬಲ್ ಅಗ್ರಿಕಲ್ಚರ್) ಎಲ್ಲರ ಗಮನವನ್ನು ಸೆಳೆಯುತ್ತಿದೆ. ಅದರ ಪ್ರವರ್ತಕರಾದ ಪಾಳೇಕರ್ ಅವರೂ ಅವರ ಅನುಯಾಯಿಗಳೂ – ''ರಾಸಾಯನಿಕವು ಕೃಷಿಭೂಮಿಯನ್ನು ನಿರ್ಜೀವಗೊಳಿಸಿ ಖಾಲಿ ಚೀಲದಂತೆ ಮಾಡುತ್ತದೆ. ಸಾವಯವ ಕೃಷಿ ಭಾರತೀಯ ರೈತರನ್ನು ವಿದೇಶಿ ಕಂಪನಿಗಳ ಗುಲಾಮರನ್ನಾಗಿ ಮಾಡುವುದಲ್ಲದೆ ಭಾರತವನ್ನು ಆಹಾರದ ವಿಷಯದಲ್ಲಿ ಪರಾವಲಂಬಿಯನ್ನಾಗಿ ಮಾಡುತ್ತದೆ. ಸುಸ್ಥಿರ ಕೃಷಿ ಭೂಮಿಯನ್ನು ಪುನರುಜ್ಜೀವಗೊಳಿಸಿ ಸತ್ವಭರಿತ ಜೀವಂತ ಕಣಜವನ್ನಾಗಿ ಮಾಡುವುದಲ್ಲದೆ ರೈತರನ್ನು ಸ್ವಾವಲಂಬಿಗಳನ್ನಾಗಿ ಮಾಡುತ್ತದೆ'' ಎಂದು ಪ್ರತಿಪಾದಿಸುತ್ತಿದ್ದಾರೆ. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಕೂಡ ಸುಸ್ಥಿರ ಕೃಷಿಗೆ ಹೆಚ್ಚಿನ ಪ್ರೋತ್ಸಾಹ ನೀಡಲು ಮುಂದಾಗಿವೆ. ಮಹಾರಾಷ್ಟ್ರ ಸರ್ಕಾರ ಈಗಾಗಲೇ ಅದನ್ನು ತನ್ನ ಕೃಷಿ ನೀತಿಯಲ್ಲಿ ಅಳವಡಿಸಿಕೊಂಡಿದೆ. ಕರ್ನಾಟಕ ಸರ್ಕಾರ ಅಳವಡಿಸಿಕೊಳ್ಳುವ ಹಾದಿಯಲ್ಲಿದೆ.

ಸುಸ್ಥಿರ ಕೃಷಿಯು ಅದರ ಪ್ರತಿಪಾದಕರ ಪ್ರಕಾರ ಶೂನ್ಯ ಬಂಡವಾಳದ ಕೃಷಿ. ಏಕೆಂದರೆ, ಆ ಪದ್ಧತಿಯಲ್ಲಿ ಭೂಮಿಯನ್ನು ಆಳವಾಗಿ ಉಳಬೇಕಾಗಿಲ್ಲ, ಕಳೆ ಕೀಳಬೇಕಾಗಿಲ್ಲ. ಟನ್‌ಗಟ್ಟಲೆ ಗೊಬ್ಬರ ಸುರಿಯಬೇಕಾಗಿಲ್ಲ. ಬಿತ್ತನೆ ಬೀಜಗಳಿಗಾಗಿ ಸಾವಿರಾರು ರೂಪಾಯಿಗಳನ್ನು ಖರ್ಚು ಮಾಡಬೇಕಾಗಿಲ್ಲ. ಕೀಟನಾಶಕಗಳನ್ನು ಕೊಳ್ಳಬೇಕಾಗಿಲ್ಲ. ಈ ಎಲ್ಲ ಇಲ್ಲಗಳಿಂದ ಬೆಳೆ ತೆಗೆಯುವುದು ಹೇಗೆ ಎಂಬುದನ್ನು ಅವರು ಹೀಗೆ ವಿವರಿಸುತ್ತಾರೆ : ''ಭೂಮಿಯನ್ನು ಪ್ರತಿ ಬೆಳೆಗೂ ಕಬ್ಬಿಣದ ನೇಗಿಲು ಟ್ರ್ಯಾಕ್ಟರ್ ಮುಂತಾದುವುಗಳಿಂದ ಆಳವಾಗಿ ಉತ್ತು ಗಾಯಗೊಳಿಸಬಾರದು. ತುಳಿದಾಡಿ ಗಟ್ಟಿಗೊಳಿಸಬಾರದು. ನಾಟಿ ಬೀಜಗಳನ್ನೇ ಬಿತ್ತಬೇಕು. ಬೆಳೆ ಕೊಯ್ದುಕೊಂಡ ಅನಂತರ ಉಳಿಯುವ ಸೊಪ್ಪುಸದೆಗಳನ್ನು ಬೆಳೆಗಳ ಮಧ್ಯೆ ಕಳೆಯಾಗಿ ಬೆಳೆದುಕೊಂಡ ಗಿಡಗಂಟೆಗಳನ್ನು ಬುಡಸಮೇತ ಕಿತ್ತು ಭೂಮಿಯಲ್ಲಿ

ಹರಡಬೇಕು. ಅವುಗಳನ್ನು ಸುಡುವುದಾಗಲಿ ಎತ್ತಿ ಬಿಸಾಡುವುದಾಗಲಿ ಮಾಡಬಾರದು. ಹಾಗೇ ಬಿಡುತ್ತಾ ಬಂದರೆ ೩-೪ ವರ್ಷಗಳಲ್ಲಿ ಕಾಡಿನಲ್ಲಾಗುವಂತೆ ಭೂಮಿಯ ಮೇಲೆ ಒಂದು ಸತ್ತೆಯ ಮೆತ್ತೆ ನಿರ್ಮಾಣ ವಾಗುತ್ತದೆ. ಹಾಗಾದಾಗ ಭೂಮಿಯ ತೇವಾಂಶ ಆವಿಯಾಗದೆ ಹಾಗೇ ಉಳಿದು ನೀರಿನ ಆವಶ್ಯಕತೆ ಇಲ್ಲವೇ ಇಲ್ಲವೆಂಬುವಷ್ಟು ಕಡಿಮೆಯಾಗುತ್ತದೆ. ಅಲ್ಲದೆ ಎರೆಹುಳುಗಳ ಸಂಖ್ಯೆ ಅಗಾಧ ಪ್ರಮಾಣದಲ್ಲಿ ವೃದ್ಧಿಯಾಗಿ ಸಾವಯವ ಗೊಬ್ಬರದ ಸಮಸ್ಯೆ ತಾನೇ ತಾನಾಗಿ ಬಗೆಹರಿಯುತ್ತದೆ. ಮೇಲುಗೊಬ್ಬರವಾಗಿ ನಾಟಿ ಹಸುವಿನ ಗಂಜಳ ಸಗಣಿ ಇತ್ಯಾದಿಗಳಿಂದ ತಯಾರಿಸಿದ ಜೀವಾಮೃತವನ್ನು ಹದಿನೈದು ದಿನಗಳಿಗೊಮ್ಮೆ ಆ ಮೆತ್ತೆಯ ಮೇಲೆ ಚೆಲ್ಲಬೇಕು. ಹಾಗೆ ಮಾಡುತ್ತಾ ಬಂದರೆ ಒಂದೆರಡು ವರ್ಷಗಳಲ್ಲಿ ಭೂಮಿಯ ಮೇಲೆ ಗೊಬ್ಬರದ ಪದರವೇ ಸೃಷ್ಟಿಯಾಗಿ ಭೂಮಿ ತನಗೆ ಬೇಕಾದ ಗೊಬ್ಬರವನ್ನು ತಾನೇ ಉತ್ಪಾದಿಸಿಕೊಳ್ಳುವ ಸಾಮರ್ಥ್ಯ ಪಡೆದುಕೊಳ್ಳುತ್ತದೆ. ಒಂದೇ ಒಂದು ನಾಟಿ ಹಸುವಿನಿಂದ ೩೦ ಎಕರೆಗಳಿಗಾಗುವಷ್ಟು ಜೀವಾಮೃತವನ್ನು ತಯಾರಿಸಿಕೊಳ್ಳಬಹುದು. ಆ ಹಸು ಕಪ್ಪುಬಣ್ಣದ್ದಾಗಿದ್ದರೆ ಸರ್ವೋತ್ತಮ. ಹಸು ಇಲ್ಲದ್ದಿದರೆ ಎಮ್ಮೆ ಎತ್ತುಗಳ ಗಂಜಳ ಸಗಣಿಗಳಿಂದಲೇ ಜೀವಾಮೃತ ತಯಾರಿಸಿಕೊಳ್ಳಬಹುದು. ಆದರೆ ಜೀವಾಮೃತ ತಯಾರಿಕೆಗೆ ಸೀಮೆಹಸುಗಳ ಗಂಜಳ ಸಗಣಿಗಳನ್ನು ಬಳಸಲೇಬಾರದು. ನಿಜವಾದ ಅರ್ಥದಲ್ಲಿ ಹಸುವಿನ ಜಾತಿಗೆ ಸೇರದ ಅವುಗಳ ಸಗಣಿ ಗಂಜಲಗಳು ನಿಷ್ಪ್ರಯೋಜಕ. ಬೀಜೋಪಚಾರಕ್ಕೆ ಮತ್ತು ಸಸ್ಯ ಸಂರಕ್ಷಣೆಗೆ ಬೇಕಾದ ಬೀಜಾಮೃತ ಬ್ರಹ್ಮಾಸ್ತ್ರ ಮುಂತಾದ ಕೀಟನಾಶಕಗಳನ್ನು ಗಿಡಮೂಲಿಕೆ, ಬೇವಿನ ಹಿಂಡಿ, ಮಜ್ಜಿಗೆ ಮುಂತಾದ ಸಾವಯವ ಪದಾರ್ಥಗಳಿಂದ ರೈತರೇ ತಯಾರಿಸಿಕೊಳ್ಳಬಹುದು. ಈ ಕೃಷಿ ಕ್ರಮದ ಪ್ರಕಾರ ಒಂದೇ ಭೂಮಿಯ ಬೇರೆ ಬೇರೆ ಸಾಲುಗಳಲ್ಲಿ ಬೇರೆ ಬೇರೆ ಬೆಳೆಗಳನ್ನು ಬಿತ್ತಿ ಏಕಕಾಲದಲ್ಲಿ ನಿತ್ಯಜೀವನಕ್ಕೆ ಬೇಕಾದ ಎಲ್ಲಾ ಬೆಳೆಗಳನ್ನು ಬೆಳೆದುಕೊಳ್ಳಬಹುದು. ಉದಾಹರಣೆಗೆ, ಒಂದು ಸಾಲಿನಲ್ಲಿ ಭತ್ತ, ಇನ್ನೊಂದು ಸಾಲಿನಲ್ಲಿ ದ್ವಿದಳಧಾನ್ಯಗಳ ಬೆಳೆ, ಮತ್ತೊಂದು ಸಾಲಿನಲ್ಲಿ ಮೆಣಸಿನಕಾಯಿ, ಈರುಳ್ಳಿ, ಬೆಳ್ಳುಳ್ಳಿ, ಕೊತ್ತಂಬರಿ ಇತ್ಯಾದಿ ಸಾಂಬಾರ ಬೆಳೆಗಳು, ಹೀಗೆ ಏಕಕಾಲದಲ್ಲಿ ಒಂದೇ ಭೂಮಿಯಲ್ಲಿ ನಿತ್ಯೋಪಯೋಗಿ ಬೆಳೆಗಳನ್ನೆಲ್ಲ ಬೆಳೆದುಕೊಳ್ಳಬಹುದು. ಕಬ್ಬಿನ ಬೆಳೆ ತೋಟದ ಬೆಳೆಗಳಲ್ಲೂ ಇದೇ ಕ್ರಮ ಅನುಸರಿಸಬೇಕು.''

ಇದೆಲ್ಲವೂ ಸರಿ. ಆದರೆ ಕೃಷಿಭೂಮಿ ಸತ್ತೆಯ ಮೆತ್ತೆಯನ್ನು ಹೊದ್ದುಕೊಂಡು ಈ ಕೃಷಿಪದ್ಧತಿಗೆ ಸಿದ್ಧ ವಾಗಬೇಕಾದರೆ ೩-೪ ವರ್ಷಗಳಷ್ಟು ದೀರ್ಘಾವಧಿ ಬೇಕಾಗುತ್ತದೆ. ಆ ಹಂತದವರೆಗೆ ಉತ್ಪಾದನೆ ಸಹಜ ವಾಗಿಯೇ ಕಡಿಮೆ ಇರುತ್ತದೆ. ಅಷ್ಟೇ ಅಲ್ಲ ಭೂಮಿಯ ಸುತ್ತ ಬೇಲಿಯಿಲ್ಲದಿದ್ದರೆ ಮೇವನ್ನರಸಿಕೊಂಡು ಓಡಾಡುವ ದನಕರುಗಳು ಭೂಮಿಯನ್ನು ತುಳಿದು ಗಟ್ಟಿಮಾಡುತ್ತವೆ. ಅಲ್ಲದೆ, ಸತ್ತೆಸದೆಗಳನ್ನು ಮೇವಾಗಿ ತಿನ್ನುತ್ತವೆ. ಆದ್ದರಿಂದ ಸುತ್ತ ಬೇಲಿಯಿಲ್ಲದ ಬಯಲು ಭೂಮಿಗಳಲ್ಲಿ ಈ ಪದ್ಧತಿಯನ್ನು ಜಾರಿಗೆ ತರುವುದು ಕಷ್ಟ. ಅದೂ ಅಲ್ಲದೆ ಈ ಪದ್ಧತಿ ಹಿತಮಿತವಾಗಿ ನೀರು ಹಾಯಿಸುವ ಸೌಕರ್ಯವನ್ನುಳ್ಳ ಭೂಮಿಗಳಿಗೆ ಹೊಂದುವ ಹಾಗೆ ಸದಾ ನೀರಾಡುವ ಗದ್ದೆ ಬಯಲುಗಳಿಗೂ ಮಲೆನಾಡು ಪ್ರದೇಶಗಳಿಗೂ ಮಳೆ ಬಂದಾಗ ಮಾತ್ರ ನೀರಾಡುವ ಮಳೆಯಾಶ್ರಿತ ಒಣಭೂಮಿಗಳಿಗೂ ಹೊಂದುತ್ತದೆಯೆ ಇಲ್ಲವೆ ಎಂಬುದು ಇನ್ನೂ ಪೂರ್ಣವಾಗಿ ಪರೀಕ್ಷಿತವಾಗಿಲ್ಲ. ಹಾಗೆಯೇ ಇದು ಮೂಲಭೂತವಾಗಿ ಮಿಶ್ರಬೆಳೆ ವ್ಯವಸ್ಥೆಯಾದು ದರಿಂದ ಆಹಾರಧಾನ್ಯಗಳ ಪೂರ್ಣಪ್ರಮಾಣದ ಉತ್ಪಾದನೆಗೆ ಅಷ್ಟಾಗಿ ನೆರವಾಗುವುದಿಲ್ಲ. ಹಾಗಾಗಿ ನಿಧಾನವಾಗಿ ಫಲಿಸುವ ಸುಸ್ಥಿರ ಕೃಷಿ ಶರವೇಗದಲ್ಲಿ ಜನಸಂಖ್ಯಾಹೆಚ್ಚಳವನ್ನು ಸಾಧಿಸುತ್ತಿರುವ ಭರತಖಂಡದ ಆಹಾರ ಸ್ವಾವಲಂಬನೆಗೆ ತಾತ್ಕಾಲಿಕವಾಗಿಯಾದರೂ ಧಕ್ಕೆಯನ್ನುಂಟುಮಾಡುತ್ತದೆ.

ಇನ್ನೊಂದು ಗಮನಾರ್ಹ ಅಂಶವೆಂದರೆ ಇಂದಿನ ಸಾಮಾನ್ಯ ರೈತ ತನಗೆ ಮತ್ತು ತನ್ನ ಕುಟುಂಬಕ್ಕೆ ಬೇಕಾದ ಪೌಷ್ಟಿಕ ಆಹಾರ, ತರಕಾರಿ, ಸಾಂಬಾರ ಪದಾರ್ಥಗಳನ್ನಷ್ಟೇ ಉತ್ಪಾದಿಸಿಕೊಳ್ಳಲು ಕೃಷಿ ಮಾಡುವುದಿಲ್ಲ. ಮಕ್ಕಳ ವಿದ್ಯಾಭ್ಯಾಸದ ವೆಚ್ಚ, ಮದುವೆ ಮುಂಜಿಗಳ ವೆಚ್ಚ, ರೋಗರುಜಿನಗಳ ಚಿಕಿತ್ಸೆಗೆ ಅಗತ್ಯವಾದ ವೆಚ್ಚ, ಈ ಎಲ್ಲವನ್ನೂ ಕೃಷಿಯಿಂದ ಗಳಿಸಬೇಕೆಂದು ಹೆಣಗಾಡುತ್ತಾನೆ. ತೋಟ ತುಡಿಕೆ ಕಟ್ಟಿಕೊಂಡಿರುವವರೂ ವಾಣಿಜ್ಯ ಬೆಳೆಗಳನ್ನು ಬೆಳೆಯುವವರೂ ಸುಸ್ಥಿರ ಕೃಷಿಯಿಂದ ಎರಡು ಮೂರು ವರ್ಷಗಳಲ್ಲಿ ಅದೂ ತಮ್ಮ ಉತ್ಪನ್ನಗಳಿಗೆ ಲಾಭದಾಯಕ ಬೆಲೆ ದೊರೆತರೆ ಅಷ್ಟನ್ನು ಗಳಿಸಬಹುದೇ ಹೊರತು ಸಾಮಾನ್ಯ ರೈತರಲ್ಲ.

ಆದ್ದರಿಂದ ಸುಸ್ಥಿರ ಕೃಷಿಯೂ ಸೇರಿದಂತೆ ಯಾವ ಕೃಷಿ ಪದ್ಧತಿಯೂ ಏಕಾಂಗಿಯಾಗಿ ನಮ್ಮ ರೈತರ ಮತ್ತು ರಾಷ್ಟ್ರದ ಅಗತ್ಯಗಳನ್ನು ಪೂರೈಸಲಾರದು. ಸಾವಯವ ಕೃಷಿಪದ್ಧತಿ, ರಾಸಾಯನಿಕ ಕೃಷಿಪದ್ಧತಿ, ಸುಸ್ಥಿರ ಕೃಷಿಪದ್ಧತಿ – ಈ ಎಲ್ಲ ಕೃಷಿಪದ್ಧತಿಗಳ ಒಳ್ಳೆಯ ಅಂಶಗಳನ್ನು ಸಮುಚಿತವಾಗಿ ಬೆರೆಸಿ ಸಿದ್ಧಪಡಿಸಿದ ಸಂಯೋಜಿತ (ಇಂಟಿಗ್ರೇಟೆಡ್) ಕೃಷಿಪದ್ಧತಿ ಮಾತ್ರ ಅಂಥ ಅಗತ್ಯಗಳನ್ನು ಪೂರೈಸಬಲ್ಲದು.



ಹೆಚ್. ಸಿದ್ದಲಿಂಗಯ್ಯ
ನಿವೃತ್ತ ಪ್ರಾಚಾರ್ಯ, ೧೧೮೧, ೩ನೇ ಮುಖ್ಯರಸ್ತೆ
ಅರವಿಂದ ನಗರ, ಮೈಸೂರು – ೨೩



## ಯಜಮಾನ

ಸೆತಿಯನೊಯ್ದು
ಮಾರುಕಟ್ಟೆಯಲಿಟ್ಟು
ಮಾರಾಟ ಮಾಡಿದ ಭೂಪನೊಬ್ಬ
ಕೀರ್ತಿ ಗಳಿಸಿ
ಸತ್ಯವಂತನಾದ

ಬಸುರಿ ಹೆಂಡತಿಯ
ನಿರ್ದಯದಿ ಕಾಡಿಗಟ್ಟಿದ
ಕರ್ಮಠನೊಬ್ಬ
ದೇವಾದಿದೇವನಾದ

ಜೂಜಿನಲ್ಲಿ ಪತ್ನಿಯ
ನಿರ್ಲಜ್ಜದಿ ಅಡವಿಟ್ಟು
ಅವಳು ಬೆತ್ತಲೆಯಾಗುವಾಗ
ತಲೆ ತಗ್ಗಿಸಿದವನೊಬ್ಬ
ಧರ್ಮಾತ್ಮನಾದ

ಅರ್ಧರಾತ್ರಿಯಲಿ
ಅರ್ಧಾಂಗಿಯನು ತೊರೆದು
ನಿರ್ಲಿಪ್ತನಾಗಿ
ಕಾಡು ಸೇರಿದವ ಬುದ್ಧನಾದ

ಹೆಣ್ಣು
ಈ ಗಂಡಸರಿಗೆಲ್ಲ ಆಸ್ತಿ
ಗಂಡು ಅವಳಿಗೆ ಯಜಮಾನ

ಕುಸುಮ ನಕೋಸಾ ಕರಾಳೆ
ಉಪನ್ಯಾಸಕಿ, ಪ್ರಾಣಿಶಾಸ್ತ್ರ ವಿಭಾಗ, ಕರ್ನಾಟಕ ಸಾಯನ್ಸ್ ಕಾಲೇಜ್, ಧಾರವಾಡ

# ಬೆಳಗಾವಿಯಲ್ಲಿ ಯುದ್ಧಾಭ್ಯಾಸ

**ನಮ್ಮ ಬಲಾಬಲಗಳನ್ನು ಸ್ವಯಂಸಾಧಿಸಿ ಭಾರತವು ಅಂತರರಾಷ್ಟ್ರೀಯ ಮಟ್ಟದಲ್ಲಿ ತನ್ನ ವರ್ಚಸ್ಸನ್ನು ಹೆಚ್ಚಿಸಿಕೊಳ್ಳುವ ಅವಕಾಶ ಇದ್ದಾಗಲೂ, ಈಗ ಅಮೆರಿಕಾದೊಡನೆ ಬೆಳೆಯುತ್ತಿರುವ ಮಿಲಿಟರಿ ಸಹಯೋಗ ನೋಡಿದರೆ ನಮ್ಮ ವಿದೇಶಾಂಗ ಮತ್ತು ರಕ್ಷಣಾ ಇಲಾಖೆಗಳಲ್ಲಿ ದೃಢ-ಚಿತ್ತದ ಪ್ರಭಾವ ಬೀರುವ ಅಧಿಕಾರಿಗಳು ಇಲ್ಲವಾಗಿದ್ದು, ಎಲ್ಲೋ ಕೆಲವು ಅಮೆರಿಕಾದ ಪರ ಇರುವವರು ಮಾತ್ರ ಭಾರತವನ್ನು ಅಮೆರಿಕಾದ ಕೇವಲ ಒಂದು ಬಾಲಬಡುಕ ರಾಷ್ಟ್ರವನ್ನಾಗಿ ಮಾಡಲು ನಿರತವಾಗಿವೆಯೋ ಏನೋ ಎಂಬ ಶಂಕೆ ಉಂಟಾಗುತ್ತದೆ. ಇಂತಹ ಶಕ್ತಿಗಳ ವಿರುದ್ಧ ಸಮರ ಸಾರುತ್ತಲೇ ನಮ್ಮ ಸ್ವಾತಂತ್ರ್ಯ, ಸಾರ್ವಭೌಮತ್ವಗಳನ್ನು ಉಳಿಸಿ ಬೆಳೆಸಲು ನಾವೆಲ್ಲರೂ ಸಜ್ಜಾಗಬೇಕಾಗಿದೆ.**

**ವೈ. ಸಿ. ಸುಬ್ರಹ್ಮಣ್ಯ**

**ಕೆ**ಲವು ತಿಂಗಳುಗಳ ಹಿಂದೆ ಬೆಳಗಾವಿ ಮಾಧ್ಯಮಗಳ ಶಿರೋಲೇಖನಗಳ ಪ್ರಮುಖ ಸ್ಥಾನಗಳನ್ನು ತನ್ನದಾಗಿಸಿಕೊಂಡಿತ್ತು. ಕಾರಣ, ಅವ್ಯಾಹತವಾಗಿ ನಡೆಯುತ್ತಲೇ ಇರುವ ಮಹಾರಾಷ್ಟ್ರ-ಕರ್ನಾಟಕಗಳ ನಡುವಿನ ಗಡಿವಿವಾದ ಒಂದಿಷ್ಟು ಬಿಸಿ ಏರಿದ್ದು, ಮಹಾರಾಷ್ಟ್ರ ತೆಗೆದುಕೊಂಡ ಕ್ರಮಗಳಿಗೆ ಪ್ರತಿಕ್ರಿಯೆಯಾಗಿ ಬೆಳಗಾವಿಯನ್ನು (ಕರ್ನಾಟಕ) ರಾಜ್ಯದ ಎರಡನೇ ರಾಜಧಾನಿ ಎಂದು ಘೋಷಿಸಿದ್ದೇ ಅಲ್ಲದೆ, ಅತಿ ತ್ವರೆಯಿಂದ ಅಲ್ಲಿ (ಮೊಟ್ಟಮೊದಲಿಗೆ ಬೆಂಗಳೂರಿನಿಂದ ಹೊರಗೆ) ವಿಧಾನಸಭೆ ಅಧಿವೇಶನವನ್ನು ಯಶಸ್ವಿಯಾಗಿ ನಡೆಸಿದ್ದು; ಬೆಳಗಾವಿ ಕರ್ನಾಟಕದ್ದೇ ಎಂದು ಪುನಃಸ್ಪಷ್ಟೀಕರಿಸಿತು.

ಈ ಮೇಲಿನದು ಒಂದು ವಿಶೇಷತೆಯಾದರೆ, ಡಿಸೆಂಬರ್ ತಿಂಗಳ ಶುರುವಿನಲ್ಲಿ ಬೆಳಗಾವಿಯಲ್ಲಿ ನಡೆದ ಭಾರತ-ಅಮೆರಿಕಾ ಜಂಟೀ ಯುದ್ಧಾಭ್ಯಾಸ ಅತ್ಯಂತ ಮಹತ್ವದ್ದಾಗಿದೆ ಮತ್ತು ಗಂಭೀರ ಪರಿಣಾಮ ಬೀರಬಹುದಾದ ಘಟನೆಯಾಗಿದೆ ; ಈ ಬೆಳವಣಿಗೆಯೇನೂ ಸರ್ವೇ ಸಾಧಾರಣವಾದುದಲ್ಲ. ಹತ್ತು ದಿನಗಳ ಕಾಲ ಜರುಗಿದ ಕಾರ್ಯಾಚರಣೆಯಲ್ಲಿ ಭಾರತ ಸೇನಾ ತುಕಡಿಗಳು ಅಮೆರಿಕಾದ ಖ್ಯಾತ 'ಮೆರೀನ್' ತುಕಡಿಗಳೊಂದಿಗೆ ಶಸ್ತ್ರಾಭ್ಯಾಸ ನಡೆಸಿದವು. ಇದಕ್ಕೆ 'ಶತ್ರುಜೀತ್' ಎಂದೂ ಹೆಸರಿಡಲಾಗಿತ್ತು. ಇದರ ಉದ್ದೇಶ ಭಯೋತ್ಪಾದಕತೆ - ವಿರೋಧಿ ಕಾರ್ಯಾಚರಣೆಗಳ ಅಭ್ಯಾಸವೆಂದು ಹೇಳಲಾಗಿದೆ. ರಾಜಕೀಯ, ಆರ್ಥಿಕ ಮತ್ತು ಮಿಲಿಟರಿ ವಲಯಗಳಲ್ಲಿ ಅಮೆರಿಕಾ ಸಂಯುಕ್ತ ಸಂಸ್ಥಾನಗಳ ನಡುವಿನ ಸಂಬಂಧಗಳು ಶಕ್ತಿಶೀಲವಾಗುವಂತೆ ತೆಗೆದು ಕೊಳ್ಳುತ್ತಿರುವ ಕಾರ್ಯಗಳ ಒಂದು ಅಂಗವೆಂದು ಇದನ್ನು ಪರಿಗಣಿಸಬಹುದಾಗಿದೆ. ಇಂತಹ ಧೋರಣೆಯ ಮತ್ತು ಕಾರ್ಯಕ್ರಮಗಳ ಪರಿಣಾಮವೇನು ಮತ್ತು ಇವುಗಳ ಹಿನ್ನೆಲೆಯೇನು ಎಂಬುದನ್ನು ಸೂಕ್ಷ್ಮವಾಗಿ ಪರಿಶೀಲಿಸುವುದು ಅತ್ಯವಶ್ಯಕ.

ಮೇಲೆ ಹೇಳಿದ ಜಂಟಿ-ಅಭ್ಯಾಸದ ಜೊತೆಗೆ ಇತರ ಅಭ್ಯಾಸಗಳೂ ಭರದಿಂದ ಸಾಗುತ್ತಿವೆ. ಉದಾಹರಣೆಗೆ, ಜುಲೈ, ೨೦೦೬ರಲ್ಲಿ ಪಶ್ಚಿಮ ಬಂಗಾಳದ ಕಲೈಕುಂಡದಲ್ಲಿ ಇರುವ ಭಾರತ ವಾಯುಸೇನೆಯ ಒಂದು ನೆಲೆಯಲ್ಲಿ ಭಾರತ ಮತ್ತು ಅಮೆರಿಕಾ ವಾಯುಸೇನೆಯ ಜಂಟಿ ಅಭ್ಯಾಸ ಜರುಗಿತು. ಅಮೆರಿಕಾದ ಕಡೆಯಿಂದ ಅವರ ಪೆಸಿಫಿಕ್ ಕಮ್ಯಾಂಡಿನ ವಾಯುಸೇನೆ ಭಾಗವಹಿಸಿತು. ಅಮೆರಿಕಾ ಸೇನೆಗಳ ಅನುಕೂಲಕ್ಕಾಗಿ ಅಗಾಧ ಖರ್ಚಿನಲ್ಲಿ ಈ ವಾಯುಸೇನಾ ಕೇಂದ್ರವನ್ನು ಉತ್ತಮಗೊಳಿಸಲಾಗಿತ್ತು. ಗಮನಿಸಬೇಕಾದ ಅಂಶವೇನೆಂದರೆ, ಕಲೈಕುಂಡಾ ದೇಶದ ಪೂರ್ವಭಾಗದಲ್ಲಿದ್ದು, ಅದು ಈಶಾನ್ಯ ಸರಹದ್ದಿಗೂ ಅದಕ್ಕೂ ಮುಂದೆ ಈಶಾನ್ಯ ಹಿಮಾಲಯದ ಆಚೆಗೂ, (ವಾಯುಸೇನೆಗಳ ಕಾರ್ಯ ಶಕ್ತಿಯ ಭಾಷೆಯಲ್ಲಿ ಹೇಳುವುದಾದರೆ) ''ಒಂದು ಕಲ್ಲೆಸೆಯುವ ದೂರ''ದಲ್ಲಿದೆ.

ಈ ಜಂಟಿ ಕಾರ್ಯಾಚರಣೆಗೆ ದೇಶದೆಲ್ಲೆಡೆ, ಅದರಲ್ಲೂ ಪಶ್ಚಿಮ ಬಂಗಾಳದಲ್ಲಿ ಪ್ರತಿಭಟನೆಗಳು ನಡೆದವು. ಅಭ್ಯಾಸ ನಡೆದ ಸಂದರ್ಭದಲ್ಲಿ ಪಶ್ಚಿಮ ಬಂಗಾಳದ ಜನತೆ ಈ ವಾಯುಕೇಂದ್ರದ ಹೊರಗೆ ಪ್ರತಿಭಟನೆ ಹೂಡಿ ತಮ್ಮ ವಿರೋಧವನ್ನು ವ್ಯಕ್ತಪಡಿಸಿದರು. ಇಲ್ಲಿ ಪ್ರಸಕ್ತ ಸನ್ನಿವೇಶದ ಬೆಳವಣಿಗೆಯನ್ನು ಅರ್ಥಮಾಡಿಕೊಳ್ಳಬೇಕಾದ ಅವಶ್ಯಕತೆಯನ್ನು ಒತ್ತಿ ಹೇಳಬೇಕಾಗಿಲ್ಲ.

ಶೀತಲಯುದ್ಧದ ದಶಕಗಳಲ್ಲಿ ನಮ್ಮ ದೇಶದ ಆಡಳಿತ ವಲಯಗಳಲ್ಲಿನ ಅಭಿಪ್ರಾಯ ಏನೇ ಆಗಿರಲಿ, ತದ ನಂತರದ ಅವಧಿಯಲ್ಲಿ ''ಭಾರತ, ಅಮೆರಿಕಾ ಎರಡೂ ಸ್ವಾಭಾವಿಕ ಒಡನಾಡಿಗಳು. ನಾವಿಬ್ಬರೂ ಮಿತ್ರ ರಾಷ್ಟ್ರಗಳು ಮತ್ತು ಅಮೆರಿಕಾ ಸಂಯುಕ್ತ ಸಂಸ್ಥಾನವು ೨೧ನೇ ಶತಮಾನ ದಲ್ಲಿ ಭಾರತವು ಜಾಗತಿಕ-ದರ್ಜೆಯ ಶಕ್ತಿಯಾಗಲು ಆಗುವ ನಿಟ್ಟಿನಲ್ಲಿ ಸಹಕರಿಸಲು ಉದ್ದೇಶಿಸುತ್ತದೆ'' ಎಂಬಂತಹ ಹೇಳಿಕೆಗಳನ್ನು ವಿಮರ್ಶಾತ್ಮಕವಾಗಿ ನೋಡದೆ ಸಾರಾಸಗಟಾಗಿ ಒಪ್ಪಿಕೊಳ್ಳುವಂತಹ ಪ್ರವೃತ್ತಿಗಳು ಹೆಚ್ಚಾಗುತ್ತಿವೆ. ಇಂದು ಜಗತ್ತಿನಲ್ಲಿ ಅಮೆರಿಕಾವು ಏಕೈಕ ಶಕ್ತಿಯಾಗಿದೆ. ಆ ದೇಶಕ್ಕೆ ತನ್ನ ಈ ಹಿರಿಮೆಯನ್ನು ಎಲ್ಲಾ ಕಾಲಕ್ಕೂ ಉಳಿಸಿಕೊಳ್ಳುವ ಕಾಲವ್ಯೂಹಾತ್ಮಕ (strategic) ಉದ್ದೇಶ/ಆಸಕ್ತಿಯಿದೆ.

**ರಕ್ಷಣಾ ಸಂಬಂಧದ ಹೊಸ ಚೌಕಟ್ಟು**

೨೮ನೇ ಜೂನ್ ೨೦೦೫ರಲ್ಲಿ ವಾಷಿಂಗ್ಟನ್‌ನಲ್ಲಿ ಅನಾವರಣಗೊಂಡ 'ಅಮೆರಿಕಾ-ಇಂಡಿಯಾ ರಕ್ಷಣಾ ಸಂಬಂಧದ ನೂತನ ಚೌಕಟ್ಟು' ಅಮೆರಿಕಾ-ಭಾರತ ನಡುವಿನ ರಕ್ಷಣಾ ಸಹಕಾರವನ್ನು ಇದುವರೆವಿಗೂ ಊಹಿಸಲಾಗದ ಮತ್ತು ಹಿಂದೆಂದೂ ಆಗದಿದ್ದಂತಹ ಮಟ್ಟಕ್ಕೆ ಕೊಂಡೊಯ್ದಿದೆ ಎಂದರೆ ಅತಿಶಯೋಕ್ತಿಯಲ್ಲ. ಇದುವರೆಗೆ ಇದ್ದ, ಆದರೆ ಪರಸ್ಪರ ಸಂಬಂಧವಿಲ್ಲದಿದ್ದ ಮತ್ತು ಅಂತಹ ಗಹನವೇನೂ ಅಲ್ಲದ ಒಡಂಬಡಿಕೆಗಳನ್ನು ಒಂದು ನಿರ್ದಿಷ್ಟ ಚೌಕಟ್ಟಿನೊಳಗೆ ನಿಗದಿಪಡಿಸಲಾಗಿದೆ ಹಾಗೂ ಬಹಳ ಗಂಭೀರ ಪರಿಣಾಮವುಳ್ಳ ಅಂಶಗಳನ್ನು ಜೋಡಿಸಲಾಗಿದೆ. ಈ ಚೌಕಟ್ಟಿನ ಕೆಲವು ಅಧಿನಿಯಮಗಳ ಪ್ರಕಾರ ಬಹುರಾಷ್ಟ್ರೀಯ ಕಾರ್ಯಾಚರಣೆಗಳಲ್ಲಿ ಜೊತೆಗೂಡಿ ಕೆಲಸ ಮಾಡುವುದು, ಕ್ಷಿಪಣಿ ರಕ್ಷಣೆಗೆ ಸಂಬಂಧಪಟ್ಟಂತೆ ಜಂಟೀ ಕಾರ್ಯಾಚರಣೆಯನ್ನು ವಿಸ್ತರಿಸುವುದು, ಜಗದಾದ್ಯಂತ ಶಾಂತಿಪಾಲನಾ ಕಾರ್ಯಕ್ರಮ ಗಳನ್ನು ನಿರ್ವಹಿಸುವಲ್ಲಿ ಸಹಾಯಹಸ್ತ ನೀಡುವುದು, ಪ್ರಜಾಪ್ರಭುತ್ವ ಜಗತ್ತಿನೆಲ್ಲೆಡೆ ನೆಲೆಸುವಂತೆ ಮಾಡುವುದು ಇಂತಹ ಅಂಶಗಳೆಲ್ಲವೂ ಈ ಹೊಸ ರಕ್ಷಣಾ ಒಡಂಬಡಿಕೆಯಲ್ಲಿ ಅಡಕವಾಗಿವೆ. ಈ ಅಂಶಗಳು ವಿದೇಶಾಂಗ ಮತ್ತು ರಾಜಕೀಯ ನೀತಿಗಳ ಮೇಲೆ ಪ್ರಭಾವ ಬೀರುವಂತಹವು ಎನ್ನುವುದು ಗಮನಾರ್ಹ. ಈಗಿನ ಅಮೆರಿಕಾದ ಅಧ್ಯಕ್ಷರ ಕಾಲ ವ್ಯೂಹಾತ್ಮಕ ಧೋರಣೆಗಳಲ್ಲಿ, ಏಕಧ್ರುವೀಕರಣ ನೀತಿಯು ಬಹು ಮುಖ್ಯವಾದ ಅಂಶ. ಆ ಹಿನ್ನೆಲೆಯಲ್ಲಿ, ಈ ಒಪ್ಪಂದದಿಂದ ಕಂಡುಬರುವುದೇನೆಂದರೆ, ನಮ್ಮೆರಡು ದೇಶಗಳ ನಡುವಿನ ಕಾಲವ್ಯೂಹಾತ್ಮಕ ಸಹಕಾರದ ತಂತುಗಳನ್ನು ಗುಣಾತ್ಮಕವಾಗಿ ಬೇರೊಂದು ಅಂತಸ್ತಿಗೆ ಕೊಂಡೊಯ್ದು, ಅದರ ಮೂಲಕ ಏಕಧ್ರುವೀಕರಣದ ಕೆಲವು ಮಿಲಿಟರಿ ಮತ್ತು ರಾಜಕೀಯ ಘನ ಜವಾಬ್ದಾರಿಗಳನ್ನು ಭಾರತಕ್ಕೆ ವಹಿಸಬಹುದು ಎಂಬ ಅಪೇಕ್ಷೆ ಅಮೆರಿಕಾಕ್ಕೆ ಇದೆ.

ಅಮೆರಿಕಾದ ಸಾಮ್ರಾಜ್ಯಶಾಹಿ ಕಾರ್ಯಾಚಾರಣೆಗಳು ಏಷ್ಯಾ ಖಂಡದಲ್ಲಿ ಉಂಟುಮಾಡಿರುವ ಅಸ್ಥಿರತೆ ವಿಷಯದಲ್ಲಿ ಎರಡು ಅಭಿಪ್ರಾಯಗಳಿಲ್ಲ. ಇರಾಕಿ ಮೇಲಿನ ಸಶಸ್ತ್ರ ಆಕ್ರಮಣ, ಇರಾನ್, ಸಿರಿಯಾ ಮತ್ತು ಉತ್ತರ ಕೊರಿಯಾಗಳಿಗೆ ಒಡ್ಡಿರುವ ಬೆದರಿಕೆಗಳ ಹಿಂದಿರುವ ಉದ್ದೇಶವೂ ಇದುವೇ ಆಗಿದೆ. ಆ ರಾಷ್ಟ್ರಗಳಲ್ಲಿ ತನ್ನ ಕೈಗೊಂಬೆಯಾಗಿರದ ಸರ್ಕಾರಗಳನ್ನು ಬುಡಮೇಲುಮಾಡಲು ಅಮೆರಿಕಾ ಹವಣಿಸುತ್ತಿದೆ. ಎಂದಾಗ, ಎಲ್ಲೆಡೆ ಪ್ರಜಾಪ್ರಭುತ್ವವನ್ನು ಸ್ಥಾಪಿಸುವ ನಿಟ್ಟಿನಲ್ಲಿ ಭಾರತವು ಸಹಕರಿಸಬೇಕೆಂದು ಹೇಳುವ ಈ ಒಪ್ಪಂದದ ಪ್ರಕಾರ, ನಮ್ಮ ರಾಷ್ಟ್ರ ಈ ಕ್ಷೇತ್ರಗಳಲ್ಲೆಲ್ಲಾ ಅಮೆರಿಕಾದೊಡನೆಯಾಗಲೀ ಅಥವಾ ಅದರ ಪರವಾಗಿ ತಾನೇತಾನಾಗಿ ಕ್ರಮ ತೆಗೆದುಕೊಳ್ಳಲು ಸಿದ್ಧವಿದೆಯೇ? ಜುಲೈ ೨೦೦೩ರಲ್ಲಿ ಭಾರತ ಬಹುರಾಷ್ಟ್ರೀಯ

**ಬಿಡುಗಡೆ**

ಬೀಜದೊಳಗೆ ಅಡಗಿ ಕೂತಿದೆ
ಆಲ ಹೆಜ್ಜಾಲ ಮಾವು ಬೇವು
ಕೋಶ ಸೀಳಿ ಹೊರಬಂದಾಗ
ಶಬ್ದಾರ್ಥಗಳು ಅರಳುತ್ತವೆ

**ವಾಸುದೇವ ನಾಡಿಗ್**
ಚಿಂತಾಮಣಿ

ಕಾರ್ಯಾಚರಣೆಯ ಹೆಸರಿನಲ್ಲಿ ಅಮೆರಿಕಾದ ಆಕ್ರಮಣಕ್ಕೆ ತುತ್ತಾಗಿದ್ದ ಇರಾಕಿಗೆ ನಮ್ಮ ಸೈನಿಕ ಪಡೆಯನ್ನು ರವಾನಿಸುವ ಉದ್ದೇಶವನ್ನು ಭಾರತ ಸರ್ಕಾರ ವ್ಯಕ್ತಪಡಿಸಿದ್ದರೂ, ಅದು ಜನಾಗ್ರಹದಿಂದ ಅಂತಹ ಕ್ರಮವನ್ನು ಕೈಗೊಳ್ಳಲಾಗದಿದ್ದುದು ಎಲ್ಲರಿರಗೂ ತಿಳಿದ ವಿಷಯವೇ. ಮುಂದೂ ಇಂತಹ ಪ್ರಸಂಗ ಒದಗಿಬಂದರೆ ಆಶ್ಚರ್ಯವಿಲ್ಲ.

ಏಷ್ಯಾ ಖಂಡವೂ ಜಗತ್ತಿನಲ್ಲೇ ಅತಿ ಪ್ರಮುಖ ಕೇಂದ್ರವಾಗಿ ರೂಪುಗೊಳ್ಳುತ್ತಿದೆ. ಅದರಲ್ಲೂ, ಚೀನಾ ಅಮೆರಿಕಾಕ್ಕೆ ಸವಾಲು ಒಡ್ಡುತ್ತಿದೆ. ಈ ಹಿನ್ನೆಲೆಯಲ್ಲಿ ಏಷ್ಯಾದಲ್ಲಿ ದೃಢವಾಗಿ ಬೇರೂರುವುದು ಅಮೆರಿಕಾಕ್ಕೆ ಅಗತ್ಯವಾಗಿದೆ. ಈ ಮೂಲಭೂತ ಗುರಿ ಸಾಧಿಸುವುದರಲ್ಲಿ ಅಮೆರಿಕಾ ಇತ್ತೀಚಿನ ರಕ್ಷಣಾ ಒಪ್ಪಂದದ ಮೂಲಕ ಭಾರತವು ತನ್ನ ಪರವಾಗಿರುವಂತೆ ಪಿತೂರಿ ಹೂಡುತ್ತಿದೆ. ಇದೇ ದಿಶೆಯಲ್ಲಿ ಅಮೆರಿಕಾದ ಕಡೆಯಿಂದ ರಕ್ಷಣಾ ಕ್ಷೇತ್ರದಲ್ಲಿ ಶಸ್ತ್ರಾಸ್ತ್ರ ವ್ಯಾಪಾರ ಮತ್ತು ಸಹ-ನಿರ್ಮಾಣ ಮತ್ತು ತಂತ್ರಜ್ಞಾನ ಕ್ಷೇತ್ರದಲ್ಲಿ ಸಹಕಾರ ಎರಡನ್ನೂ ಪ್ರಸ್ತಾಪಿಸಲಾಗಿದೆ. ಎಫ್-೧೬ ಫೈಟರ್ ವಿಮಾನ ಮಾರಾಟ ಮಾಡುವ ಇಚ್ಛೆ, ಪೇಟ್ರಿಯಟ್ ಕ್ಷಿಪಣಿ ರಕ್ಷಣಾ ವ್ಯವಸ್ಥೆ ಬಗ್ಗೆ ಮಾಹಿತಿ ನೀಡುವ ಕಾತುರತೆ, ಇವೆಲ್ಲವೂ ಮೇಲೆ ಸೂಚಿಸಿದ ಕಾರ್ಯಕ್ರಮದ ಭಾಗಗಳಾಗಿವೆ. ಇದರಿಂದಾಗಿ ಇವೆಲ್ಲವೂ ಕಾರ್ಯಗತಗೊಂಡರೆ ಅಮೆರಿಕಾದ ಶಸ್ತ್ರಾಸ್ತ್ರ ನಿರ್ಮಾಪಕರು ಕೊಟ್ಯಂತರ ರೂಪಾಯಿ ಲಾಭ ಗಳಿಸುತ್ತಾರೆ.

ಈ ರಕ್ಷಣಾ ಒಡಂಬಡಿಕೆಯ ನೂತನ ಚೌಕಟ್ಟಿಗೆ ಮತ್ತೊಂದು ಗಮನಾರ್ಹ ಅಂಶವಿದೆ. ನಮ್ಮ ರಕ್ಷಣಾ ಮಂತ್ರಿಗಳು ಅಮೆರಿಕಾಕ್ಕೆ ತೆರಳುವ ಮುನ್ನ, ''ಇದು ಬಹು ಕಾಲದ ನಂತರ ಭಾರತದ ರಕ್ಷಣಾ ಮಂತ್ರಿಯೊಬ್ಬರು ನೀಡುತ್ತಿರುವ ಭೇಟಿ; ಈ ಭೇಟಿಯ ಉದ್ದೇಶವೆಂದರೆ, ವಾಸ್ತವ ಪರಿಸ್ಥಿತಿಯನ್ನು ಅವಲೋಕಿಸುವುದಷ್ಟೆ'' ಎಂದು ಹೇಳಿಕೆ ನೀಡಿದರು. ಆದರೆ ಆ ನೆಲದಲ್ಲಿ ಕಾಲಿಟ್ಟ ಒಡನೆಯೇ ಇಂತಹ ಮಹತ್ವಪೂರ್ಣ ಒಡಂಬಡಿಕೆಗೆ ಸಹಿ ಹಾಕಿಬಿಟ್ಟರು. ಇದೇನು ಇದ್ದಕ್ಕಿದ್ದಂತೆ ಆದದ್ದಲ್ಲ. ಸುಮಾರು ವರ್ಷದ ಹಿಂದೆ ಇದ್ದ ವಿದೇಶಾಂಗ ಕಾರ್ಯದರ್ಶಿಯವರೊಬ್ಬರು ಹೇಳುವಂತೆ, ಇಂತಹ ವಿಷಯವನ್ನು ಶೂನ್ಯದಿಂದಾಗಲೀ ಯಕ್ಷಿಣಿಯ ಚಮತ್ಕಾರದ ಮೂಲಕವಾಗಲೀ ಆಗಗೊಳಿಸಲಾಗುವುದಿಲ್ಲ. ಇವೆಲ್ಲಕ್ಕೂ ಪೂರ್ವಸಿದ್ಧತೆಯಾದಂತಿದೆ. ಇದು ಭಾರತದ ವಿದೇಶಾಂಗ ನೀತಿ ಬದಲಾಗುತ್ತಿರುವುದಕ್ಕೆ ದಿಕ್ಸೂಚಿಯಾಗಿದೆ.

ಈ ರಕ್ಷಣಾ ಚೌಕಟ್ಟಿಗೆ ಜೂನ್ ೨೮ರಂದು ಸಹಿ ಹಾಕಲಾಯಿತು. ಜುಲೈ ೧೮ರಂದು ಮತ್ತೊಂದು ಮಹತ್ವದ ಒಡಂಬಡಿಕೆಯೂ ಜಾರಿಗೆ ಬಂತು. ಅದೇ 'ಅಮೆರಿಕಾ-ಭಾರತದ ನಡುವಿನ ಪರಮಾಣು ಒಡಂಬಡಿಕೆ.' ನಮ್ಮ ಆಡಳಿತ ವರ್ಗಕ್ಕೆ ಈ ಒಡಂಬಡಿಕೆಯನ್ನು ಕಾರ್ಯಗತ ಮಾಡಿಕೊಳ್ಳುವುದಕ್ಕಿರುವ ಕಾತುರ ಅಷ್ಟಿಷ್ಟಲ್ಲ.

**ಹಿನ್ನೆಲೆ**

''ಭಾರತ ಅಮೆರಿಕಾ ಮಿಲಿಟರಿ ಸಂಬಂಧ - ನಿರೀಕ್ಷಣೆಗಳು ಮತ್ತು ವಿವೇಚನೆಗಳು''

ಅಕ್ಟೋಬರ್ ೨೦೦೨ರಲ್ಲಿ ಅಮೆರಿಕಾದ ಪೆಂಟಗನ್ ಮೇಲ್ವಿಚಾರಿಸಿದ ವರದಿಯನ್ನು ತಯಾರಿಸಲು ವಿಧ್ಯುಕ್ತವಾಗಿ ಪ್ರಾರಂಭಿಸಿತು. ಇದರ ಕರ್ತೃ ಅಲ್ಲಿನ ಸುದ್ದಿ-ಮಾಹಿತಿ ಖಾತೆಯ ತತ್ವಜ್ಞಾನದ ಪರಿಶೀಲನಾ ಕೇಂದ್ರದ ಜೂಲಿ ಎ. ಮೆಕ್ಡೋನಾಲ್ಡ್ ಅವರು. ಈ ಕೇಂದ್ರಕ್ಕೆ ರಕ್ಷಣಾ ಇಲಾಖೆಯ ಅಧಿಕೃತ ಸಂಬಂಧವಿದೆ. ಈ ವರದಿ ಹಿಂದಿರುವ ಉದ್ದೇಶ: ''ಮಿಲಿಟರಿಯ ಸಹಕಾರಕ್ಕೆ ಇರುವ ಅವಕಾಶಗಳನ್ನು ಮತ್ತು ಅವಕ್ಕಿರುವ ಅಡ್ಡಿ-ಆಡಚಣೆಗಳ ಪರಿಶೀಲನೆ.'' ತಜ್ಞರ ಪ್ರಕಾರ, ಈ ವರದಿಯು ಇತ್ತೀಚಿನ ವರ್ಷಗಳಲ್ಲಿನ ಭಾರತ ಮತ್ತು ಅಮೆರಿಕಾಗಳ ಸಂಬಂಧಗಳು ಸಾಗುತ್ತಿರುವ ದಿಕ್ಕನ್ನು ಅರ್ಥಮಾಡಿಕೊಳ್ಳುವ ನಿಟ್ಟಿನಲ್ಲಿ ಅತ್ಯಮೂಲ್ಯವಾದದ್ದು.

ಈ ವರದಿಯನ್ನು ಅಮೆರಿಕಾದ ನಲವತ್ತು ಹಿರಿಯ ಅಧಿಕಾರಿಗಳೊಡನೆ (ಮಿಲಿಟರಿ ಅಧಿಕಾರಿಗಳೂ ಸೇರಿದಂತೆ) ಮತ್ತು ಅಷ್ಟೇ ಸಂಖ್ಯೆಯ ಭಾರತದ ಅಧಿಕಾರಿಗಳೊಡನೆ ನಡೆಸಿದ ಸಂದರ್ಶನಗಳ ಆಧಾರದ ಮೇಲೆ ತಯಾರಿಸಲಾಗಿದೆ.

ಈ ವರದಿಯ ಪ್ರಕಾರ ಅಮೆರಿಕಾಕ್ಕೆ ಬೇಕಾಗಿರುವುದು ಒಬ್ಬ ದಕ್ಷ ಮಿಲಿಟರಿ ಪಾಲುಗಾರ ರಾಷ್ಟ್ರ. ಈ ರಾಷ್ಟ್ರವು ಏಷ್ಯಾದಲ್ಲಿ ದಿನನಿತ್ಯದ ಎಂದರೆ ಸಾಮಾನ್ಯವಾದ ಕಾರ್ಯಾಚರಣೆಗಳನ್ನು ನೋಡಿಕೊಳ್ಳುವುದರಲ್ಲಿ ಮಾತ್ರ ಹೆಚ್ಚು ಜವಾಬ್ದಾರಿ ವಹಿಸಿಬೇಕು; ಇದರಿಂದಾಗಿ ಅಮೆರಿಕಾದ ಮಿಲಿಟರಿಯು ತನ್ನ ಸಂಪನ್ಮೂಲಗಳನ್ನು ಮೇಲುದರ್ಜೆಯ ಕಾರ್ಯಾಚರಣೆಯಲ್ಲಿ ಹೋರಾಟಗಳಲ್ಲಿ ಉಪಯೋಗಿಸಿಕೊಳ್ಳಬಹುದಾಗಿದೆ. ಪೆಂಟಗನ್ನಿನ ೨೦೦೪ರ ಸಮೀಕ್ಷೆಯಲ್ಲಿ ಹೇಳುವುದೂ ಇದೆ.

ಮೆಕ್ಡೋನಾಲ್ಡರ ವರದಿಯ ಪ್ರಕಾರ ಅಮೆರಿಕನ್ನರು ಒಂದು ವಿಷಯದ ಮೇಲೆ ತಮ್ಮ ಗಮನವನ್ನು ಕೇಂದ್ರೀಕರಿಸಿದ್ದಾರೆ. ಅದೆಂದರೆ ''ಚೀನಾ ದೇಶವು ಏಷ್ಯಾವಲಯದಲ್ಲಿ ಅಮೆರಿಕಾದ ಸ್ಥಾನಕ್ಕೆ ಬೆದರಿಕೆ ಒಡ್ಡುವಂತಾದರೆ ಭಾರತ-ಅಮೆರಿಕಾ ಮಿಲಿಟರಿ ಸಂಬಂಧಗಳು ಚೀನಾದ ವಿರುದ್ಧ ನಿರ್ದೇಶಿಸಲ್ಪಡುವುದನ್ನು ಬಹಿರಂಗವಾಗಿ ಶಿಫಾರಸು ಮಾಡುವುದರಲ್ಲಾಗಲೀ ಅಥವಾ ಅದರ ಪರ ವಾದಿಸುವುದರಲ್ಲಾಗಲೀ ಭಾರತ ಮತ್ತು ಅಮೆರಿಕಾದ ಅಧಿಕಾರಗಳು ನಿರಾಸಕ್ತಿ ಹೊಂದಿದ್ದಾರೆ.'' ಅಮೆರಿಕಾದ ಅಡ್ಮಿರಲ್ ಒಬ್ಬರು ಹೇಳಿದರಂತೆ, ''ಚೀನಾವು ಒಂದು ಕಾಲವ್ಯೂಹಾತ್ಮಕ ಬೆದರಿಕೆಯಾಗಿದೆಯೆಂದು ಅಮೆರಿಕಾ ಮತ್ತು ಭಾರತ ಎರಡೂ ಪರಿಗಣಿಸುತ್ತವೆ. ಆದಾಗ್ಯೂ ಇದನ್ನು ನಾವು ಬಹಿರಂಗವಾಗಿ ಚರ್ಚಿಸುವುದಿಲ್ಲ.'' ಆದರೆ ಇಲ್ಲಿನ ಆತಂಕವೇನೆಂದರೆ ಇಂತಹ ಸಂಬಂಧಕ್ಕೆ ಆ ತೆರನಾದ, ಅಂದರೆ ಚೀನಾದ ಹಿತಾಸಕ್ತಿಗಳಿಗೆ ವಿರುದ್ಧವಾದ ಅಂಶಗಳನ್ನು ಮುಂದಿಟ್ಟಲ್ಲಿ ಭಾರತ-ಅಮೆರಿಕಾ ಸಂಬಂಧಗಳ ಬಗ್ಗೆ ಭಾರತೀಯರಲ್ಲಿ ಒಲವು ಮೂಡಿಸುವುದು ಕಷ್ಟದ ಕೆಲಸ ಎನ್ನುವುದು. ಆದಾಗ್ಯೂ ವರದಿಯು ಹೇಳುವುದೇನೆಂದರೆ, ''೨೦೨೦ರಲ್ಲಿ ಚೀನಾದ ಬೆದರಿಕೆಯನ್ನು ಎದುರಿಸುವು ದರಲ್ಲಿ ಅಮೆರಿಕಾ ಮಿಲಿಟರಿಗೆ ಸಹಾಯ ಮಾಡಲು ಸಾಮರ್ಥ್ಯವಿರುವಂತಹ ಮಿತ್ರ ರಾಷ್ಟ್ರ ನಮಗೆ ಅಗತ್ಯವಿದೆ. ಭಾರತವು ಚೀನಾಕ್ಕೆ ಪ್ರತಿಯಾಗಿ ಶಕ್ತಿಯುತ ರಾಷ್ಟ್ರವಾಗಿ ಬೆಳೆಯುತ್ತದೆ ಎನ್ನುವುದನ್ನು ನಾವು ನಿರಾಕರಿಸುವುದಿಲ್ಲ.''

ಈ ಚೀನಾ ಕೇಂದ್ರೀಕೃತ ಸಂಬಂಧವನ್ನು ಬಹಿರಂಗವಾಗಿ ಸೂಚಿಸಿದವರು ಅಮೆರಿಕಾದ ವಿದೇಶಾಂಗ ಮಂತ್ರಿ ಕೊಂಡೋಲೀಜ಼ಾ ರೈಸ್ ಅವರು. ಒಮ್ಮೆ ಅವರು ಅಧ್ಯಕ್ಷ ಬುಷ್ ಅವರಿಗೆ ಸೆಕ್ಯೂರಿಟಿ ಸಲಹಾಕಾರರಾಗಿದ್ದರು. ಟೋಕಿಯೋದಲ್ಲಿ ಮಾರ್ಚ್ ೧೯ರಂದು ಚೀನಾವು ಅಮೆರಿಕಾಕ್ಕೆ ಒಡ್ಡುತ್ತಿರುವ ಸವಾಲಿನ ಬಗ್ಗೆ ಪ್ರಶ್ನಿಸಿದಾಗ ''ನಾವು ಚೀನಾದ ಜೀವನದ ಕಡೆ ನೋಡಿ ದಾಗಲೆಲ್ಲಾ ನಾನು ನಿಜವಾಗಲೂ ನಂಬುವುದೇನೆಂದರೆ, ಅಮೆರಿಕಾ-ಜಪಾನ್ ಸಂಬಂಧ, ಅಮೆರಿಕಾ-ದಕ್ಷಿಣ ಕೊರಿಯಾ ಸಂಬಂಧ, ಅಮೆರಿಕಾ-ಭಾರತ ಸಂಬಂಧ ಇವುಗಳೆಲ್ಲವೂ ಸಂಬಂಧಿಸಿದಂತೆ ಚೀನಾವು ನಕಾರಾತ್ಮಕವಾದ ಪಾತ್ರವನ್ನಲ್ಲದೆ ಸಕಾರಾತ್ಮಕ ಪಾತ್ರವನ್ನು ವಹಿಸುವುದು ಹೆಚ್ಚು ಸಂಭವನೀಯವಾಗುವಂತಹ ಪರಿಸರವನ್ನು ನಿರ್ಮಿಸುವಲ್ಲಿ ಮಹತ್ವದ ಪಾತ್ರ ವಹಿಸುತ್ತದೆ. ಈ ಬಾಂಧವ್ಯಗಳೇನೂ ಚೀನಾಕ್ಕೆ ವಿರುದ್ಧವಾದುವಲ್ಲ; ಬದಲು, ಚೀನಾವು ಅಂತರರಾಷ್ಟ್ರೀಯಮಟ್ಟದಲ್ಲಿ ಸ್ವತಂತ್ರ ರಾಷ್ಟ್ರದಂತೆ ವ್ಯವಹರಿಸಲು ಮತ್ತು ಪ್ರಗತಿಯ ಹಾದಿಯಲ್ಲಿ ಸಾಗಲು ನೆರವಾಗುತ್ತದೆ'' ಎಂದಿದ್ದರು.

ಈಗಿರುವ ಅಮೆರಿಕಾದ ಸಾಂಪ್ರದಾಯಿಕ ಮಿತ್ರ ರಾಷ್ಟ್ರಗಳಾದ ಜಪಾನ್, ದಕ್ಷಿಣ ಕೊರಿಯಾ, ಸೌದಿ ಅರೇಬಿಯಾಗಳೊಡನೆ ಅಮೆರಿಕಾದ ಸಂಬಂಧಗಳು ಸಡಿಲವಾದರೂ ರಾಜಕೀಯವಾಗಿ ಅಹಿತಕರವಾದರೂ ಭಾರತದ ಕಾಲವ್ಯೂಹಾತ್ಮಕ ಮಹತ್ವ ಹೆಚ್ಚುತ್ತದೆ ಎನ್ನುತ್ತಾರೆ ಅಮೆರಿಕಾದ ವಿದೇಶಾಂಗ ಖಾತೆಯ ಒಬ್ಬ ಅಧಿಕಾರಿ.

ಭಾರತದ ಕಡೆಯಿಂದ ಇರುವ ಅತಿದೊಡ್ಡ ಅಡಚಣೆಯೆಂದರೆ ಅಮೆರಿಕಾದ ಶಸ್ತ್ರಾಸ್ತ್ರತಂತ್ರ ಜ್ಞಾನಕ್ಕೆ ದಾರಿ ಇಲ್ಲದಿರುವುದು. ಆದರೆ ಅಮೆರಿಕಾವು ಭಾರತಕ್ಕೆ ತಂತ್ರಜ್ಞಾನ ಮತ್ತು ಸಾಮಗ್ರಿಗಳ ಮಾರಾಟಕ್ಕೆ ಅವಕಾಶ ನೀಡಬೇಕೆಂದು ಈ ವರದಿ ಶಿಫಾರಸು ಮಾಡುತ್ತದೆ. ಹಿಂದೆಯೇ ತಿಳಿಸಿದಂತೆ, ಈಗಾಗಲೇ ಈ ದಿಕ್ಕಿನಲ್ಲಿ ಹೆಜ್ಜೆಯಿಡಲಾಗಿದೆ.

ಇನ್ನೊಂದು ಗಮನಾರ್ಹವಾದ ಅಂಶವೆಂದರೆ, ಅಮೆರಿಕಾದ ಅಧಿಕಾರಿಗಳು ಬೇಗ ಒಡಂಬಡಿಕೆಗಳಿಗೆ ಭಾರತವನ್ನು ಕಟ್ಟಿಹಾಕುವುದರಲ್ಲಿ ತೋರಿಸುತ್ತಿರುವ ಆತುರ.

ಈ ವರದಿಯಲ್ಲಿ ಹೇಳುವ ಮತ್ತೊಂದು ಅಂಶವೆಂದರೆ, ''ಶ್ರೇಷ್ಠ ಅಂತಸ್ತಿನ ಅಮೆರಿಕಾದ ಆಫೀಸರ್‌ಗಳ ಪ್ರಕಾರ ಭಾರತದ ಸೈನ್ಯಗಳೊಡನೆ ಜರಗುವ ತರಬೇತಿ ಅಮೆರಿಕಾ ಮಿಲಿಟರಿಗೆ ಲಾಭದಾಯಕವಾಗಿರುತ್ತೆ, ಅದರಲ್ಲೂ ಈ ತರಬೇತಿ ಭಾರತದಲ್ಲಿ ಜರುಗಿದರೆ ಅಮೆರಿಕಾಕ್ಕೆ ಹೆಚ್ಚು ಅನುಕೂಲ. ಭಾರತದಲ್ಲಿ ಮಂಜುಗೆಡ್ಡೆ ಆವೃತ ಪರ್ವತಗಳಿಂದ ಮರುಭೂಮಿವರೆಗಿನ ಬಹು ವೈವಿಧ್ಯಮಯ ಲಕ್ಷಣದ ಭೂಭಾಗಗಳಿವೆಯಾದ್ದರಿಂದ ಇಲ್ಲಿ ಜರುಗುವ ತರಬೇತಿ ಅಮೆರಿಕನ್ನರಿಗೆ ಹೆಚ್ಚಿಗೆ ನೆರವಾಗುತ್ತಿದೆ. ಅಲ್ಲದೆ ಅಮೆರಿಕಾದಲ್ಲಿ ಮಿಲಿಟರಿ ತರಬೇತಿ ಗುರಿದಾಣಗಳು (ranges) ಕುಗ್ಗುತ್ತಿವೆ.''

**ಪರಿಣಾಮ**

ಶುರುವಿನಲ್ಲೇ ಸೂಚಿಸಿದ ಜಂಟಿ ಮಿಲಿಟರಿ ಕಾರ್ಯಾ

ಚರಣೆಗಳು ರಕ್ಷಣಾ ಚೌಕಟ್ಟಿನ ಕಣ್ಣಿಗೆ ಗೋಚರವಾಗುವ ಒಂದು ಮುಖವಷ್ಟೆ. ಈ ಜಂಟೀ ಕಾರ್ಯಾಚರಣೆಗಳು ಪ್ರಾರಂಭವಾಗುವುದಕ್ಕೆ ಮುಂಚೆಯೇ ಬೆಳಗಾವಿಗೆ ಭೇಟಿ ನೀಡಿದ ಅಮೆರಿಕಾ ಪೆಸಿಫಿಕ್ ಕಮಾಂಡ್‌ನ ಅಡ್ಮಿರಲ್ ಫ್ಯಾಲನ್ ಹೇಳುವಂತೆ, ಅದಕ್ಕೆ ಮೊದಲೇ ಅಮೆರಿಕಾವು ಕ್ಷಿಪಣಿ ರಕ್ಷಣಾ ಸಾಮರ್ಥ್ಯವನ್ನು ಹೆಚ್ಚಿನ ವೇಗದಲ್ಲಿ ಮುಂದುವರಿಸುತ್ತಿದೆ. ಇದಕ್ಕೆ ಕಾರಣ, ಉತ್ತರ ಕೊರಿಯಾ ಒಡ್ಡುತ್ತಿರುವ ಬೆದರಿಕೆ ಮತ್ತು ಇರಾನಿನ ಅತಿ ಆಕ್ರಮಣಶಾಲಿ ಮಾತುಗಳು. ಜೊತೆಗೆ ಕ್ಷಿಪಣಿ ಸಹಕಾರವನ್ನು, ಮ್ಯಾರಿಟೈಮ್ ಸಹಕಾರ ಚೌಕಟ್ಟನ್ನೂ ಮುಂದುವರೆಸುವಂತೆ ಭಾರತದ ಮೇಲೆ ಒತ್ತಡ ತರಲಾಗುತ್ತಿದೆ. ಪತ್ರಿಕಾ ಸಂದರ್ಶನದಲ್ಲಿ ಅವರು ನೀಡಿದ ಹೇಳಿಕೆ ಹೀಗಿದೆ: ''ಭಾರತ ಮತ್ತು ಅಮೆರಿಕಾಗಳ ನಡುವೆ ಆತಂಕವೆಂದರೆ ಅದು ಚೀನಾದಲ್ಲಿ ಶಸ್ತ್ರಾಸ್ತ್ರಗಳು ಅಧಿಕಗೊಳ್ಳುತ್ತಿರುವ ಬೆಳವಣಿಗೆ.''

ಪ್ರಧಾನ ಮಂತ್ರಿಗಳೇನೋ ಭಾರತವು ಎಂದೆಂದಿಗೂ ಯಾವುದೇ ರಾಷ್ಟ್ರದ ಅಧೀನ ರಾಷ್ಟ್ರವಾಗುವುದಿಲ್ಲವೆಂದು ಹೇಳಿದ್ದಾರೆ. ಇತ್ತೀಚಿನ ಇಂಡಿಯಾ-ಬ್ರೆಜಿಲ್-ದಕ್ಷಿಣ ಆಫ್ರಿಕಾ ಶೃಂಗಸಭೆಯಲ್ಲಿ ಅವರು ಭಾಗಿಯಾಗಿದ್ದು ಮತ್ತು ಹವಾನಾದಲ್ಲಿ ಅಲಿಪ್ತ ರಾಷ್ಟ್ರಗಳ ಶೃಂಗಸಭೆಯಲ್ಲಿ ಭಾಗವಹಿಸಿದ್ದರು. ಅಲ್ಲಿ ಅವರು ವಹಿಸಿದ ಪಾತ್ರವು ಭಾರತವು ಹೇಗೆ ಏಕ ಸ್ವಾಮ್ಯತೆಯ ವಿರುದ್ಧ ರಾಷ್ಟ್ರೀಯ ಸಾರ್ವಭೌಮತ್ವವನ್ನು ರಕ್ಷಿಸುವ ಕಾರ್ಯವನ್ನು ಮುಂದುವರಿಸುವಲ್ಲಿ, ಬಹುಮುಖೀಯ ಸಂಬಂಧಗಳನ್ನು ಭದ್ರಗೊಳಿಸುವುದರಲ್ಲಿ ಮತ್ತು ದಕ್ಷಿಣ-ದಕ್ಷಿಣ ಸಹಕಾರಕ್ಕೆ ಒಂದು ನಿರ್ದಿಷ್ಟ ಆಕಾರ ಕೊಡುವುದರಲ್ಲಿ ಮುಖ್ಯವಾದ ಮತ್ತು ರಚನಾತ್ಮಕವಾದ ಪಾತ್ರ ವಹಿಸಬಹುದೆಂಬುದನ್ನು ತೋರಿಸಿತು. ಭಾರತ-ಚೀನಾ-ರಷ್ಯಾಗಳ ನಡುವಿನ ತ್ರಿಮುಖೀಯ ಸಹಕಾರಕ್ಕೆ ಬಹುಭಾರಿ ಅವಕಾಶ ಇದೆ. ಅಲ್ಲದೆ, ಭಾರತ ಶಾಂಘೈ ಸಹಕಾರ ಸಂಸ್ಥೆಯಲ್ಲಿ ಹೆಚ್ಚು ಆಸಕ್ತಿ ತೋರಿಸಬಹುದು.

ಹೀಗೆಲ್ಲ, ನಮ್ಮ ಬಲಾಬಲಗಳನ್ನು ಸ್ವಯಂಸಾಧಿಸಿ ಭಾರತವು ಅಂತರರಾಷ್ಟ್ರೀಯ ಮಟ್ಟದಲ್ಲಿ ತನ್ನ ವರ್ಚಸ್ಸನ್ನು ಹೆಚ್ಚಿಸಿಕೊಳ್ಳುವ ಅವಕಾಶ ಇದ್ದಾಗಲೂ, ಈಗ ಅಮೆರಿಕಾದೊಡನೆ ಬೆಳೆಯುತ್ತಿರುವ ಮಿಲಿಟರಿ ಸಹಯೋಗ ನೋಡಿದರೆ ನಮ್ಮ ವಿದೇಶಾಂಗ ಮತ್ತು ರಕ್ಷಣಾ ಇಲಾಖೆಗಳಲ್ಲಿ ದೃಢ-ಚಿತ್ತದ ಪ್ರಭಾವ ಬೀರುವ ಅಧಿಕಾರಿಗಳು ಇಲ್ಲವಾಗಿದ್ದು, ಎಲ್ಲೋ ಕೆಲವು ಅಮೆರಿಕಾದ ಪರ ಇರುವವರು ಮಾತ್ರ ಭಾರತವನ್ನು ಅಮೆರಿಕಾದ ಕೇವಲ ಒಂದು ಬಾಲಬಡುಕ ರಾಷ್ಟ್ರವನ್ನಾಗಿ ಮಾಡಲು ನಿರತವಾಗಿವೆಯೋ ಏನೋ ಎಂಬ ಶಂಕೆ ಉಂಟಾಗುತ್ತದೆ. ಇಂತಹ ಶಕ್ತಿಗಳ ವಿರುದ್ಧ ಸಮರ ಸಾರುತ್ತಲೇ ನಮ್ಮ ಸ್ವಾತಂತ್ರ್ಯ ಸಾರ್ವಭೌಮತ್ವಗಳನ್ನು ಉಳಿಸಿ ಬೆಳೆಸಲು ನಾವೆಲ್ಲರೂ ಸಜ್ಜಾಗಬೇಕಾಗಿದೆ.

ವೈ. ಸಿ. ಸುಬ್ರಹ್ಮಣ್ಯ
೨೯೦/೪, ೩೪ನೇ 'ಎ' ಕ್ರಾಸ್, ೯ನೇ ಮೇಯಿನ್, ಜಯನಗರ ೪ನೇ ಬ್ಲಾಕ್, ಬೆಂಗಳೂರು - ೫೬೦ ೦೧೧

# ಅವಳು



ಅವಳ ಕೂದಲ ಕಪ್ಪು ಕಾಳರಾತ್ರಿಯ ಕನಸು
ಅವಳ ಒಡಲಿನ ಕಾಂತಿ ಸಂಜೆಬಾನಿನ ಕನಸು
ಅವಳು ಚೆಲುವಿನ ಚೆಲುವು ಅವಳು ಒಲವಿನ ಒಲವು
ಸೃಷ್ಟಿ ಬುಗುರಿಯ ಸೂತ್ರ ಹಿಡಿದು ತಿರುಗಿಸುವವಳು
ಕಣ್ಣಿಗೂ ಕಣ್ಣಾದ ಪ್ರಾಣಶಕ್ತಿಯ ಕುರುಹು
ಅವಳ ಹುಡುಕುವೆನಯ್ಯ ಅವಳೆನ್ನ ಪ್ರಾಣ

ಹಸಿದಾಗ ಒಲವಿಂದ ತುತ್ತನುಣಿಸಿದ ತಾಯಿ
ನೊಂದಾಗ ಸಂತೈಪ ಗೆಳತಿ ಸಖಿ ಸುಖದಾಯಿ
ಸುಮ್ಮನಿದ್ದರೆ ತಂಪು ಮುನಿದರವಳೇ ಬೆಂಕಿ
ಬರಿದೆ ಬೆದರದೆ ಬೆದರಿಸುವುದನೂ ಬಲ್ಲ
'ಚಿಗರೆಗಂಗಳ ಚೆಲುವಿ.'
''ಹೂಹೂವಿನೊಳಗೊಂದು ಕೈಲಾಸ ಅರಳಿಸಿದ
ಸಾವಿರದ ಶರಣವ್ವ ಕರಿಮಾಯಿ'' ಯೆಂದಿರೇ
ಬರಿಮಾಯಿಯಲ್ಲವಳು ಬಲಿ ಬೇಡೊ ಚಾಮುಂಡಿ
'ಜಡೆಯಾಚೆ ತಿರುಗಿರುವ ತಾಯಮುಖ'ವೆಂದರು
ಅವಳ ನಾಲ್ಕನೇ ಮೊಗವ ಹುಡುಕ್ಹುಡುಕಿ ನೊಂದರು
ಕಣ್ಣಿಗೂ ಕಣ್ಣಾದ ಪ್ರಾಣಶಕ್ತಿಯ ಕುರುಹು
ಅವಳ ಹುಡುಕುವೆನಯ್ಯ ಅವಳೆನ್ನ ಪ್ರಾಣ

ಅವಳ ತೋರುವೆನೆಂದು ಅಡಿಗೆಮನೆಯೊಳಗೊಯ್ದು
ನೋಡಿವಳೆ ನೀ ಹುಡುಕೊ ಆ ಅವಳು ಅಂದರು
ಊದುಗೊಳವೆಯ ಹಿಡಿದು ಸೊರಸೊರನೆ ಮೂಗೊರೆಸಿ
ಪಂಜರದ ಗಿಣಿಯಂತೆ ಉಲಿವವಳು ಅವಳೇ ?
ಶಿವ ಶಿವಾ ಅವಳಲ್ಲ, ಅವಳಲ್ಲವೇ ಅಲ್ಲ
ಸೆರೆಯೊಳಗೆ ಸುರಗಂಗೆ ಇರುವಳೇನೋ ಮರುಳೆ
ಚಿನ್ನ ರನ್ನದ ಸೆರೆಗೆ ದೇಹ ಸಿಕ್ಕಿರಬಹುದು
ಹಾರು ಹಕ್ಕಿಯ ಆತ್ಮ ಆ ಅನಂತದ ಭಾಗ್ಯ
ಕಣ್ಣಿಗೂ ಕಣ್ಣಾದ ಪ್ರಾಣಶಕ್ತಿಯ ಕುರುಹು
ಅವಳ ಹುಡುಕುವೆನಯ್ಯ ಅವಳೆನ್ನ ಪ್ರಾಣ

ಅವಳ ತೋರುವೆನೆಂದು ನಗರ ಬೀದಿಗೆ ಒಯ್ದು
ನೋಡಿವಳೆ ನೀ ಹುಡುಕೊ ಆ ಅವಳು ಅಂದರು
ಉಬ್ಬುತಗ್ಗಿನ ದೇಹ ನೋಡು ನೋಡೆಂದರು
ಶಿವ ಶಿವಾ ಅವಳಲ್ಲ, ಅವಳಲ್ಲವೇ ಅಲ್ಲ
ಚೆಲುವೇನು ಬರಿ ದೇಹದೊಡವೆಯಾಯಿತೆ ಮರುಳೆ
ರೋಗ ಹಿಡಿದಿಹ ಕಣ್ಣು ನೋಡುವುದು ಬರಿಛಾಯೆ
ನಿಜ ಚೆಲುವು ದಕ್ಕುವುದು ಒಳಗಣ್ಣ ಸೌಭಾಗ್ಯ
ಕಣ್ಣಿಗೂ ಕಣ್ಣಾದ ಪ್ರಾಣಶಕ್ತಿಯ ಕುರುಹು
ಅವಳ ಹುಡುಕುವೆನಯ್ಯ ಅವಳೆನ್ನ ಪ್ರಾಣ

ಅವಳ ತೋರುವೆನೆಂದು ಬೆಳ್ಳಿ ತೆರೆಗೊಯ್ದರು
ಬೀದಿ ಫಲಕವ ತೋರಿ ನೋಡು ಅವಳೆಂದರು
ಶಿವ ಶಿವಾ ಅವಳಲ್ಲ, ಅವಳಲ್ಲವೇ ಅಲ್ಲ
ಸುಮ್ಮಸುಮ್ಮನೆ ನಗುವ ಸುಮ್ಮಸುಮ್ಮನೆ ಅಳುವ
ಈ ರಂಗಿನಾ ಮಿಥ್ಯೆ ಅವಳೆನ್ನಬಹುದೇ
ಇದು ಅವಳು ಅಂದರೆ ದಿವ್ಯತೆಗೆ ಅಪಚಾರ
ಅವಳ ಬರಿಮೈ ಮಾಡಿ ಬೆಲೆಕಟ್ಟಿ ಮಾರುವೆಯ
ಹೌದು, ಹೆಣಗಳು ಹಾಗೆ ಬೆಲೆಗೆ ಸಿಕ್ಕಾವು

ಬಿಡು ನಿನ್ನ ಜ್ವರಗಣ್ಣು ತಾಕಲಾರದು ಅವಳ
ಆಗಸಕೆ ಕಟ್ಟುಂಟೆ ಸಾಗರಕೆ ಒಡ್ಡುಂಟೆ
ಕಾಡ ಪಾತರಗಿತ್ತಿ ಹಿಡಿಗೆ ಸಿಕ್ಕುವುದುಂಟೆ
ಹಿಡಿವವಗೆ ಸಿಕ್ಕಿದ್ದು ಸತ್ತ ಬಣ್ಣದ ರೆಕ್ಕೆ
ನಿನ್ನ ಲೋಕದಿ ನನಗೆ ಅವಳು ಸಿಕ್ಕುವುದಿಲ್ಲ
ಇನ್ನು ಹುಡುಕುವೆ ನಾನು ನನ್ನ ಕಣ್ಣಿಂದ

ಅವಳ ಹುಡುಕುವೆ ನಾನು ನನ್ನ ಕಣ್ಣಿಂದ

ಚಿತ್ರಲೇಖಾ

# ಅಬ್ದುಲ್ ಕಲಾಂರ




ಪ್ರಕಾಶನ
**ವಾಸನ್ ಪಬ್ಲಿಕೇಷನ್ಸ್**
ನಂ. ೨೫, 'ವಾಸನ್ ಟವರ್ಸ್', ಗೂಡ್‌ಶೆಡ್ ರಸ್ತೆ
ಬೆಂಗಳೂರು - ೫೬೦ ೦೫೩

**ಪುಟಗಳು : ೧೯೦ ಬೆಲೆ : ರೂ. ೧೦೦**

**ಪುಸ್ತಕದುದ್ದಕ್ಕೂ ಧಾರ್ಮಿಕ, ನೈತಿಕ ಮತ್ತು ಸಾಮಾಜಿಕ ಮೌಲ್ಯಗಳ ಕುರಿತಾಗಿ ಸರಳ, ನೇರ ಮಾತುಗಳನ್ನು ಹೇಳುವ ಅಬ್ದುಲ್ ಕಲಾಂ ಬರೀ ವಿಜ್ಞಾನಿಯಾಗಿ ನಿಲ್ಲದೆ ಒಬ್ಬ ಮನೋವಿಜ್ಞಾನಿಯಾಗಿ, ಸಂತನಂತೆ, ದೃಢವಾದ ರಾಷ್ಟ್ರಭಕ್ತನಾಗಿ ಮೆರೆಯುತ್ತಾರೆ.**

**ನಮ್ಮ ಯುವ ಜನಾಂಗ - ವಿದ್ಯಾರ್ಥಿ ವೃಂದ ಈ ಪುಸ್ತಕದಿಂದ ಸ್ಫೂರ್ತಿ ಪಡೆದುಕೊಳ್ಳಬಹುದಾದರೆ, ಪೋಷಕರೂ, ಶಿಕ್ಷಕರೂ ಕಲಾಂರ ಉತ್ತಮ-ಸುರಕ್ಷಿತ ಬಾಲ್ಯ, ಹೇಗೆ ವ್ಯಕ್ತಿತ್ವವನ್ನು ರೂಪಿಸಲು ಸಾಧ್ಯ ಎಂಬುದನ್ನು ಕಲಿಯಬಹುದು. 'ಅಗ್ನಿಯ ರೆಕ್ಕೆಗಳು' ಪುಸ್ತಕ ಓದಿ ಮುಗಿಸುವ ವೇಳೆಗೆ ನನ್ನ ಮನದಲ್ಲಿ ಬಂದ ಮಾತು ಪುಸ್ತಕದ ಸಿಡಿ ರೂಪದಲ್ಲಿ ಹೇಳಿರುವಂತೆ, ''ಮಗ ತಂದೆಯ ಹೆಸರನ್ನು ಹೇಗೆ ಸಾರ್ಥಕಗೊಳಿಸಬೇಕೆಂದರೆ ಜನ, ಎಂಥ ಕಠಿಣ ತಪಸ್ಸಿನಿಂದ ಈ ಮಗನನ್ನು ತಂದೆ ಪಡೆದಿದ್ದಾನೆ ಎಂದು ಹೇಳುವಂತಾಗಬೇಕು'' ಎಂಬ ಉಕ್ತಿ ಕಲಾಂರ ವಿಷಯದಲ್ಲಿ ಅಕ್ಷರಶಃ ಸತ್ಯ.**

**ಡಾ|| ಕೆ. ಎಸ್. ಪವಿತ್ರ**



ಈಗ್ಗೆ ಮೂರು ವರ್ಷಗಳ ಹಿಂದೆ ಅಬ್ದುಲ್ ಕಲಾಂರ 'Wings of Fire' ಪುಸ್ತಕ ಕೊಡುಗೆಯ ರೂಪದಲ್ಲಿ ಬಂದಾಗ ಅದನ್ನು ಓದುವ ಗೋಜಿಗೇ ಹೋಗಿರಲಿಲ್ಲ. ಒಮ್ಮೆ ಕಾರಿನಲ್ಲಿ ಪ್ರಯಾಣಿಸುತ್ತಿದ್ದಾಗ ಇದೇ ಪುಸ್ತಕದ ಸಿಡಿ ಅವತರಣಿಕೆಯನ್ನು ಕೇಳುವ ಸಂದರ್ಭ ಬಂತು. ಗಿರೀಶ್ ಕಾರ್ನಾಡರ ಗಂಭೀರ ಧ್ವನಿ, ಸಂದರ್ಭೋಚಿತ ಸಂಗೀತ, ಸಾಹಿತ್ಯದ ತುಣುಕುಗಳು ಮನಸ್ಸನ್ನು ತುಂಬಿದವು. ಮನೆಗೆ ಹಿಂದಿರುಗಿದಾಕ್ಷಣ ಧೂಳು ತಿನ್ನುತ್ತಿದ್ದ 'Wings of Fire' ತೆಗೆದು ಓದತೊಡಗಿದೆ.

೧೭೮ ಪುಟಗಳ, ಅರುಣ್ ತಿವಾರಿ ಅವರಿಂದ ನಿರೂಪಿತವಾದ ಪುಸ್ತಕ. ೧೯೯೯ರಲ್ಲಿ ಮೊದಲು ಮುದ್ರಿತ, ನಂತರ ಇದುವರೆಗೆ ೨೧ ಮುದ್ರಣಗಳನ್ನು ಕಂಡಿದೆ. ಜಯಪ್ರಕಾಶ್ ಪುತ್ತೂರ್ ಇವರಿಂದ ಕನ್ನಡಕ್ಕೂ ಅನುವಾದವಾಗಿದೆ.

ತನ್ನ ತಾಯಿಯ ಕುರಿತಾದ ಹೃದಯಸ್ಪರ್ಶಿ ಕವಿತೆಯೊಂದಿಗೆ ಆರಂಭವಾಗುವ ಪುಸ್ತಕ 'ವಿಜ್ಞಾನಿ'ಯ ಆತ್ಮಕತೆಯೆಂದು ಸಾರುವ ಹಾಗೆ ೪ ಭಾಗಗಳಲ್ಲಿ ವಿಕಸನಾ ಶಕ್ತಿ, ಸೃಷ್ಟಿ, ಪಾಪ ಪರಿಮಾರ್ಜನ, ಧ್ಯಾನ ಸಮಾಧಿ ಹೀಗೆ ಕ್ರಮಬದ್ಧವಾಗಿ ನಿರೂಪಿತವಾಗಿದೆ.

ಪುಸ್ತಕವನ್ನು ನಿರೂಪಿಸಿರುವ ಅರುಣ್ ತಿವಾರಿ ಹೇಳಿರುವಂತೆ, ''ನಮ್ಮಲ್ಲಿ ಹೆಚ್ಚಿನ ಜನ ಅಬ್ದುಲ್ ಕಲಾಂರನ್ನು ವ್ಯಕ್ತಿಶಃ ಭೇಟಿಯಾಗಲಿಕ್ಕಿಲ್ಲ. ಆದರೆ ನಾವು ಅವರ ಸಹಯೋಗವನ್ನು ಈ ಪುಸ್ತಕದುದ್ದಕ್ಕೂ ಆನಂದಿಸುತ್ತೇವೆ. ಅದರ ಜೊತೆಗೇ ಪುಸ್ತಕ ಮುಗಿಸುವ ವೇಳೆಗೆ ಅವರು ನಮ್ಮ ಆತ್ಮೀಯ ಸ್ನೇಹಿತರಾಗಿರುತ್ತಾರೆ.''

ಆತ್ಮಕತೆಗಳು ಬಹಳ. ಆತ್ಮಕತೆಗಳನ್ನು ಓದುವುದರಿಂದ ಸ್ಫೂರ್ತಿ ಪಡೆದುಕೊಳ್ಳುವುದರೊಂದಿಗೇ ಸಾಧಕರ ಸಾಧನೆಗಳ ಕಷ್ಟದ ಹಾದಿಯ ಪರಿಚಯ ಆಗುತ್ತದೆ. ಆದರೆ ಸ್ವತಃ ಬರೆಯುವವರು ಯಾವಾಗಲೂ ಆತ್ಮ ನಿರೀಕ್ಷಣೆ ಮಾಡಿಕೊಂಡೇ ಬರೆಯುತ್ತಾರೆಂದೇನಿಲ್ಲ. ಕಲಾಂ ಪೀಠಿಕೆಯಲ್ಲಿ ಹೇಳುವಂತೆ, ತಮ್ಮ ನೆನಪುಗಳು ಬೇರೆಯವರಿಗೆ ಹೇಗೆ ಆಸಕ್ತಿದಾಯಕ, ಅದರಿಂದ ಉಳಿದವರಿಗೇನು ಉಪಯೋಗ ಎಂದು ಅವರಿಗನ್ನಿಸಿತಂತೆ. ಆದರೆ ಅದಕ್ಕೆ ಅವರೇ ಕಂಡುಕೊಂಡ ಉತ್ತರ 'ಕಲಾಂರ ಕತೆ ಕೇವಲ ಅವರದ್ದಲ್ಲ, ಅದು ಆಧುನಿಕ ಭಾರತದ, ಭಾರತ ತಂತ್ರಜ್ಞಾನದಲ್ಲಿ ಉನ್ನತಿಯನ್ನು ಸಾಧಿಸಿದ ಕತೆ. ಅದರೊಂದಿಗೆ ಒಬ್ಬ ವ್ಯಕ್ತಿ ತನ್ನ ಸಾಧನೆಗಳಿಗೆ ಕಾರಣಕರ್ತರಾದ ತಂದೆ-ತಾಯಿ, ಸಂಬಂಧಿಗಳು, ಗುರುಗಳು ಇವರೆಲ್ಲರಿಗೆ ಕೃತಜ್ಞತೆಯನ್ನು ಸಲ್ಲಿಸುತ್ತಿರುವ ಪರಿಯೂ ಹೌದು'.

### ಅಗ್ನಿಯ ರೆಕ್ಕೆಗಳು

ನಮ್ಮೆಲ್ಲರಲ್ಲಿ ಒಂದು ದೈವಿಕ ತೇಜಾಗ್ನಿ ಇದೆ. ನಮ್ಮ ಪ್ರಯತ್ನಗಳು ಈ ಅಗ್ನಿಗೆ ರೆಕ್ಕೆಗಳನ್ನು ಮೂಡಿಸಿ ಅದರ ಸಾತ್ವಿಕ ತೇಜಸ್ಸಿನಿಂದ ಜಗತ್ತು ಬೆಳಗುವಂತಾಗಬೇಕು. ಆದ್ದರಿಂದಲೇ ಅಧ್ಯಕ್ಷರ ಆತ್ಮಕತೆಗೆ ಈ ಹೆಸರು.

ಜೊತೆಗೇ ಕಲಾಂರು ರಾಕೆಟ್ಟುಗಳನ್ನು, ಕ್ಷಿಪಣಿಗಳನ್ನು ತಯಾರಿಸುವ ವಿಜ್ಞಾನಿಯಾಗಿರುವುದು, 'ಅಗ್ನಿ' ಕ್ಷಿಪಣಿಯನ್ನು ಉಡಾಯಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದು, ಈ ಹೆಸರನ್ನು ಹೆಚ್ಚು ಅರ್ಥಪೂರ್ಣವಾಗಿಸುತ್ತದೆ.

ಪುಸ್ತಕದುದ್ದಕ್ಕೂ ವೇದಗಳು, ಇಂಗ್ಲಿಷ್ ಕವಿತೆಗಳು, ತಿರುಕ್ಕುರುಳ್, ಗ್ರಂಥ ಸಾಹಿಬ್, ಕುರಾನ್, ಗೀತೆ, ಅಣ್ಣಮಾಚಾರ್ಯರ ಕೃತಿ, ಅಭಂಗಗಳು – ಹೀಗೆ ಆಯಾ ಭಾಗಗಳಿಗೆ ಸಂದರ್ಭೋಚಿತವಾಗಿ ಹೆಸರಿಸಲ್ಪಡುತ್ತವೆ.

ಬಾಲ್ಯದಲ್ಲಿ ಒಬ್ಬ ಸಾಮಾನ್ಯ ದೋಣಿಗಳ ಒಡೆಯನ ಮಗನಾಗಿ, ರಾಮೇಶ್ವರದ ಚಿಕ್ಕ ಪಟ್ಟಣದಲ್ಲಿ ಪ್ರಾರಂಭಗೊಳ್ಳುವ ಕಲಾಂರ ಆತ್ಮಕಥನ, ವಿದ್ಯಾರ್ಥಿ, ಇಂಜಿನಿಯರ್, ವಿಜ್ಞಾನಿ ಮತ್ತು ಮುಂದಾಳುವಾಗಿ ರೂಪುಗೊಂಡ ಬಗೆಯನ್ನು ಹೃದಯಂಗಮವಾಗಿ ಚಿತ್ರಿಸುತ್ತದೆ. ಇದು ಕೇವಲ ಕಲಾಂರ ಆತ್ಮಕಥನವಾಗಷ್ಟೇ ನಿಲ್ಲದೆ, ತಮ್ಮ ಕತೆಯನ್ನು ಎಂದೂ ಹೇಳಿಕೊಳ್ಳದ, ಎಂದೂ ದೇಶದ ಅಧ್ಯಕ್ಷರೂ ಆಗದ ಕಲಾಂರ ತಂದೆ ಜೈನುಲಾಬ್ದೀನ್, ತಾಯಿ ಆಶಿಯಾ, ಭಾವ ಜೈಬುದ್ದೀನ್, ಕಲಾಂರನ್ನು ಮಾರ್ಗದರ್ಶಿಸಿದ ವಿಕ್ರಂ ಸಾರಾಭಾಯಿ, ಧಾವನ್ ಈ ಎಲ್ಲರ ಕಥೆಯನ್ನೂ ನಮಗೆ ತಿಳಿಸುತ್ತದೆ.

ತಮ್ಮ ಬಾಲ್ಯ ಆರ್ಥಿಕವಾಗಿ, ಭಾವನಾತ್ಮಕವಾಗಿ ಸುರಕ್ಷಿತವಾಗಿತ್ತೆಂದು ಹೇಳುವ ಕಲಾಂ, ತಮ್ಮ ಜೀವನದುದ್ದಕ್ಕೂ ಸಾತ್ವಿಕ ತಂದೆಯ ಪ್ರಭಾವ, ಹೇಗೆ ತಾನು ಯಾವಾಗಲೂ ತನ್ನ ತಂದೆಯಂತಾಗಬೇಕೆಂದು ಬಯಸುತ್ತಿದ್ದುದನ್ನು ವಿವರಿಸುತ್ತಾರೆ, ಮುಸ್ಲಿಂ ಬಾಲಕ ಹಿಂದೂ ಒಡನಾಡಿಗಳೊಂದಿಗೆ ಸೌಹಾರ್ದಯುತವಾಗಿ ರಾಮೇಶ್ವರದ ಧಾರ್ಮಿಕ ಕ್ಷೇತ್ರದಲ್ಲಿ ಬೆಳೆದದ್ದನ್ನು ಬಣ್ಣಿಸುತ್ತಾರೆ.

ಸಂಕೀರ್ಣ ತತ್ವಗಳನ್ನು ಸರಳವಾಗಿ ವಿವರಿಸುತ್ತಿದ್ದ, ಕಷ್ಟದಲ್ಲಿದ್ದ ವ್ಯಕ್ತಿಗಳಿಗೆ ನೀರನ್ನು ಮಂತ್ರಿಸಿ ಕೊಡುತ್ತಿದ್ದ ತಂದೆ, ಇದನ್ನು ಪ್ರಶ್ನಿಸಿದ ಬಾಲಕ ಕಲಾಂಗೆ, ''ಮಾನವ ಕಷ್ಟದಲ್ಲಿದ್ದಾಗ ಸಹಜವಾಗಿಯೇ ಬೇರೆಯವರಿಂದ ಸಾಂತ್ವನವನ್ನು ಬಯಸುತ್ತಾನೆ. ಕಷ್ಟಗಳಲ್ಲಿ ನಾನು ಈ ಪ್ರಾರ್ಥನೆಗಳನ್ನು ಮಾಡುತ್ತಾ ಸಹಭಾಗಿಯಾಗುತ್ತೇನಷ್ಟೆ. ಆದರೆ ಈ ರೀತಿಯ ಮೂಢನಂಬಿಕೆಗಳು ಸರಿಯಲ್ಲ. ನಾವು ನಿರ್ಭಯರಾಗಿ, ಬಂದ ಕಷ್ಟಗಳನ್ನು ಎದುರಿಸಿ, ಕಷ್ಟಗಳ ಪರಿಹಾರದ ದಾರಿಯನ್ನು ಹುಡುಕುವುದನ್ನು ಕಲಿಯಬೇಕು'' ಎನ್ನುತ್ತಾನೆ. ಪ್ರಾಯಶಃ ವೈಜ್ಞಾನಿಕವಾಗಿ ಪ್ರಶ್ನಿಸುವ ಕಲಾಂರನ್ನು ಪ್ರೋತ್ಸಾಹ ನೀಡಿದ್ದು ಇದೇ ಇರಬಹುದೇನೋ.

ಸಾಧ್ವಿ ತಾಯಿಯ ಆರೈಕೆಗಳನ್ನು – ಅಡಿಗೆಯ ರುಚಿಯನ್ನು ಹೊಗಳುವ ಕಲಾಂ ನಮಗೆ ಹತ್ತಿರವೆನಿಸಿಬಿಡುತ್ತಾರೆ.

### ಗುರುಗಳ ಪ್ರಭಾವ

ಹಲವು ಗುರುಗಳ ಪ್ರಭಾವವನ್ನು ಪುಸ್ತಕದುದ್ದಕ್ಕೂ ಹೆಸರಿಸುವ ಕಲಾಂ ಐಯಾದುರೇ ಸೊಲೊಮನ್ ಎಂಬ ಗುರುಗಳೊಬ್ಬರ ಬಗ್ಗೆ ವಿಶೇಷವಾಗಿ ಉಲ್ಲೇಖಿಸುತ್ತಾರೆ. ಹದಿಹರೆಯದ ಕಲಾಂಗೆ ''ಯಾವ ವಿಷಯವನ್ನೇ ಸಾಧಿಸುವ ಮುನ್ನ ಅದನ್ನು ಆಳವಾಗಿ ಆಶಿಸಬೇಕು ಮತ್ತು ಅದು ಆಗಿಯೇ ಆಗುತ್ತದೆ ಎಂದು ದೃಢವಾಗಿ ನಂಬಬೇಕು'' ಎಂದು ಸೊಲೋಮನ್ ಕಲಿಸುತ್ತಾರೆ. ಅದನ್ನು ತಮ್ಮ ಜೀವನಕ್ಕೆ ಅನ್ವಯಿಸಿ ಕಲಾಂ ಹೇಳುವ, ''ನಾನು ಆಕಾಶ, ಹಕ್ಕಿಗಳ ರಹಸ್ಯ, ವಿಸ್ಮಯಗಳ ಬಗ್ಗೆ ಬಾಲ್ಯದಿಂದಲೂ ಆಕರ್ಷಿತ, ಯಾವಾಗಲೂ ಗಗನದಲ್ಲಿ ಹಾರಬೇಕೆಂದು

ಬಯಸಿದ್ದೆ. ಚಿಕ್ಕ ಪಟ್ಟಣದ ಸರಳ-ಸಾಮಾನ್ಯ ಬಾಲಕನಾಗಿದ್ದರೂ, ಒಂದು ದಿನ ನಾನು ಹಾರುವೆನೆಂದು ದೃಢಮನಸ್ಕನಾಗಿದ್ದೆ. ಅಂತೆಯೇ ರಾಕೆಟ್ಟುಗಳ ಮೂಲಕ, ಕ್ಷಿಪಣಿಗಳ ಮೂಲಕ ನನ್ನ ಕನಸು ನನಸಾಯಿತು'' ಎಂಬ ಮಾತುಗಳು ಇಂದಿನ ವಿದ್ಯಾರ್ಥಿಗಳಿಗೆ ಸ್ಫೂರ್ತಿದಾಯಕವೆನಿಸುತ್ತವೆ. ಹಾಗೆಯೇ ಪ್ರೊ|| ಸ್ಪಾಂಡರ್ ಹೇಳುವ, ''ಪ್ರತಿಯೊಂದು ಕ್ಷೇತ್ರದ ಭವಿಷ್ಯದ ಆಶಯಗಳಿಗಿಂತ, ಉತ್ತಮ ತಳಹದಿಯನ್ನು ಹಾಕಿ ಕ್ಷೇತ್ರವನ್ನು ಆಯ್ದುಕೊಂಡು, ಉತ್ಸಾಹ-ಆಶಾವಾದಿತ್ವದಿಂದ ಮುಂದುವರೆದರೆ ಯಾವುದೇ ಕ್ಷೇತ್ರದಲ್ಲೂ ಮಹತ್ಸಾಧನೆ ಸಾಧ್ಯ'' ಎನ್ನುವ ಮಾತೂ ಇಂದಿನ ಯುವ ಜನಾಂಗಕ್ಕೆ ದಾರಿದೀಪವೇ.

ಇಂಜಿನಿಯರ್ ಆಗಿ ತಮ್ಮ ಶ್ರದ್ಧೆ ನಿಷ್ಠೆಗಳಿಂದ ಒಂದೊಂದೇ ಸಾಧನೆಯ ಮೆಟ್ಟಿಲುಗಳನ್ನು ಏರುವ ಕಲಾಂ, ತಮ್ಮ ವೈಜ್ಞಾನಿಕ ಸಾಧನೆಗಳು, ಯಶಸ್ಸು-ವೈಫಲ್ಯಗಳ ಬಗ್ಗೆ ವಿವರಿಸುತ್ತಾರೆ. ವಿದೇಶದಲ್ಲಿ ತರಬೇತಿ ಹೊಂದುವಾಗ ಅಮೆರಿಕನ್ನರಿಂದ ಕಲಿತ ಸದ್ಗುಣಗಳನ್ನು ಪ್ರಾಯೋಗಿಕವಾಗಿ ಉಪಯೋಗಿಸುತ್ತಾರೆ. ಕಲಾಂ ಹೇಳುವಂತೆ ಅಹಂಕಾರವನ್ನು ಬಿಟ್ಟು ಸಹೋದ್ಯೋಗಿಗಳೊಂದಿಗೆ ಕೂಡಿ ಕೆಲಸ ಮಾಡುವುದು ದೇಶದ ಉನ್ನತಿಗೆ ದಾರಿ. ರಾಕೆಟ್ಟುಗಳನ್ನು ಮಾಡುವ ಕಾಯಕ ಹೇಗೆ ಟಿಪ್ಪು ಸುಲ್ತಾನನಿಂದ ಆರಂಭಗೊಂಡಿತ್ತು, ಅದನ್ನು ಭಾರತದಲ್ಲಿ ಪುನರಾರಂಭಿಸಿದ ಪಂಡಿತ್ ನೆಹರೂ ಅವರ ದೂರದರ್ಶಿತ್ವದ ಕಥೆಯನ್ನು ವಿವರಿಸುತ್ತಾರೆ ಪ್ರೊ|| ಸಾರಾಭಾಯಿ. ಈ ಕನಸನ್ನು ನನಸಾಗಿ ಮಾಡುವಲ್ಲಿ ಪ್ರಮುಖ ಪಾತ್ರ ವಹಿಸಿದ ಬಗ್ಗೆ ಇಲ್ಲಿ ಚಿತ್ರಿತವಾಗಿದೆ.

ಇಲ್ಲಿಂದ ನಂತರ ವಿಜ್ಞಾನಿ ಕಲಾಂ ಮುಂದಾಳುವಾಗಿ ರೂಪುಗೊಳ್ಳುತ್ತಾರೆ. ಎಸ್.ಎಲ್.ವಿ. ಪ್ರೊಜೆಕ್ಟ್‌ನ ನಿರ್ದೇಶಕರಾದಾಗ ತಾನು ಅನುಸರಿಸಿದ ಎರಡು ತಂತ್ರಗಳ ಬಗ್ಗೆ ಓದುಗರ ಗಮನ ಸೆಳೆಯುತ್ತಾರೆ. ಮುಂದಾಳುವಾಗಿ ಯಶಸ್ವಿಯಾಗಬೇಕಾದರೆ ಮೊದಲು ತನ್ನ ಜ್ಞಾನ, ಕೌಶಲಗಳನ್ನು ಬೆಳೆಸಿಕೊಂಡು, ಸಹೋದ್ಯೋಗಿಗಳೊಂದಿಗೆ ಸಂಪೂರ್ಣವಾಗಿ ತೊಡಗಿಸಿಕೊಳ್ಳುವುದು, ಎರಡನೆಯದಾಗಿ, ವೈಯಕ್ತಿಕ ಜವಾಬ್ದಾರಿಯನ್ನು ಬೆಳೆಸಿಕೊಳ್ಳುವುದು.

ತಂದೆ-ತಾಯಿ-ಭಾವ ಈ ಮೂರು ವ್ಯಕ್ತಿಗಳ ಮರಣ, ವಿಜ್ಞಾನಿ ಕಲಾಂರ ಮೇಲೆ ಗಾಢ ಪರಿಣಾಮ ಬೀರುತ್ತದೆ.

ರಾಕೆಟ್ಟುಗಳು ವೈಫಲ್ಯ ಹೊಂದಿದಾಗ ಕಲಾಂ ತಮ್ಮನ್ನು ತಾವು ಸಂತೈಸಿಕೊಳ್ಳುವ, ಬೇರೆ ಸಾಧಕರಿಂದ ಸ್ಫೂರ್ತಿ ಪಡೆದುಕೊಳ್ಳುವ ಬಗೆ ಅದ್ಭುತ.

ಅಗ್ನಿಯ ಉಡಾವಣೆ ವಿಫಲವಾದಾಗ ವಿವಿಧ ಪತ್ರಿಕೆಗಳು ವಿಜ್ಞಾನಿಗಳನ್ನು ಟೀಕಿಸಿದ್ದನ್ನು ಹಾಸ್ಯಮಿಶ್ರಿತ ನೋವಿನಿಂದ ಬರೆಯುವ ಕಲಾಂ, ಪ್ರತಿಯೊಂದು ವೈಜ್ಞಾನಿಕ ಸಾಧನೆಯ ಹಿಂದಿರುವ ನೋವು-ನಲಿವುಗಳನ್ನು, ಸಾವಿರಾರು ಜನರ ಶ್ರಮವನ್ನು, ರಾಷ್ಟ್ರ ವಿಜ್ಞಾನಿಗಳಿಂದ ಮಾಡುವ ನಿರೀಕ್ಷೆಗಳನ್ನು ಇಲ್ಲಿ ಹೇಳುತ್ತಾರೆ. 'ಅಗ್ನಿ' ಉಡಾವಣೆಯಾದ ತಕ್ಷಣ ಸಂಭ್ರಮಕ್ಕಾಗಿ ಏನು ಮಾಡುತ್ತೀರಿ ಎಂಬ ಕೆ.ಸಿ.ಪಂತ್ ಕೇಳಿದ ಪ್ರಶ್ನೆಗೆ ೧ ಲಕ್ಷ ಗಿಡಗಳನ್ನು ನೆಡುತ್ತೇನೆ ಎಂದು ಉತ್ತರಿಸುವ ಕಲಾಂ ವಿಜ್ಞಾನಿಗಳು ಪರಿಸರ ವಿರೋಧಿಗಳು ಎಂಬ ಮಾತನ್ನು ಸುಳ್ಳುಮಾಡುತ್ತಾರೆ.

ಅಬ್ದುಲ್ ಕಲಾಂರ ಹೃದಯಸ್ಪರ್ಶಿ ಮಾತುಗಳೇ ಹೇಳುವಂತೆ, ''ನನ್ನ ಕತೆ-ಜೈನಾಲ್ಬ್ದೀನನ ಮಗನ ಕತೆ, ತನ್ನ ಅಣ್ಣನಿಗಾಗಿ ದಿನಪತ್ರಿಕೆ ಮಾರಿ ದುಡಿದ ಬಾಲಕನ ಕತೆ, ಉತ್ತಮ ಶಿಕ್ಷಕರಿಂದ ಕಲಿಸಲ್ಪಟ್ಟ ವಿದ್ಯಾರ್ಥಿಯ ಕತೆ, ಸೋಲು-ವೈಫಲ್ಯಗಳಿಂದ ನೋವುಂಡ ವಿಜ್ಞಾನಿಯ ಕತೆ, ಸಾವಿರಾರು ಪ್ರತಿಭಾವಂತರಿಂದ ಬೆಂಬಲಿಸಲ್ಪಟ್ಟ ಒಬ್ಬ ಮುಂದಾಳುವಿನ ಕತೆ. ಈ ಜಗತ್ತಿನಲ್ಲಿ ನನ್ನದಾಗಿ ಕುಟುಂಬ-ಹೆಂಡತಿ-ಮಕ್ಕಳು ಏನೂ ಇಲ್ಲ. ಈ ಕತೆ ನನ್ನೊಂದಿಗೇ ಮುಗಿಯುವಂತದ್ದು. ನನ್ನ ಜೀವನ ಯಾರಿಗೂ ಆದರ್ಶವಾಗಬೇಕೆಂದಿಲ್ಲ. ಆದರೆ ಯಾವುದೋ ಒಬ್ಬ ಬಡ ಬಾಲಕನಲ್ಲಿ ನಾನು ರೂಪುಗೊಂಡ ಬಗೆ, ಎತ್ತರಕ್ಕೇರಿದ ರೀತಿ ಆಶಾವಾದವನ್ನು ಹುಟ್ಟಿಸಬಲ್ಲದು. ಈಗ ಅವರೆಲ್ಲೇ ಇರಲಿ, ದೇವರು ಅವರೊಂದಿಗಿದ್ದಾನೆ ಮತ್ತು ದೇವರಿದ್ದಾಗ ಬೇರೆ ಯಾರು ಅವರನ್ನು ವಿರೋಧಿಸಬಲ್ಲರು! ಈ ಎಲ್ಲಾ ರಾಕೆಟ್ಟುಗಳು, ಕ್ಷಿಪಣಿಗಳು, ಕೋಟ್ಯಂತರ ಭಾರತೀಯರಿಗೆ ಎಂದಿಗೂ ಸಣ್ಣವರೆಂದುಕೊಳ್ಳಬೇಡಿ, ನಿಸ್ಸಹಾಯಕರೆಂದು ಭಾವಿಸಬೇಡಿ ಎಂಬ ಸಂದೇಶ ನೀಡಲು ದೇವರು ಕಲಾಂ ಎಂಬೊಬ್ಬ ಸಣ್ಣ ವ್ಯಕ್ತಿಯಿಂದ ಮಾಡಿಸಿದ ಕೆಲಸ.''

ಪುಸ್ತಕದುದ್ದಕ್ಕೂ ಧಾರ್ಮಿಕ, ನೈತಿಕ ಮತ್ತು ಸಾಮಾಜಿಕ ಮೌಲ್ಯಗಳ ಕುರಿತಾಗಿ ಸರಳ, ನೇರ ಮಾತುಗಳನ್ನು ಹೇಳುವ ಅಬ್ದುಲ್ ಕಲಾಂ ಬರೀ ವಿಜ್ಞಾನಿಯಾಗಿ ನಿಲ್ಲದೆ ಒಬ್ಬ ಮನೋವಿಜ್ಞಾನಿಯಾಗಿ, ಸಂತನಂತೆ, ಪ್ರಬುದ್ಧವಾದ ರಾಷ್ಟ್ರಭಕ್ತನಾಗಿ ಮೆರೆಯುತ್ತಾರೆ.

ನಮ್ಮ ಯುವ ಜನಾಂಗ - ವಿದ್ಯಾರ್ಥಿ ವೃಂದ ಈ ಪುಸ್ತಕದಿಂದ ಸ್ಫೂರ್ತಿ ಪಡೆದುಕೊಳ್ಳಬಹುದಾದರೆ, ಪೋಷಕರೂ, ಶಿಕ್ಷಕರೂ ಕಲಾಂರ ಉತ್ತಮ-ಸುರಕ್ಷಿತ ಬಾಲ್ಯ, ಹೇಗೆ ವ್ಯಕ್ತಿತ್ವವನ್ನು ರೂಪಿಸಲು ಸಾಧ್ಯ ಎಂಬುದನ್ನು ಕಲಿಯಬಹುದು.

'ಅಗ್ನಿಯ ರೆಕ್ಕೆಗಳು' ಪುಸ್ತಕ ಓದಿ ಮುಗಿಸುವ ವೇಳೆಗೆ ನನ್ನ ಮನದಲ್ಲಿ ಬಂದ ಮಾತು ಪುಸ್ತಕದ [illegible] ರೂಪದಲ್ಲಿ ಹೇಳಿರುವಂತೆ ''ಮಗ ತಂದೆಯ ಹೆಸರನ್ನು ಹೇಗೆ ಸಾರ್ಥಕಗೊಳಿಸಬೇಕೆಂದರೆ ಜನ, ಎಂಥ ಕಠಿಣ ತಪಸ್ಸಿನಿಂದ ಈ ಮಗನನ್ನು ತಂದೆ ಪಡೆದಿದ್ದಾನೆ ಎಂದು ಹೇಳುವಂತಾಗಬೇಕು'' ಎಂಬ ಉಕ್ತಿ ಕಲಾಂರ ವಿಷಯದಲ್ಲಿ ಅಕ್ಷರಶಃ ಸತ್ಯ.

ಡಾ|| ಕೆ. ಎಸ್. ಪವಿತ್ರ,
ಶ್ರೀ ವಿಜಯ, ೬ನೇ ಅಡ್ಡರಸ್ತೆ, ರಾಜೇಂದ್ರನಗರ, ಶಿವಮೊಗ್ಗ - ೫೭೭ ೨೦೧

## ಸಂಡೂರಿನ ಬೆಟ್ಟಗಳಲಿ...



ಸಂಡೂರಿನ
ಆ ಬೆಟ್ಟಗಳಲ್ಲಿ
ಅದಿರು
ಅಗೆವ ಶ್ರಮಿಕರ
ನೋವು
ಕಂಡು
ಮಳೆರಾಯ ಬಂದ
ಅತ್ತ ಆ ಕ್ಷಣ
ಬೆಟ್ಟದಾ ಮೇಲಿಂದ
ಹರಿವ ನೀರು
ಕೆಂಪು ಕೆಂಪು

ಅದಿರು
ಅಗೆದವರ
ಬೆವರು
ಆಗಿರಬಹುದೆ
ಹೀಗೆ
ನೆತ್ತರು... ?

ಬಿ. ಶ್ರೀನಿವಾಸ ಹಾನಗಲ್ಲ
ವಿಜಯನಗರ ಬಡಾವಣೆ, ಹಾನಗಲ್ಲ
ಹಾವೇರಿ ಜಿಲ್ಲೆ

# ಶರಣಧರ್ಮದ ಆಧುನಿಕ ಸಾಧ್ಯತೆಗಳು

**ಕ**ಲ್ಯಾಣ ಚಾಲುಕ್ಯರನ್ನು ಹಿಂದೆ ತಳ್ಳಿ ಸಾಮಂತರಾಗಿದ್ದ ಕಲಚುರ್ಯರು ಗದ್ದುಗೆಯನ್ನಾಕ್ರಮಿಸಿದ ಅವಧಿಯಲ್ಲಿ ಐತಿಹಾಸಿಕ ಮಹತ್ವದ ಶರಣರ ಕ್ರಾಂತಿ ನಡೆಯಿತು. ಅಲ್ಲಿಯವರೆಗೆ ಜೈನಧರ್ಮವು ರಾಜಾಶ್ರಯದೊಡನೆ ಪ್ರಬಲವಾಗಿತ್ತು. ಅದರ ಜೊತೆಯಲ್ಲಿ ಬ್ರಾಹ್ಮಣ ಧರ್ಮವೂ ಪೈಪೋಟಿ ನಡೆಸುತ್ತ ಬೆಳೆದಿತ್ತು. ಆಳುವ ವರ್ಗ ಮತ್ತು ಪುರೋಹಿತವರ್ಗಗಳು ಕೂಡಿಕೊಂಡು ವರ್ಣಾಶ್ರಮಧರ್ಮ, ಶ್ರೇಣೀಕೃತ ಜಾತಿ ವ್ಯವಸ್ಥೆಗಳು ಆಳವಾಗಿ ಬೇರಿಳಿಯುವಂತೆ ಮಾಡಿದ್ದವು. ಬಹುಸಂಖ್ಯಾತ ಜನಸಾಮಾನ್ಯರು ಮೇಲಿನವರ ಸೇವೆ ಮಾಡಿಕೊಂಡು ಮೌಢ್ಯ ಕಂದಾಚಾರಗಳ ಭಯದ ವಾತಾವರಣದಲ್ಲಿ ಮುಳುಗಿದ್ದರು. ಮೇಲುವರ್ಗಗಳನ್ನು ಬಿಟ್ಟರೆ ಅಪಾರ ಜನಸಮೂಹಕ್ಕೆ ಯಾವುದೇ ಧಾರ್ಮಿಕ ಸ್ವರೂಪ ಇರಲಿಲ್ಲ. ದಲಿತರು-ಶೂದ್ರರು-ಸ್ತ್ರೀಯರು ಇವರಿಗೆಲ್ಲ ಧಾರ್ಮಿಕ ಸ್ವಾತಂತ್ರ್ಯವಾಗಲೀ ಅಭಿವ್ಯಕ್ತಿ ಸ್ವಾತಂತ್ರ್ಯವಾಗಲೀ ಇರಲಿಲ್ಲ. ಅವರು ಮೋಕ್ಷ ಅಥವಾ ನಿರ್ವಾಣವನ್ನು ಪಡೆಯಲು ಅನರ್ಹರಾಗಿದ್ದರು.

ಕಾಳಾಮುಖ, ಶೈವ ಮುಂತಾದ ಕೆಲವು ಪಂಥಗಳು ಅಲ್ಲಲ್ಲಿ ಪ್ರಬಲವಾಗಿದ್ದು ರಾಜಪೋಷಣೆಯನ್ನು ಪಡೆದಿದ್ದವು. ಅವೂ ಕೂಡ ಪುರೋಹಿತಶಾಹಿಯನ್ನು ಬೆಳೆಸುತ್ತ ಜನಸಾಮಾನ್ಯರನ್ನು ದೂರವಿಟ್ಟಿದ್ದವು. ಹಿಂದೂ ಸಂಪ್ರದಾಯದಲ್ಲಿ ಸ್ಥಾವರ ಲಿಂಗಪೂಜೆ ವ್ಯಾಪಕವಾಗಿತ್ತು. (ಎಲ್ಲ ಕಡೆಗಳಲ್ಲಿ ಕಲ್ಲೇಶ್ವರ, ಸಿದ್ಧೇಶ್ವರ ಮುಂತಾದ ಹೆಸರುಗಳ ಕುರುಹುಗಳನ್ನು ಕಾಣುತ್ತೇವೆ.) ರಾಜರ ಪೋಷಣೆಯ ಸ್ಥಳಗಳಲ್ಲಿ ಜೈನ ತೀರ್ಥಂಕರರ ದೇವಾಲಯಗಳೊಡನೆ, ಶಿವ-ವಿಷ್ಣುವಿನ ದೇವಸ್ಥಾನಗಳೂ ಭವ್ಯವಾಗಿ ಕಟ್ಟಲ್ಪಟ್ಟಿರುವುದನ್ನು ನೋಡುತ್ತೇವೆ. ದೇವಾಲಯಗಳನ್ನು ಕಟ್ಟಿಸುವುದು ಉಳ್ಳವರಿಗೆ ಅತ್ಯಂತ ಪುಣ್ಯದ ಕೆಲಸವಾಗಿತ್ತು. ಇಲ್ಲದವರು ಆ ಭವ್ಯದೇಗುಲಗಳನ್ನು ಹಾಗೂ ಅಲ್ಲಿ ನಡೆಯುವ ಪೂಜಾಡಂಬರಾದಿಗಳನ್ನು ಭಯ ಮತ್ತು ಬೆರಗುಗಣ್ಣುಗಳಿಂದ ನೋಡಿ ಅಡ್ಡಬೀಳುವುದು, ಆಳುವವರ ಆಜ್ಞೆಗಳನ್ನು ಚಾಚೂ ತಪ್ಪದೆ ಪಾಲಿಸುವುದು, ಅವರ ದಾಸಾನುದಾಸರಾಗಿ ಸೇವೆ ಮಾಡುವುದು ನಡೆದಿತ್ತು. ಅದೇ ಅವರ ಬದುಕಾಗಿತ್ತು. ಅವರಲ್ಲಿ ಪ್ರಶ್ನಿಸುವ, ವಿಚಾರಿಸುವ ಶಕ್ತಿ ಇರಲಿಲ್ಲ. ಜನಸಾಮಾನ್ಯರಿಗೆ ಯುದ್ಧಗಳಲ್ಲಿ ರಾಜನ ರಕ್ಷಣೆ, ಊರಿನ ರಕ್ಷಣೆ, ತುರುಗೋಳು ಮುಂತಾದುವುಗಳಲ್ಲಿ ಹೋರಾಡಿ ಸಾಯುವುದು ಮೋಕ್ಷಕ್ಕೆ ದಾರಿಯಾದರೆ, ಸ್ತ್ರೀಯರು ಗಂಡ ಸತ್ತಾಗ ತಾವೂ ಬೆಂಕಿಯಲ್ಲಿ ಬಿದ್ದೋ ಅಥವಾ ಇನ್ನಾವ ರೀತಿಯಲ್ಲೋ ಪ್ರಾಣ ಕಳೆದುಕೊಳ್ಳುವುದು ಮೋಕ್ಷಕ್ಕೆ ದಾರಿಯಾಗಿತ್ತು. ಆ ಕಾಲದ ಅಸಂಖ್ಯ ವೀರಗಲ್ಲು, ಮಾಸ್ತಿಕಲ್ಲು, ನಿಸಿದಿ ಕಲ್ಲುಗಳು ಅದಕ್ಕೆ ಉದಾಹರಣೆಯಾಗಿ ದೊರೆಯುತ್ತವೆ.

ದೇವರ ಹೆಸರಿನಲ್ಲಿ ದೇಹದಂಡನೆ, ತಪಸ್ಸು, ವ್ರತ-ನೇಮ, ಉಪವಾಸ ಮುಂತಾದುವನ್ನು ಮಾಡುತ್ತ ಪ್ರಾಣ ಬಿಡುವುದು, ಭಿಕ್ಷೆ ಬೇಡುವುದು – ಶ್ರೇಷ್ಠ. ದೇವರ ಹೆಸರಿನಲ್ಲಿ ಪುರೋಹಿತ, ಸ್ವಾಮಿ, ಸನ್ಯಾಸಿ, ಗುರು, ವ್ರತನೇಮಿ, ವೇಷಧಾರಿ ಮುಂತಾದವರು ಶ್ರೇಷ್ಠರು. ಮದುವೆ, ಸಂಸಾರಗಳಲ್ಲಿ ಬಿದ್ದು ಒದ್ದಾಡುವವರು ಕನಿಷ್ಠರು, ಪಾಪಾತ್ಮರು, ಕಷ್ಟಜೀವಿಗಳು ಎಂಬ ತಿಳುವಳಿಕೆ ಜನರಲ್ಲಿ ಮನೆಮಾಡಿತ್ತು. ಸಾಮಾನ್ಯ ಜನರಲ್ಲಿ ಒಂದು ಬಗೆಯ ಕೀಳರಿಮೆ, ಪಾಪಪ್ರಜ್ಞೆ ತುಂಬಿದ್ದವು. ಬ್ರಹ್ಮಚರ್ಯ ಎಂದರೆ ಹೆಣ್ಣಿನಿಂದ ದೂರವಿರುವುದು; ಹೆಣ್ಣು ಮಾಯೆ – ತುಚ್ಛ, ಸಂಸಾರವೇ ತುಚ್ಛ ಎಂಬ ಭಾವನೆ ಇತ್ತು.

ಹಿಂದಿನ ಜನ್ಮದಲ್ಲಿ ಪಾಪ ಮಾಡಿದವರು ಈ ಜನ್ಮದಲ್ಲಿ ದಲಿತರು, ಶೂದ್ರರು, ಸ್ತ್ರೀಯರಾಗಿ, ಪ್ರಾಣಿಗಳಾಗಿ ಹುಟ್ಟುತ್ತಾರೆ. ಹಿಂದೆ ಪುಣ್ಯ ಮಾಡಿದವರು, ಮೇಲುಜಾತಿಯವರಾಗಿ ಶ್ರೀಮಂತರಾಗಿ ಹುಟ್ಟುತ್ತಾರೆ. ಕನಿಷ್ಠ ಜೀವಿಗಳು ಈ ಜನ್ಮದಲ್ಲಿ ದಾನ, ಧರ್ಮ, ಪೂಜೆ, ಮೇಲು ವರ್ಗಗಳ ಸೇವೆಯನ್ನು ಮಾಡಿ ಮುಂದಿನ ಜನ್ಮದಲ್ಲಿ ಉತ್ತಮರಾಗಿ ಹುಟ್ಟುತ್ತಾರೆ. ಸ್ವರ್ಗ-ನರಕ ಲೋಕಗಳು, ಪುಣ್ಯ-ಪಾಪಗಳು, ಪುನರ್ಜನ್ಮ ಸಿದ್ಧಾಂತ, ಕರ್ಮಸಿದ್ಧಾಂತ ಮುಂತಾದ ವಿಚಾರಗಳು ಜನರನ್ನು ನಡೆಸುವ ಶಕ್ತಿಗಳಾಗಿದ್ದವು. ರೋಗ, ಸಾವು, ಕೇಡುಗಳ ಭಯವು ಜನರನ್ನು ಜ್ಯೋತಿಷಿಗಳ ಅಡಿಯಾಳುಗಳಾಗುವಂತೆ ಮಾಡಿತ್ತು. ಹೆಜ್ಜೆ ಹೆಜ್ಜೆಗೆ ಅವರು ಹೇಳಿದಂತೆ ಕೇಳುತ್ತ, ಕಂಡ ಕಂಡ ದೇವರುಗಳಿಗೆ ಕೈಮುಗಿದು ಅಡ್ಡಬೀಳುತ್ತ ದೈನ್ಯ ಭಯಗಳಲ್ಲಿ ಸದಾ ಬದುಕುವುದು ಜನರ ಸ್ಥಿತಿಯಾಗಿತ್ತು. ತಮ್ಮ ಈ ಸ್ಥಿತಿಗೆ ಹಣೆಬರಹವೇ ಕಾರಣ ಎಂದು ಅವರು ಬಲವಾಗಿ ನಂಬಿದ್ದರು.

**ಮೌಢ್ಯಾಚರಣೆಗಳು, ಶಕುನ–ಜ್ಯೋತಿಷಗಳು, ಗುಡಿ ಗುಂಡಾರಗಳ ಮೂರ್ತಿಪೂಜೆಗಳು, ಅನೇಕ ದೇವೋಪಾಸನೆಗಳು, ಮಾರಿ, ಮಸಣಿ ಮುಂತಾದ ದೇವತೆಗಳ ಪೂಜೆಗಳು, ಕ್ಷೇತ್ರ ತೀರ್ಥಯಾತ್ರಾದಿಗಳು, ವೈದಿಕ ಯಜ್ಞ ಹವನಗಳು – ಇಂಥ ಎಲ್ಲ ಸಂಪ್ರದಾಯಗಳು ಸಮಾಜದ ಇತರೆಲ್ಲ ಜಾತಿಗಳೊಡನೆ ವೀರಶೈವರು ಕೂಡ ಅನುಸರಿಸುವಂತಾಯಿತು. ಶರಣರ ಕಾಲದಲ್ಲಿದ್ದಿಲ್ಲದ ಅನೇಕ ಧಾರ್ಮಿಕ ಏರುಪೇರುಗಳು ಮುಂದಿನ ಚರಿತ್ರೆಯಲ್ಲಿ ಘಟಿಸಿದವು. ೧೩ ನೇ ಶತಮಾನದಿಂದೀಚೆಗೆ ರಾಮ ಕೃಷ್ಣ ಭಕ್ತಿಪಂಥವು ಶಿವಭಕ್ತಿಗೆ ಪೈಪೋಟಿಯೆಂಬಂತೆ ನಡೆಯಿತು. ದಾಸಾಹಿತ್ಯದ ಸಮೃದ್ಧರಚನೆಯು ಕನ್ನಡದಲ್ಲಿ ಹುಟ್ಟಿ ಕೃಷ್ಣಭಕ್ತಿಯನ್ನು ವ್ಯಾಪಕವಾಗಿ ಬೆಳೆಸಿತು. ಇನ್ನೊಂದು ಮುಖ್ಯ ಬದಲಾವಣೆ ಇಸ್ಲಾಂ ಧರ್ಮದಿಂದಾಯಿತು. ವಿಜಯನಗರ ಸಾಮ್ರಾಜ್ಯಕ್ಕೆ ಸಮಾನಾಂತರವಾಗಿ ಹುಟ್ಟಿಕೊಂಡ ಬಹಮನಿ ಸುಲ್ತಾನರು, ದೆಹಲಿ ಸುಲ್ತಾನರು, ಮುಂದೆ ಬಂದ ಮೊಗಲ ಸಾಮ್ರಾಜ್ಯಗಳ ಕಾಲದಲ್ಲಿ ಹಿಂದೂಧರ್ಮಕ್ಕೆ ಒಂದು ದೊಡ್ಡ ಸವಾಲಿನಂತೆ ದೇಶದಲ್ಲಿ ಬೆಳೆದು ವ್ಯಾಪಿಸಿತು.**



■ ಡಾ|| ಅರ್ಕಸಾಲಿ ವೃಷಭೇಂದ್ರಾಚಾರ್

ಸಮಾಜದಲ್ಲಿ ಶ್ರೇಣೀಕೃತ ಜಾತಿ ವ್ಯವಸ್ಥೆ, ಅಸಮಾನತೆ, ವಿಷಮತೆಗಳು ಶಾಶ್ವತವಾಗಿ ಉಳಿದು ಬರಲು ಇವೆಲ್ಲ ಕಾರಣವಾಗಿದ್ದವು. ಜನಸಾಮಾನ್ಯರಿಗೆ ಈ ವಿಷವರ್ತುಲವು ಒಡೆಯಲಾರದ ಭದ್ರಕೋಟೆಯಂತೆ, ಬಿಡಿಸಿಕೊಳ್ಳಲಾರದ ಬಂಧನದಂತೆ, ಮೀರಲಾಗದ ಅಗ್ನಿದೇವನೆಂಬಂತೆ ಪರಿಣಮಿಸಿತ್ತು. ಅದರಲ್ಲೂ ಅಸ್ಪೃಶ್ಯರಾದ ಪಂಚಮರ ಸ್ಥಿತಿ ಅತ್ಯಂತ ಹೀನಾಯವಾಗಿತ್ತು. ಹಾಗೆಯೇ ಭವಪಾಶಕ್ಕೆ ಕಾರಣಳಾದ ಹೆಣ್ಣಿನ ಸ್ಥಿತಿ ಮೇಲಿನ ವರ್ಗಗಳಲ್ಲಿಯೂ ಅಸಹನೀಯವಾಗಿತ್ತು.

ಇಂಥ ಸಂದರ್ಭದಲ್ಲಿ ಕೆಳವರ್ಗದ ಜನರು ವಿದ್ಯೆಗಾಗಲಿ, ದೇವರನ್ನು ಕುರಿತು ಚಿಂತನೆ ಮತ್ತು ಸಾಧನೆಗಾಗಲಿ ಅವಕಾಶ ಪಡೆದಿರಲಿಲ್ಲ. ಹೀಗಿರುವಾಗ ತಮಿಳುನಾಡಿನಲ್ಲಿ ಶೈವ-ವೈಷ್ಣವ ಭಕ್ತಿ ಪರಂಪರೆಯೊಂದು ಪ್ರಾರಂಭವಾಗಿತ್ತು. ನಾಯನ್ಮಾರರು-ಆಳ್ವಾರರು ಜಾತಿ ಭೇದವಿಲ್ಲದೆ ಲಿಂಗಭೇದವಿಲ್ಲದೆ ಎಲ್ಲರೂ ಭಕ್ತಿಮಾರ್ಗದಿಂದ ಪರಮಾತ್ಮನನ್ನು ಪಡೆಯಲು ಅರ್ಹರು ಎಂಬ ವಿಚಾರವನ್ನು ಪ್ರಚಾರ ಮಾಡಿದ್ದರು. ತಮಿಳುನಾಡಿನೊಡನೆ ಸಂಪರ್ಕ ಬಂದಿದ್ದ ಆ ಕಾಲದಲ್ಲಿ ನಮ್ಮಲ್ಲೂ ಅಂಥ ಒಂದು ಹೊಸಗಾಳಿ ಬೀಸಲು ಪ್ರಾರಂಭವಾಯಿತು. ತಮಿಳುನಾಡಿನಲ್ಲಿ ಅದು ಕೇವಲ ಧಾರ್ಮಿಕ ಆಚರಣೆಯಲ್ಲಿ ಮಾರ್ಪಾಟಾಗಿತ್ತು. ಅದನ್ನು ಸಾಮಾಜಿಕ-ವೈಯಕ್ತಿಕ ಉನ್ನತಿಯ ಸಮಗ್ರ ಮಾರ್ಪಾಟಿಗೆ ಕನ್ನಡಿಗರು ಬಳಸಿಕೊಂಡರು. ಸಾಧಕರ ಸ್ವಂತ ಅನುಭವ ಮತ್ತು ವೈಚಾರಿಕತೆಗಳ ಆಧಾರದ ಮೇಲೆ ಇಲ್ಲಿ ಹೊಸ ಅಲೆ ಹುಟ್ಟಿಕೊಂಡಿತು. ಭಕ್ತಿಯು ಶ್ರದ್ಧೆಯ ವಿಚಾರದ ಬೆಂಕಿಯಲ್ಲಿ ಪುಟಗೊಂಡು ಶುದ್ಧವಾಗಿರಬೇಕು, ಕೇವಲ ಅಂಧಶ್ರದ್ಧೆ ಉಪಯುಕ್ತವಲ್ಲ ಎಂಬ ತಿಳುವಳಿಕೆ ಕನ್ನಡದ ಶಿವಸಾಧಕರಿಗೆ ಉಂಟಾಯಿತು. ಅದು ತೀವ್ರ ಚಳುವಳಿಯ ಸ್ವರೂಪವನ್ನು ಪಡೆದುಕೊಂಡಿತು. ಶಿವಶರಣರು ಅಲ್ಲಿಯವರೆಗಿದ್ದ ಧಾರ್ಮಿಕ ಜ್ಞಾನ ಭಂಡಾರವನ್ನು ಹಾಗೂ ಅನೇಕ ಮತಪಂಥಗಳ ತತ್ವ ಆಚರಣೆಗಳನ್ನು ಆಳವಾಗಿ ಅಳೆದೂ ಸುರಿದೂ ಅತ್ಯುತ್ತಮ ಎನ್ನಬಹುದಾದ ಹಾಗೂ ಎಲ್ಲರಿಗೂ ಸಾಧ್ಯವಾಗಬಹುದಾದ ಒಂದು ಮಾರ್ಗವನ್ನು ಕಂಡುಕೊಂಡರು. ಸಂಘಟಿತವಾಗಿ ಕ್ರಾಂತಿಯ ನೆಲೆಯಲ್ಲಿ ಆ ಮಾರ್ಗವನ್ನು ಆಚರಿಸುತ್ತ ಪ್ರಚಾರ ಮಾಡಲು ತೊಡಗಿದರು.

ಆಗಲೇ ಪ್ರಚಾರದಲ್ಲಿದ್ದ ಶೈವಮತ ಪ್ರಭೇದಗಳನ್ನು ಕ್ರೋಡೀಕರಿಸಿ ತಮ್ಮ ಸಾಮಾಜಿಕ-ಆಧ್ಯಾತ್ಮಿಕ ಉದ್ದೇಶಕ್ಕೆ ತಕ್ಕಂತೆ ನವೀಕರಿಸಿಕೊಂಡರೂ ವೇದ, ಉಪನಿಷತ್ತುಗಳು, ಆಗಮಗಳು, ಬೌದ್ಧ ಜೈನ ಮತತತ್ವಗಳು, ಶಂಕರರ ಅದ್ವೈತಸಿದ್ಧಾಂತ ಮುಂತಾದವುಗಳ ಒಳ್ಳೆಯ ಅಂಶಗಳನ್ನೆಲ್ಲ ಶರಣರು ಅಳವಡಿಸಿಕೊಂಡರು. ಅದಕ್ಕೆ ಸಮಗ್ರ ಸಾಮಾಜಿಕ ಕ್ರಾಂತಿಯ ಆಯಾಮವನ್ನು ಸೇರಿಸಿದ್ದು ಶರಣರದೇ ಕೊಡುಗೆ. ವಚನ ಸಾಹಿತ್ಯವನ್ನು ಈ ಚಳುವಳಿಯ ಒಂದು ಮಾಧ್ಯಮವನ್ನಾಗಿ ಇವರು ರೂಪಿಸಿಕೊಂಡರು. ಅದೊಂದು ಅದ್ಭುತ ಸೃಷ್ಟಿಯಾಗಿತ್ತು ಮತ್ತು ಮುಂದಿನ ಕನ್ನಡದ ಜೀವನಕ್ರಮ, ಆಲೋಚನೆಯ ಕ್ರಮ ಮತ್ತು ಸಾಹಿತ್ಯಸೃಷ್ಟಿಯ ಕ್ರಮಗಳು ಜನಪರವಾಗಲು ಮುಖ್ಯಕಾರಣವಾಯಿತು. ಪ್ರಪಂಚದಲ್ಲಿಯೇ ಇದೊಂದು ಅಚ್ಚರಿಯ ಸೃಷ್ಟಿ – ಕನ್ನಡಿಗರ ಕೊನೆಯಿಲ್ಲದ ಸಂಪದ್ಭರಿತ ಗಣಿ. ಶರಣರ ಮಾರ್ಗವು ಯಾವುದೇ ಒಬ್ಬ ವ್ಯಕ್ತಿಯ ಕೊಡುಗೆಯಲ್ಲ. ಅದು ಸಾಮೂಹಿಕ ಕೊಡುಗೆ. ಶರಣರಲ್ಲಿ ಯಾರೂ ಯಾರಿಗಿಂತಲೂ ಕಡಿಮೆಯಲ್ಲ – ಹೆಚ್ಚಲ್ಲ. ಅವರೆಲ್ಲ ಒಂದು ಉದಾತ್ತಗುರಿ ಮತ್ತು ಮಾರ್ಗಗಳಿಗೆ ಅಂಕಿತವಾಗಿದ್ದರು. ವಿಶ್ವವಿಶಾಲವಾದ, ಸಮಾಜಮುಖಿಯಾದ, ಭೌತಿಕ ಜಗತ್ತನ್ನು ವಿರೋಧಿಸದ, ಜೀವವಿರೋಧಿಯಲ್ಲದ, ಜನಸಾಮಾನ್ಯರೆಲ್ಲರಿಗೂ ಸಾಧ್ಯವಾಗಬಹುದಾದ ಮಾರ್ಗವನ್ನು ಅವರು ಹಿಡಿದರು. ಅಲ್ಲಿಯವರೆಗೆ ತುಚ್ಛರೆಂದು ಭಾವಿಸಲಾಗಿದ್ದ ಅಸ್ಪೃಶ್ಯರು, ದಲಿತರು, ಶೂದ್ರರು, ಶ್ರಮಜೀವಿಗಳು, ಮಹಿಳೆಯರು – ಎಲ್ಲರಲ್ಲೂ ಆತ್ಮವಿಶ್ವಾಸ ತುಂಬುವ ಹಾಗೂ ಅವರನ್ನು ಮೋಕ್ಷಕ್ಕೆ



ಅರ್ಹರಾಗುವಂತೆ ಶಿವನಿಗೆ ಪ್ರಿಯರಾಗುವಂತೆ ಮಾಡುವ ಚಿಂತನೆಯ ತಳಹದಿಯನ್ನು ಅವರು ಹೊಂದಿದ್ದರು. ಶ್ರಮಜೀವಿಗಳಿಗೆ ಅತ್ಯುನ್ನತ ಸ್ಥಾನಗೌರವವನ್ನು ಅವರು ಕಾಯಕ ಸಿದ್ಧಾಂತದ ಮೂಲಕ ಕೊಟ್ಟರು. ಸನ್ಯಾಸಕ್ಕಿಂತ ಸಂಸಾರ ಶ್ರೇಷ್ಠವೆಂದು ಎತ್ತಿಹಿಡಿದರು. ದೇಗುಲ ಪರಂಪರೆ, ಮೂರ್ತಿಪೂಜೆಯೇ ಮೊದಲಾಗಿ ಎಲ್ಲ ಬಗೆಯ ಧಾರ್ಮಿಕ ಮೌಢ್ಯಗಳನ್ನು ಖಂಡಿಸಿ ಇಷ್ಟಲಿಂಗ ಪದ್ಧತಿಯ ಮೂಲಕ ಸಾಮಾನ್ಯ ಜನರ ಕೀಳರಿಮೆಯನ್ನು ದೂರಮಾಡಿ ಅವರನ್ನು ಶಿವನೆತ್ತರಕ್ಕೆ ಹತ್ತಿರಕ್ಕೆ ಕೊಂಡೊಯ್ದದ್ದು ಒಂದು ಪವಾಡವೇ ಸರಿ.

ಶರಣರು ತಮ್ಮ ಆದರ್ಶಕ್ಕೆ ವಿರೋಧವಾಗಿದ್ದ ವ್ಯವಸ್ಥೆ ಸಂಪ್ರದಾಯಗಳನ್ನೆಲ್ಲ ವಿರೋಧಿಸಿದರು. ವರ್ಣಾಶ್ರಮ ವ್ಯವಸ್ಥೆಯ ಪೋಷಕರಾಗಿ ಧನ ದೌಲತ್ತುಗಳಿಂದ ಕಣ್ಣು ಕುಕ್ಕಿಸುವ ದೇವಾಲಯಗಳು, ಪೂಜೆ, ಯಜ್ಞ, ಯಾಗಾದಿಗಳ ಪರಂಪರೆಯನ್ನು ಬೆಳೆಸುವ ಮುಖ್ಯ ಶಕ್ತಿಯಾಗಿದ್ದ ರಾಜಸತ್ತೆಯನ್ನೂ ಅವರು ಒಲ್ಲೆಸಲಿಲ್ಲ ಮತ್ತು ವೈದಿಕ ಪುರೋಹಿತಶಾಹಿಯನ್ನೂ ತೀವ್ರವಾಗಿ ಖಂಡಿಸಿದರು. ಭಕ್ತಿಯೆಂಬುದು ಅತ್ಯಂತ ಬಡವನಿಗೂ ಸಾಧ್ಯವಾಗುವ ಅಂತರಂಗ ಸಾಧನೆಯ ದಾರಿಯೇ ಹೊರತು ಬಾಹ್ಯ ಆಡಂಬರ ಡಂಭಾಚಾರಗಳ ದಾರಿಯಲ್ಲ ಎಂಬುದನ್ನು ಸಿದ್ಧಮಾಡಿ ತೋರಿಸಿದರು.

ದೇಶದ ಅಂದಿನ ಪ್ರಮುಖ ರಾಜಕೀಯ ರಾಜಧಾನಿಯಾಗಿದ್ದ ಕಲ್ಯಾಣಪಟ್ಟಣವು ಶರಣರ ಕಾರ್ಯರಂಗವಾಯಿತು. ಕ್ರಾಂತಿಯನ್ನು ಬಯಸುವ ಸಮಾನಮನಸ್ಕರೆಲ್ಲ ಅಲ್ಲಿ ಬಂದು ಸೇರಿದರು. ರಾಜಕೀಯ ಸೇವೆಯಲ್ಲಿದ್ದೂ ಇಲ್ಲದಂತಿದ್ದ ಬಸವಣ್ಣನವರು ಮುಖ್ಯಸಂಘಟಕರಾಗಿ ಕೆಲಸ ಮಾಡಿದರು. ಶರಣರನ್ನು ಕೂಡಿಸುವ ಮತ್ತು ಶರಣಧರ್ಮವನ್ನು ವಚನಗಳ ಮೂಲಕ ನಾಡಿನಲ್ಲೆಲ್ಲ ಜಂಗಮ ಸಮುದಾಯದ ಮೂಲಕ ಪ್ರಸಾರ ಮಾಡುವುದು ಅವರ ಮಹತ್ವದ ಕಾರ್ಯವಾಗಿತ್ತು. ಜನಸಾಮಾನ್ಯರಿಗೆಲ್ಲ ಸುಲಭವಾಗಿ ಅರ್ಥವಾಗುವ ಮತ್ತು ಅವರನ್ನೆಲ್ಲ ಒಳಗೊಳ್ಳುವ ಶರಣರ ಸಂದೇಶಗಳು ನಾಡಿನಾದ್ಯಂತ ಪ್ರಚಾರವಾಗಿ ದೊಡ್ಡ ಬದಲಾವಣೆಯನ್ನು ತಂದವು. ಇದರ ಪರಿಣಾಮವಾಗಿ ಅಲ್ಲಿಯವರೆಗೆ ಪ್ರಬಲವಾಗಿದ್ದ ಜೈನಧರ್ಮವು ಮಸಳಿಸಿತು – ವೀರಶೈವ ಧರ್ಮವು ಜನಪ್ರಿಯವಾಗಿ ಕನ್ನಡನಾಡು, ಮಹಾರಾಷ್ಟ್ರ-ಆಂಧ್ರಗಳ ಗಡಿಭಾಗಗಳಲ್ಲಿ ವ್ಯಾಪಿಸಿತು.

* * *

ಶರಣರ ಕ್ರಾಂತಿಯು ಸಂಪೂರ್ಣ ಸಫಲವಾಗಲಿಲ್ಲ. ಕಲ್ಯಾಣದಲ್ಲಿ ರಕ್ತಕ್ರಾಂತಿಯಾಗಿ ಶರಣರೆಲ್ಲ ಚೆಲ್ಲಾಪಿಲ್ಲಿಯಾಗಿ ಅಲ್ಲಲ್ಲಿ ಚದುರಿಹೋಗಬೇಕಾಯಿತು. ಬರಬರುತ್ತಾ ಶರಣರ ಪ್ರಗತಿಪರ ಮಾರ್ಗದೊಳಗೆ ಹಳೆಯ ಸಾಂಪ್ರದಾಯಿಕ ಅಂಶಗಳು ಸೇರಿಕೊಂಡು ಒಂದು ರೀತಿಯ ಸಮನ್ವಯ ವೀರಶೈವ ಧರ್ಮ ರೂಪು ತಳೆಯುತ್ತಾ ಬಂದುದು ಇತಿಹಾಸದ ಪರಿಣಾಮ. ಇಷ್ಟಲಿಂಗದ ಜೊತೆಗೆ ಸ್ಥಾವರ ಲಿಂಗಗಳ ಪುಣ್ಯಕ್ಷೇತ್ರಗಳ ಪರಂಪರೆ ಬೆಳೆದುಬಂತು. ಧರ್ಮ ಪ್ರಚಾರಕವಾಗಿದ್ದ ಜಂಗಮ ಸಮುದಾಯವು ಬ್ರಾಹ್ಮಣರಂತೆ ಪುರೋಹಿತಶಾಹಿ ಶಕ್ತಿಯಾಗಿ ಬೆಳೆದುಬಂತು. ಮಠಮಾನ್ಯಗಳು ರಾಜಕೀಯ ಬೆಂಬಲ ಪಡೆದು ವರ್ಚಸ್ಸು ಬೀರುತ್ತಬಂದವು.

ಜಾತಿವ್ಯವಸ್ಥೆಯ ಮೇಲುಕೀಳುಗಳು, ಕಟ್ಟುಪಾಡುಗಳು ಬಹಳಷ್ಟು ಬದಲಾಗಲಿಲ್ಲ. ಶರಣರ ಕ್ರಾಂತಿಯ ಕಾಲದಲ್ಲಿ ವೀರಶೈವದ ತೆಕ್ಕೆಯೊಳಗೆ ಬಂದ ಮಾದಾರ, ಡೋಹಾರ, ಮಡಿವಾಳ, ಕಮ್ಮಾರ, ಚಮ್ಮಾರ ಮುಂತಾದ ಕಾಯಕ ಮಾಡುವ ವ್ಯಕ್ತಿಗಳನ್ನು ಹೊರತುಪಡಿಸಿದರೆ ಉಳಿದಂತೆ ಆಯಾ ಜಾತಿ ಪಂಗಡಗಳೆಲ್ಲ ಮೊದಲಿದ್ದಂತೆಯೇ ಉಳಿದುಬಂದವು.

ಮೌಢ್ಯಾಚರಣೆಗಳು, ಶಕುನ-ಜ್ಯೋತಿಷಗಳು, ಗುಡಿಗುಂಡಾರಗಳ ಮೂರ್ತಿಪೂಜೆಗಳು, ಅನೇಕ ದೇವೋಪಾಸನೆಗಳು, ಮಾರಿ, ಮಸಣಿ. ಮುಂತಾದ ದೇವತೆಗಳ ಪೂಜೆಗಳು, ಕ್ಷೇತ್ರ ತೀರ್ಥಯಾತ್ರಾದಿಗಳು. ವೈದಿಕ ಯಜ್ಞ ಹವನಗಳು – ಇಂಥ ಎಲ್ಲ ಸಂಪ್ರದಾಯಗಳು ಸಮಾಜದ ಇತರೆಲ್ಲ ಜಾತಿಗಳೊಡನೆ ವೀರಶೈವರೂ ಕೂಡ [illegible] [illegible] ಕಾಲದಲ್ಲಿ [illegible] ಅನೇಕ ಧಾರ್ಮಿಕ [illegible]

ಮುಂದಿನ ಚರಿತ್ರೆಯಲ್ಲಿ ಘಟಿಸಿದವು. ೧೩ನೇ ಶತಮಾನದಿಂದೀಚೆಗೆ ರಾಮ ಕೃಷ್ಣ ಭಕ್ತಿಪಂಥವು ಶಿವಭಕ್ತಿಗೆ ಪೈಪೋಟಿಯೆಂಬಂತೆ ನಡೆಯಿತು. ದಾಸಸಾಹಿತ್ಯದ ಸಮೃದ್ಧರಚನೆಯು ಕನ್ನಡದಲ್ಲಿ ಹುಟ್ಟಿ ಕೃಷ್ಣಭಕ್ತಿಯನ್ನು ವ್ಯಾಪಕವಾಗಿ ಬೆಳೆಸಿತು. ಇನ್ನೊಂದು ಮುಖ್ಯ ಬದಲಾವಣೆ ಇಸ್ಲಾಂ ಧರ್ಮದಿಂದಾಯಿತು. ವಿಜಯನಗರ ಸಾಮ್ರಾಜ್ಯಕ್ಕೆ ಸಮಾನಾಂತರವಾಗಿ ಹುಟ್ಟಿಕೊಂಡ ಬಹಮನಿ ಸುಲ್ತಾನರು, ದೆಹಲಿ ಸುಲ್ತಾನರು, ಮುಂದೆ ಬಂದ ಮೊಗಲ ಸಾಮ್ರಾಜ್ಯಗಳ ಕಾಲದಲ್ಲಿ ಹಿಂದೂಧರ್ಮಕ್ಕೆ ಒಂದು ದೊಡ್ಡ ಸವಾಲಿನಂತೆ ದೇಶದಲ್ಲಿ ಬೆಳೆದು ವ್ಯಾಪಿಸಿತು. ಬಲಾತ್ಕಾರದ ಮತ್ತು ಅನಿವಾರ್ಯದ ದೊಡ್ಡ ಪ್ರಮಾಣದ ಮತಾಂತರ ಕಾರ್ಯ ಆಗ ನಡೆಯಿತು. ಹಿಂದೂ- ಮುಸ್ಲಿಮರ ನಡುವೆ ಸಾಮರಸ್ಯ ಕುದುರಿಸುವ ಪ್ರಯತ್ನವನ್ನು ಸೂಫಿಸಂತರು-ದರ್ಗಾಗಳು ಮಾಡಿದವು. ತಾತ್ವಿಕವಾಗಿ ಇವರಿಗೂ ವೀರಶೈವರಿಗೂ ಹೊಂದಾಣಿಕೆ ಉಂಟಾಯಿತು. (ಶಿರಹಟ್ಟಿ, ಸಾವಳಿಗಿ, ತಿಂಥಿಣಿ, ಕಲಬುರ್ಗಿ ಮುಂತಾದವು.)

ಧಾರ್ಮಿಕ ಚರಿತ್ರೆಯಲ್ಲಿ ಬ್ರಿಟಿಷರ ಆಳ್ವಿಕೆಯ ಕಾಲವು ಮತ್ತೊಂದು ಘಟ್ಟ. ಅವರ ಆಳ್ವಿಕೆಯ ಕಾಲದಲ್ಲಿ ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರದ ಕೆಲಸವೂ ಸಾಕಷ್ಟು ನಡೆಯಿತು. ಜೊತೆಗೆ ಪಾಶ್ಚಾತ್ಯ ಚಿಂತನೆಯ ಪ್ರಭಾವವೂ ನಮ್ಮ ದೇಶದ ಮೇಲಾಯಿತು. ಯೂರೋಪಿನಲ್ಲಿ ವೈಜ್ಞಾನಿಕ - ತಂತ್ರಜ್ಞಾನಗಳ ಆಧುನಿಕಯುಗ ಪ್ರಾರಂಭವಾಗಿತ್ತು. ಅದು ನಮ್ಮ ದೇಶದಲ್ಲೂ ಪ್ರವೇಶಿಸಿತು. ಪ್ರಜಾಪ್ರಭುತ್ವದ ವ್ಯವಸ್ಥೆ ನಮ್ಮಲ್ಲಿ ಬರಲಿಕ್ಕೆ ಇವೆಲ್ಲ ಕಾರಣವಾದವು. ಸ್ವಾತಂತ್ರ್ಯ ಪೂರ್ವದ ಹೋರಾಟದ ಕಾಲದಲ್ಲಿ ವಿವೇಕಾನಂದ, ದಯಾನಂದ ಸರಸ್ವತಿ, ಅರವಿಂದ, ಗಾಂಧೀಜಿ, ಅಂಬೇಡ್ಕರ್ ಮುಂತಾದವರ ವಿಚಾರ ಧಾರೆಗಳು ನಮ್ಮ ಬೌದ್ಧಿಕವಲಯವನ್ನು ವಿಸ್ತರಿಸಿದವು. ಆಧುನಿಕ ಯುಗಕ್ಕೆ ಕಾರಣರಾದ ನ್ಯೂಟನ್, ಐನ್‌ಸ್ಟೈನ್, ಡಾರ್ವಿನ್, ಫ್ರಾಯ್ಡ್, ರೂಸೊ, ವಾಲ್ಟೇರ್, ಲಿಂಕನ್, ಕಾರ್ಲ್ ಮಾರ್ಕ್ಸ್, ಲೆನಿನ್, ಮಾರ್ಟಿನ್ ಲೂಥರ್ ಕಿಂಗ್ ಮುಂತಾದ ಮಹನೀಯರ ಪ್ರಭಾವ ನಮ್ಮ ಆಲೋಚನೆಗಳ ಮೇಲಾದದ್ದನ್ನು ಅಲ್ಲಗಳೆಯಲಾಗುವುದಿಲ್ಲ.

* * *

ಇಷ್ಟೆಲ್ಲ ಸ್ಥಿತ್ಯಂತರಗಳು ಮತ್ತು ಸ್ವಾತಂತ್ರ್ಯಾನಂತರ ಉಂಟಾದ ಬದಲಾವಣೆಗಳನ್ನು ಶರಣರ ಕ್ರಾಂತಿಯ ಹನ್ನೆರಡನೇ ಶತಮಾನದಿಂದ ಇಲ್ಲಿಯವರೆಗಿನ ಸುಮಾರು ೯೦೦ ವರ್ಷಗಳ ಅವಧಿಯಲ್ಲಿ ಪರಿಗಣಿಸಬೇಕಾಗುತ್ತದೆ. ಭೌಗೋಲಿಕವಾಗಿ, ಭೌತಿಕವಾಗಿ, ರಾಜಕೀಯವಾಗಿ, ವೈಜ್ಞಾನಿಕವಾಗಿ, ಶೈಕ್ಷಣಿಕ ಮತ್ತು ಸಾಹಿತ್ಯಿಕವಾಗಿ ಅಂದಿಗೂ ಇಂದಿಗೂ ಅಜಗಜಾಂತರ ಎಂಬಷ್ಟು ವ್ಯತ್ಯಾಸಗಳನ್ನು ನಾವು ನೋಡುತ್ತೇವೆ.

ನೀರಿನ ಮೂಲಗಳು, ಅರಣ್ಯಗಳು ಸಮೃದ್ಧವಾಗಿದ್ದ, ವಿದ್ಯುತ್ತು, ಸಂಪರ್ಕ ಸಾಧನೆಗಳು, ಸಮೂಹ ಮಾಧ್ಯಮಗಳು, ವೈಜ್ಞಾನಿಕ ಸೌಲಭ್ಯಗಳು ಒಂದೂ ಇರದಿದ್ದ ಅಂದಿನ ಕಾಲದಲ್ಲಿ ಶರಣರು ವಚನಗಳ ಕಟ್ಟುಗಳನ್ನು ಹೊತ್ತುಕೊಂಡು ಕಾಲುನಡಿಗೆಯಲ್ಲಿ ಅರಣ್ಯಗಳ ಮೂಲಕ ಓಡಾಡಿ ಊರೂರುಗಳಲ್ಲಿ ಶರಣಧರ್ಮದ ಪ್ರಚಾರ ಮಾಡಿ ಸಮಾಜದಲ್ಲಿ ಬಹುದೊಡ್ಡ ಬದಲಾವಣೆಯನ್ನು ತಂದರು. ಇಂದಿನ ನೀರಿನ ಮೂಲಗಳಿಲ್ಲದ ಅರಣ್ಯನಾಶವಾಗಿ ಬರಡಾದ ಒಣ ನಾಡಿನಲ್ಲಿ ನಗರೀಕರಣ, ಕೈಗಾರಿಕೀಕರಣ, ಆಧುನಿಕೀಕರಣದ ಎಲ್ಲ ಸೌಲಭ್ಯಗಳನ್ನು ಅನುಭವಿಸುತ್ತಿರುವ ನಾವು ಸಂಪೂರ್ಣವಾಗಿ ಬೇರೆ ಜಗತ್ತಿನಲ್ಲಿದ್ದೇವೆ. ಇತ್ತೀಚೆಗೆ ಜಾಗತೀಕರಣ, ವಾಣಿಜ್ಯೀಕರಣಗಳು ಇಡೀ ಪ್ರಪಂಚವನ್ನು ಒಂದು ಊರಿನಂತೆ ಮಾರ್ಪಡಿಸಿ ನಮ್ಮ ದೇಶೀಯವೆಂಬಂಥ ಕಲೆ, ಸಂಸ್ಕೃತಿ, ಧರ್ಮಾಚರಣೆ ಮುಂತಾದುವುಗಳನ್ನು ತೆರೆಮರೆಗೆ ಸರಿಸುತ್ತಿವೆ.

ಪರಿಸರ ನಾಶವಲ್ಲದೆ, ಹಿಂದೂ ಮತಾಂಧತೆ, ಮುಸ್ಲಿಂ ಮತಾಂಧತೆ, ಮತೀಯ ಭಯೋತ್ಪಾದಕ ಉಗ್ರರ ಹಾವಳಿ, ರಾಷ್ಟ್ರೀಯ ಹಾಗೂ ಪ್ರಾಂತೀಯ ಗಡಿ ಸಮಸ್ಯೆಗಳು-ತಿಕ್ಕಾಟಗಳು, ನದೀ ನೀರಿನ ಹಂಚಿಕೆಗಾಗಿ ಹೊಡೆದಾಟಗಳು, ಸ್ವಾರ್ಥ ರಾಜಕಾರಣ ಪಕ್ಷಗಳ ಮೇಲಾಟಗಳು, ಜನಸಂಖ್ಯಾಸ್ಫೋಟ, ಹಣದುಬ್ಬರ, ನಿರುದ್ಯೋಗ ಸಮಸ್ಯೆ, ದಲಿತರ-ಮಹಿಳೆಯರ ಮೇಲಿನ ದೌರ್ಜನ್ಯಗಳು, ... ಇತ್ಯಾದಿ ಇತ್ಯಾದಿ ಒಂದೇ ಎರಡೇ ಅಸಂಖ್ಯ ಸಮಸ್ಯೆಗಳ ಸಂಕಷ್ಟಗಳ ಸುಳಿಯಲ್ಲಿ ಸಿಕ್ಕಿಕೊಂಡು ಜನರು ಒದ್ದಾಡುತ್ತಿದ್ದಾರೆ. ಆಧುನಿಕ ಯುಗವು ಅನೇಕ ಸುಖ ಸವಲತ್ತುಗಳನ್ನು ಕೊಟ್ಟಿದೆ. ಹಾಗೆಯೇ ಸಮಸ್ಯೆಗಳನ್ನೂ ಅದಕ್ಕಿಂತ ಹೆಚ್ಚಾಗಿ ಕೊಟ್ಟಿದೆ.

ಜೀವನ ಮೌಲ್ಯಗಳು ಬದಲಾಗಿವೆ; ಬದುಕಿನ ರೀತಿ ನೀತಿಗಳು ವೇಷಭೂಷಣಗಳು ಮಾತನಾಡುವ ಭಾಷೆ ಎಲ್ಲ ಬದಲಾಗಿವೆ. ರಾಜ ಪ್ರಜೆಗಳ ಊಳಿಗಮಾನ್ಯ ಸರ್ವಾಧಿಕಾರಿ ವ್ಯವಸ್ಥೆ ಬದಲಾಗಿ ಪ್ರಜಾಪ್ರಭುತ್ವ ಮತ್ತು ಬಂಡವಾಳಶಾಹಿ ವ್ಯವಸ್ಥೆಯಲ್ಲಿ ನಾವಿದ್ದೇವೆ. ವೈಜ್ಞಾನಿಕ ತಂತ್ರಜ್ಞಾನಗಳ ಬದಲಾವಣೆಗಳಂತೂ ಅತಿ ತೀವ್ರವಾಗಿ ದಿನೇದಿನೇ ಬದಲಾಗುತ್ತಿವೆ. ಸ್ವಾತಂತ್ರ್ಯಪೂರ್ವದಲ್ಲಿದ್ದ ಮೌಲ್ಯಗಳೂ ಈಗ ಬದಲಾಗಿವೆ. ಇಂದು ನಾವು ಬದುಕನ್ನು ನೋಡುವ ದೃಷ್ಟಿಕೋನವೇ ಬದಲಾಗಿದೆ.

ಹಿಂದಿನ ಜೀವನ ಮೌಲ್ಯವು ಪಾರಲೌಕಿಕವಾಗಿದ್ದರೆ ಇಂದು ನಾವು ಪೂರಾ ಲೌಕಿಕರಾಗಿದ್ದೇವೆ. ದೇಹವೇ ದೇವಾಲಯವಾಗಿ ಭಕ್ತಿಸಾಧನೆಯು ಆಧ್ಯಾತ್ಮಿಕ ಯೋಗ ಸಾಧನೆಯ ರೀತಿಯಾಗಿತ್ತು ಶರಣರಿಗೆ; ನಡೆನುಡಿಗಳ ಇಹಪರಗಳ ಸಮನ್ವಯವನ್ನು ಅವರು ಸಾಧಿಸಿದ್ದರು. ಸರಳ ನಿಸ್ಪೃಹ ಸಾಮಾಜಿಕ ಕಳಕಳಿಯ ಬದುಕಿನ ರೀತಿ ಅವರದಾಗಿತ್ತು. ಶರಣ ಧರ್ಮಕ್ಕಾಗಿ ಉರಿಬರಲಿ ಸಿರಿಬರಲಿ ಹರಣವೇ ಹಾರಿಹೋಗಲಿ ಎಂಬ ಅಂಜದ ಧೀರಬದ್ಧತೆ ಅವರಿಗಿತ್ತು. ಆದರೆ ಇಂದು ನಾವು ನುಡಿಗಳನ್ನು ಮಾತಿಗಾಗಿ ಮಾತು ಎಂಬಂತೆ ಬಳಸಿಕೊಂಡು ನಗದೀಕರಣ ಮಾಡಿಕೊಳ್ಳುತ್ತಿದ್ದೇವೆ. ಭಾಷಣ ಸಭೆ ಸಮಾರಂಭಗಳಲ್ಲಿ ಕೇವಲ ಪ್ರದರ್ಶನಕ್ಕಾಗಿ ಶರಣರ ವಾಣಿಗಳನ್ನು ಉಪಯೋಗಿಸಿ ಕೊಳ್ಳುತ್ತೇವೆ. ಹಣ ಆಡಂಬರಗಳು ಅವರಿಗೆ ದೂರವಾಗಿದ್ದರೆ ನಮಗೆ ಅವೇ ಬಹಳ ಮುಖ್ಯವಾಗಿವೆ. ರಾಜರನ್ನು ಅಂಥ ಸರ್ವಾಧಿಕಾರೀ ಕಾಲದಲ್ಲಿಯೇ ಓಲೈಸದಂಥ ಅಭಿಮಾನಿಗಳು ಶರಣರು ; ನಾವು ರಾಜಕಾರಣಿಗಳನ್ನು ಶ್ರೀಮಂತರನ್ನು ಓಲೈಸುವುದನ್ನೇ ಸಾರ್ಥಕ ಮಾಡಿಕೊಂಡಿದ್ದೇವೆ. ಮಠಗಳೂ ಅದೇ ಕೆಲಸ ಮಾಡುತ್ತಿವೆ. ಶ್ರೀಮಂತ ಮಠಗಳಿಗೆ ಗೌರವ ಬಹಳ, ಭಕ್ತರೂ ಬಹಳ.

ಶರಣರ ಕಾಲದಲ್ಲಿದ್ದ ಕಾಯಕ ಸ್ವರೂಪವೇ ಬದಲಾಗಿದೆ. ಆ ಕಾಲದ ಸಮಾಜ ಸರಳ ರಚನೆಯನ್ನು ಹೊಂದಿತ್ತು, ಹಣ ಮುಖ್ಯವಾಗಿದ್ದಿಲ್ಲ. ಹಣ ಗಳಿಸಿ ಉಳಿಸಿ ಆಸ್ತಿ, ಅಂತಸ್ತು, ವರ್ಚಸ್ಸು, ಐಷಾರಾಮ, ಬಂಡವಾಳಗಳನ್ನು ಬೆಳೆಸಿಕೊಳ್ಳುವುದೇ ಮುಖ್ಯಧ್ಯೇಯ ವಾಗಿರುವ ಇಂದಿನ ಕಾಲದಲ್ಲಿ ಶರಣರ ಅಪರಿಗ್ರಹ, ಅಸಂಗ್ರಹ ತತ್ವಗಳನ್ನು ಯಾರು ಆಚರಿಸಬೇಕು ? ಶರಣರ ತತ್ವಗಳಿಗೆ ಸಮೀಪವಾಗಿ ಇಂದು ಬಾಳುತ್ತಿರುವವರೆಂದರೆ ಕೂಲಿಕಾರರು, ಶ್ರಮಜೀವಿಗಳು ಹಾಗೂ ರೈತರು. ಅವರನ್ನು ಯಾರು ಗೌರವಿಸುತ್ತಾರೆ ? ಅವರ ಕಷ್ಟಗಳಿಗೆ ಯಾರು ಸ್ಪಂದಿಸುತ್ತಾರೆ ? ರೈತರ ಆತ್ಮಹತ್ಯೆಯ ದುರಂತಗಳು ದಿನಾಲೂ ನಡೆಯುತ್ತಿರುವಾಗ ಆರ್ಥಿಕ ವ್ಯವಸ್ಥೆ ಎಂಥ ಅಧೋಗತಿಗೆ ಇಳಿದಿದೆ ಎಂಬುದು ಗೊತ್ತಾಗುತ್ತದೆ. ದುಡಿಯುತ್ತ ಬಡತನದಲ್ಲೇ ಬದುಕುತ್ತಿರುವವರನ್ನು ರಾಜಕಾರಣಿಗಳು, ಬಂಡವಾಳಶಾಹಿಗಳು, ಅಧಿಕಾರಶಾಹಿಗಳು ಹಾಗೂ ಪುರೋಹಿತವರ್ಗ ಶೋಷಣೆ ಮಾಡುತ್ತಲೇ ಇದೆ.

ಕುರ್ಚಿಗಳು, ಪ್ರಶಸ್ತಿ, ಪ್ರತಿಷ್ಠೆಗಳೆಲ್ಲ ಪ್ರಚಾರ ಪ್ರಿಯರಿಗೆ, ಸಂಚುಗಾರರಿಗೆ, ಬಡಾಯಿಗಳಿಗೆ ಮಾತ್ರ ಸಿಗುತ್ತವೆಯೇ ಹೊರತು ಮರೆಯಲ್ಲೇ ದುಡಿಯುವವ ರಿಗಲ್ಲ. ಶಿಕ್ಷಣ ಪದ್ಧತಿಯು ಶ್ರಮಜೀವಿಗಳನ್ನು ತಯಾರು ಮಾಡುವುದಿಲ್ಲ – ಅಷ್ಟೇ ಅಲ್ಲ ದುದಿಯುವುದನ್ನು, ದುಡಿವವರನ್ನು ತಿರಸ್ಕಾರದಿಂದ ನೋಡುವಂತೆ ಮಾಡುತ್ತದೆ. ಓದಿದವರಿಗೆಲ್ಲ ಬಿಳಿಬಟ್ಟೆ ನೌಕರಿಗಳು, ಪಟ್ಟಣಗಳ ಸುಖದ ಐಷಾರಾಮಿ ಜೀವನವೇ


## ನವಕರ್ನಾಟಕದ ಎರಡು ಕೃತಿಗಳಿಗೆ ೨೦೦೫ರ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ






'ಹೊಸತು' ಸಹಸಂಪಾದಕರಾದ ಪ್ರೊ|| ಚಿ. ಶ್ರೀನಿವಾಸರಾಜು ಅವರ ಐದು ಮೂಕನಾಟಕಗಳ ಇಂಗ್ಲಿಷ್ ಅನುವಾದ 'Phoenix & Four Other Mime Plays' (ಅನು : ಎಸ್. ಸುಗತ) ಕೃತಿಗೆ ಉತ್ತಮ ಅನುವಾದ ಪ್ರಶಸ್ತಿ. 'ಹೊಸತು' ಸಮಾಲೋಚಕ ಮಂಡಳಿಯ ಡಾ|| ವಿ. ಚಂದ್ರಶೇಖರ ನಂಗಲಿ ಅವರ ಕೃತಿ 'ಅಲಿಸಯ್ಯ ಮಲೆಯ ಕವಿ'ಗೆ ಉತ್ತಮ ವಿಮರ್ಶಾ ಪ್ರಶಸ್ತಿ.
ಇವರಿಗೆ ನವಕರ್ನಾಟಕ ಮತ್ತು ಹೊಸತು ಬಳಗದ ಅಭಿನಂದನೆಗಳು !

ಗುರಿ ಯಾಗಿದೆ. ನೌಕರಸ್ಥ ವರಗಳು ಹಣಕ್ಕೆ ಬಿಕರಿಯಾಗುತ್ತಿವೆ. ವರದಕ್ಷಿಣೆ ದೊಡ್ಡ ಪಿಡುಗಾಗಿದೆ. ಹಣವೇ ಆಳುತ್ತಿರುವ ಇಂದಿನ ಸಮಾಜದಲ್ಲಿ ಧರ್ಮ, ನೀತಿ, ನ್ಯಾಯ, ಪಾರಮಾರ್ಥ, ಸಾತ್ವಿಕತೆ ಇವುಗಳಿಗೆ ಯಾವ ಬೆಲೆ ಇದೆ ?

ಇಷ್ಟೆಲ್ಲ ಆಧುನಿಕತೆ, ವೈಜ್ಞಾನಿಕತೆಗಳು ಬೆಳೆದಿದ್ದರೂ ಹಲವಾರು ಹಳೆಯ ಸಂಪ್ರದಾಯಗಳು ಉಳಿದುಬಂದಿವೆ. ಶ್ರೇಣೀಕೃತ ಜಾತಿವ್ಯವಸ್ಥೆ, ಕ್ಷುದ್ರದೇವತೆಗಳ ಉಪಾಸನೆ, ಮೂಢಭಕ್ತಿ, ಕಂದಾಚಾರಗಳು, ಮೂರ್ತಿಪೂಜೆ, ವ್ಯಕ್ತಿಪೂಜೆಗಳು, ಶಾಸ್ತ್ರ, ಜ್ಯೋತಿಷಿಗಳು ಮುಂತಾದುವೆಲ್ಲ ಹಾಗೇ ಉಳಿದಿವೆ. ಹಣ, ವೈಜ್ಞಾನಿಕ ಸೌಲಭ್ಯಗಳು ಇವುಗಳಿಗೆ ಪೋಷಕವಾಗಿ ಬೆಳೆದಿವೆಯೇ ಹೊರತು ಅವುಗಳ ಪ್ರಾಬಲ್ಯವನ್ನು ಕುಂದಿಸಿಲ್ಲ. ಆಧುನಿಕ ವೈಚಾರಿಕ ಕ್ರಾಂತಿಯು ಬುದ್ಧಿಜೀವಿಗಳ ಸ್ತರದಲ್ಲಿ ಮಾತ್ರ ಕಂಡುಬರುತ್ತದೆ. ಜನಸಾಮಾನ್ಯರ ಮಟ್ಟಕ್ಕೆ ಇಳಿದೇ ಇಲ್ಲ. ವೈಚಾರಿಕತೆಯ ದೃಷ್ಟಿಯಿಂದ ೧೨ನೇ ಶತಮಾನದ ಜಾಗೃತಿಯೇ ಇಂದಿಗೂ ಅಚ್ಚರಿ ಮೂಡಿಸುತ್ತದೆ. ೨೧ನೇ ಶತಮಾನದ ಜನ ನಾವು ನಾಚುವಂತಿದೆ. ಶರಣರು ಮೂರ್ತಿಪೂಜೆ ವ್ಯಕ್ತಿಪೂಜೆಗಳನ್ನು ವಿರೋಧಿಸಿದರು. ಆದರೆ ಮುಂದೆ ಬಂದ ಜನ ಅಂಥ ಶರಣರನ್ನು, ಇತ್ತೀಚೆಗೆ ಆಗಿಹೋದ ಶರಣರನ್ನು, ದೈವತ್ವಕ್ಕೇರಿಸಿ ಗುಡಿಕಟ್ಟಿ ಪೂಜೆ ಉತ್ಸವಾದಿಗಳನ್ನು ಮಾಡುತ್ತಾ ಬಂದಿದ್ದಾರೆ.




ಕಿರೀಟಧಾರಿ ರಾಜಮಹಾರಾಜರ ವ್ಯವಸ್ಥೆಯೇ ಹಿಂದೆ ಸರಿದು ಪ್ರಜಾರಾಜ್ಯದ ವ್ಯವಸ್ಥೆಗೆ ದಾರಿಮಾಡಿಕೊಟ್ಟಿದ್ದರೂ ಧಾರ್ಮಿಕ ರಂಗದಲ್ಲಿ ಮಾತ್ರ ಮಠಮಾನ್ಯಗಳಲ್ಲಿ ಊಳಿಗ ಮಾನ್ಯ ವ್ಯವಸ್ಥೆಯ ಪಟ್ಟಭದ್ರ ಹಿಡಿತ ಸಡಿಲವಾಗಿಲ್ಲ; ಇದು ಬೌದ್ಧಿಕ ದಾಸ್ಯದ-ದಾರಿದ್ರ್ಯದ ಸಂಕೇತವೇ ಹೌದು. ಮಠಗಳು ದೀನದರಿದ್ರರ, ರೋಗಿ, ಅಬಲೆಯರ ಸೇವೆ ಮಾಡುವುದನ್ನು ಬಿಟ್ಟು ವೈಭವೋಪೇತವಾಗಿ ಮೆರೆದಾಡುವುದು, ರಾಜಕೀಯ ಮಾಡುವುದು ಮುಂತಾದುವುಗಳಲ್ಲಿ ತೊಡಗಿವೆ. ಕೆಲವು ಮಠಗಳು ಇತ್ತೀಚೆಗೆ ಪ್ರಗತಿಪರ ಚಟುವಟಿಕೆಗಳಲ್ಲಿ ತೊಡಗಿರುವುದು ಹಾಗೂ ಬಸವಧರ್ಮದ ಪುನರುಜ್ಜೀವನದಲ್ಲಿ ತೊಡಗಿರುವುದು ಆಶಾದಾಯಕವಾಗಿದೆ.

ಮಠಗಳಲ್ಲಿಯೇ ಇಂದು ಎರಡು ಪಂಗಡಗಳು ಎದ್ದುಕಾಣುತ್ತಿವೆ. ಒಂದು ಶೈವ ಪರಂಪರೆಯನ್ನು ಇನ್ನೊಂದು ವೀರಶೈವ ಪರಂಪರೆಯನ್ನು ಅನುಸರಿಸುತ್ತಿವೆ. ಭಕ್ತ ಜನರಲ್ಲಿಯೂ ಈ ಭಿನ್ನ ಮಾರ್ಗಗಳು ಗೋಚರಿಸುತ್ತಿವೆ. ಆದರೆ ಹಳೆ ಸಮನ್ವಯವಾದೀ ಧೋರಣೆಯ ಜನರೇ ಹೆಚ್ಚು. ಪ್ರಗತಿಪರ ಮಠಗಳು ಬುದ್ಧಿಜೀವಿಗಳಿಗೆ, ಪ್ರಗತಿಪರ ಮಾಧ್ಯಮಗಳಿಗೆ ಸಮೀಪವಾಗಿವೆ. ಬಸವಾದಿ ಶರಣರ ತತ್ವಗಳು ಪುನರುತ್ಥಾನಕ್ಕೆ ಇಂದು ಪ್ರಯತ್ನಿಸುತ್ತಿವೆ. ಇಡೀ ರಾಷ್ಟ್ರದ ದೃಷ್ಟಿಯಿಂದ ಈ ಎರಡೂ ಪಂಥಗಳ ಹೊಂದಾಣಿಕೆ ಆವಶ್ಯಕವಾಗಿದೆ. ಭಾರತ ದೇಶವು ತನ್ನ ವೈವಿಧ್ಯತೆಗಳ ನಡುವೆಯೂ ತನ್ನದೇ ಆದ ಒಂದು ನಿಲುವನ್ನು ಜಗತ್ತಿನ ನೆಲೆಯಲ್ಲಿ ಸ್ಪಷ್ಟಪಡಿಸಿಕೊಳ್ಳಬೇಕಾದ ಜರೂರು ಇಂದು ತಲೆದೋರಿದೆ.

ಶರಣರ ಕ್ರಾಂತಿಯ ಸಂದರ್ಭದಲ್ಲಿ ಮುಖ್ಯವಾಗಿದ್ದ ಕೆಲವು ಸಮಸ್ಯೆಗಳು ಆಧುನಿಕ ಯುಗದಲ್ಲಿ ಪರಿಹಾರದ ದಾರಿ ಹಿಡಿದಿವೆ. ಜಾತಿಪದ್ಧತಿಯು ಶಿಥಿಲವಾಗುತ್ತಿದೆ. ಯಾವ ಅಂತರ್ಜಾತೀಯ ವಿವಾಹಕ್ಕಾಗಿ ಕಲ್ಯಾಣ ರಕ್ತಕ್ರಾಂತಿಯಾಯಿತೋ ಅಂಥ ವಿವಾಹಗಳು ಇಂದು ನಡೆಯುತ್ತಿವೆ. ಗಾಂಧೀಜಿ, ಅಂಬೇಡ್ಕರ್, ಪೆರಿಯಾರ್ ಮುಂತಾದವರ ಸುಧಾರಣಾಕಾರ್ಯಗಳಿಂದಾಗಿ ಅಸ್ಪೃಶ್ಯರು-ದಲಿತರು ಜಾಗೃತರಾಗಿದ್ದಾರೆ. ಮಹಿಳಾವಾದದ ಅಲೆ ಬೀಸಿ ಅವರಲ್ಲೂ ಜಾಗೃತಿ ಮೂಡುತ್ತಿದೆ. ಕಾಯಕ-ದಾಸೋಹ ಸಿದ್ಧಾಂತಗಳಿಗೆ ಇಂದು ಹೊಸ ಅರ್ಥ-ರೂಪ ಕೊಡುವ ಆವಶ್ಯಕತೆ ಇದೆ. ಅಷ್ಟಾವರಣಗಳ ಆಚರಣೆಗಳಿಗೂ ಆಧುನಿಕಯುಗದ ಆಹ್ವಾನಗಳಿಗೆ ತಕ್ಕಂತೆ ಪುನರ್ಪರಿಶೀಲನೆ ನಡೆಯಬೇಕಾಗಿದೆ. ಸ್ವತಂತ್ರ ಭಾರತದಲ್ಲಿ ಜಾತಿಗಳ ನಡುವಿನ ಗೋಡೆಗಳು ಇನ್ನಷ್ಟು ಗಟ್ಟಿಗೊಳ್ಳುತ್ತಿರುವುದು ಮುಂದುವರಿಯುತ್ತಲೇ ಇದೆ. ಕೆಳವರ್ಗದ ಜನರನ್ನು ಮತಾಂತರಗೊಳಿಸುವ ಕಾರ್ಯ ಸ್ವಾತಂತ್ರ್ಯ ಪೂರ್ವದ ಕಾಲದವರೆಗೆ ಸಾಧ್ಯವಾದಂತೆ ಇಂದು ಸಾಧ್ಯವಿಲ್ಲ. ಅವರಿಗೆ ಸಿಗುವ ಸೌಲಭ್ಯಗಳಿಂದಾಗಿ ತಮ್ಮತಮ್ಮಲ್ಲೇ ಅವರು ಸಂಘಟಿತರಾಗುತ್ತಿದ್ದಾರೆ. ಮೇಲುವರ್ಗದವರೂ ಕೂಡ ತಾವೂ ಸರ್ಕಾರೀ ಸೌಲಭ್ಯಗಳಿಗೆ ಅರ್ಹರಾಗಬೇಕೆಂದು ಪೈಪೋಟಿ ನಡೆಸಿದ್ದಾರೆ.

ಈ ಎಲ್ಲ ಹಿನ್ನೆಲೆಗಳಲ್ಲಿ ಇಂದು ಶರಣಧರ್ಮದ ಸ್ವರೂಪ ಸ್ಪಷ್ಟವಾಗಬೇಕಿದೆ. ಜನಸಾಮಾನ್ಯರ ಸಂಕಷ್ಟಗಳಿಗೆ, ಇಂದಿನ ಎಲ್ಲ ಸಮಸ್ಯೆಗಳಿಗೆ ಪರಿಹಾರ ನೀಡಬಲ್ಲ ಸಮಗ್ರ ಬದಲಾವಣೆಗೆ ಶರಣಮಾರ್ಗವು ಅಣಿಯಾಗಲು ಕಾಲ ಕೂಡಿಬಂದಿದೆ.


**ಡಾ|| ಅರ್ಕಸಾಲಿ ವೃಷಭೇಂದ್ರಾಚಾರ್**
ನಿವೃತ್ತ ಪ್ರಾಂಶುಪಾಲರು, ಹೊಸಹಳ್ಳಿ, ಕೂಡ್ಲಿಗಿ ತಾಲೂಕು, ಬಳ್ಳಾರಿ ಜಿಲ್ಲೆ


## ಸಾದರ ಸ್ವೀಕಾರ

**ಸುವರ್ಣ ಗೀತೆ** (ಗೀತೆಗಳ ಗುಚ್ಛ) — ಸಂ. ಬಸವರಾಜ್ ಶಿ. ಬಾಳೇಶ್ವರಮಠ
ಪುಟ : ೭೫ — ಬೆಲೆ : ರೂ. ೩೦
ರಜತ್ ರೋಜಾ ಪ್ರಕಾಶನ, ಲಕ್ಷ್ಮೇಶ್ವರ - ೫೮೨ ೧೧೬, ಗದಗ ಜಿಲ್ಲೆ.

**ಕನ್ನಡ ಕೈದೀವಿಗೆ** — ರಾ. ನಂ. ಚಂದ್ರಶೇಖರ
ಪುಟ : ೪೦ — ಬೆಲೆ : ರೂ. ೧೦

**ಕನ್ನಡ ಕಷಾಯ** (ಲೇಖನ ಸಂಕಲನ) — ಈಶ್ವರ ದೈತೋಟ
ಪುಟ : ೩೬ — ಬೆಲೆ : ರೂ. ೧೦
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
ಕನ್ನಡ ಗೆಳೆಯರ ಬಳಗ, ನಂ. ೬, 'ರಾಘವೇಂದ್ರ ಕಾಂಪ್ಲೆಕ್ಸ್', ೨ನೇ ತಿರುವು, ಸಿ.ಕೆ.ಸಿ. ಗಾರ್ಡನ್, ಬೆಂಗಳೂರು - ೫೬೦ ೦೨೭

**ನಾನು ಬುದ್ಧನಲ್ಲ** (ಕವನ ಸಂಕಲನ) — ಸಂಗೇನಹಳ್ಳಿ ಅಶೋಕ್ ಕುಮಾರ್
ಪುಟ : ೮೦ — ಬೆಲೆ : ರೂ. ೬೦
ಅಪೂರ್ವ ಪ್ರಕಾಶನ, ೧ನೇ ಮುಖ್ಯರಸ್ತೆ, ಸರಸ್ವತಿಪುರಂ, ಚಿತ್ರದುರ್ಗ-೫೭೭ ೫೦೧

**ಕರ್ನಾಟಕ ಜ್ಯೋಚನ** (ಶತಮಾನೋತ್ಸವ ವಿಶೇಷಾಂಕ) — ವಿವಿಧ ಲೇಖಕರು
ಪುಟ : ೧೪೨
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ೩ನೇ ಮುಖ್ಯರಸ್ತೆ, ಎನ್.ಆರ್. ಕಾಲೋನಿ, ಬೆಂಗಳೂರು - ೫೬೦ ೦೧೯

**ಶಾಲ್ಮಲಿ** (ಕಾದಂಬರಿ) — ನಾಸಿರಾ ಶರ್ಮಾ, ಅನು : ಡಾ|| ವಿಜಯಾ ಸುಬ್ಬರಾಜ್
ಪುಟ : ೧೭೨ — ಬೆಲೆ : ರೂ. ೧೪೦
ಬ್ಯಾಲದ ಕೆರೆ ಪ್ರಕಾಶನ, ಬ್ಯಾಲದ ಕೆರೆ, ಬೆಳ್ಳೂರು ಹೋಬಳಿ, ಜಿ. ನಾಗತಿಹಳ್ಳಿ ಅಂಚೆ, ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆ

**ಸೂಕ್ತಿ ಸಾಗರ – ಟಿ. ವಿ. ವೆಂಕಟರಮಣಯ್ಯ** — ವಿದ್ಯಾವಾಚಸ್ಪತಿ ಕವಿತಾ ಕೃಷ್ಣ
ಪುಟ : ೧೩೦ — ಬೆಲೆ : ರೂ. ೬೦
ಕವಿತಾ ಪ್ರಕಾಶನ, ಕ್ಯಾತಸಂದ್ರ, ತುಮಕೂರು - ೫೭೨ ೧೦೪

**ಮಂಜು ಕವಿದ ಸಂಜೆ ಹಾಗೂ ಇತರ ಕಥೆಗಳು** — ಪಿ. ಲಂಕೇಶ್
ಪುಟ : ೮೮ — ಬೆಲೆ : ರೂ. ೮೫
'ಪತ್ರಿಕೆ' ಪ್ರಕಾಶನ, ನಂ. ೯, ಪೂರ್ವ ಆಂಜನೇಯ ಗುಡಿ ರಸ್ತೆ, ಬಸವನಗುಡಿ, ಬೆಂಗಳೂರು - ೫೬೦ ೦೦೪

**ಮಾನಧನ : ಎಂ.ಎಚ್. ನಾಯಕ** (ಜೀವನ ಚರಿತ್ರೆ) — ಶಾಂತಾರಾಮ ನಾಯಕ, ಹಿಚಕಡ
ಪುಟ : ೯೪ — ಬೆಲೆ : ರೂ. ೪೦
ಜಿನದೇವ ಪ್ರಕಾಶನ, ಹಿಚಕಡ, ಅಂಕೋಲ, ಉತ್ತರ ಕನ್ನಡ

# ಐಕ್ಯ ಕೇರಳ ಚಳವಳಿ ಮತ್ತು ಎಡಪಂಥೀಯರು

**ಕೇರಳದಲ್ಲಿ ಎಡಪಂಥೀಯರು ಸ್ವಾತಂತ್ರ್ಯಹೋರಾಟ ಹಾಗೂ ಏಕೀಕರಣ ಚಳವಳಿ ಇವುಗಳೆರಡರಲ್ಲೂ ನಿರ್ಣಾಯಕ ಪಾತ್ರ ವಹಿಸಿದರು. ಮಲಯಾಳಂ ಭಾಷೆ ಮಾತನಾಡುವ ಪ್ರದೇಶಗಳನ್ನು ಒಂದುಗೂಡಿಸುವ ಕೆಲಸ ಮಾಡಿದವರಲ್ಲಿ ಕಮ್ಯುನಿಸ್ಟರು ಪ್ರಮುಖರು ಎನ್ನುವುದು ಎಡವಾದಿ ಚಳವಳಿಗಾರರ ಸ್ಪಷ್ಟ ನಿಲುವು. ಅವರು ಬ್ರಿಟಿಷರನ್ನು ಹಾಗೂ ದೇಶೀಯ ಸಂಸ್ಥಾನಿಕರನ್ನು ಒಂದೇ ರೀತಿ ವಿರೋಧಿಸಿದರು. ಕಾಂಗ್ರೆಸ್ಸಿಗರಂತೆ ಇವರು ದ್ವಂದ್ವ ನಿಲುವನ್ನು ಹೊಂದಿರಲಿಲ್ಲ. ಅದೇರೀತಿ ಕೇರಳದ ಏಕೀಕರಣಕ್ಕೆ ವೈಭವದ ಚರಿತ್ರೆಯನ್ನಾಗಲಿ, ಪ್ರಭುತ್ವದ ಸಂಕೇತಗಳನ್ನಾಗಲಿ ಬಳಸಿಕೊಳ್ಳಲಿಲ್ಲ. ಆರಂಭದಲ್ಲಿ ಕಾಂಗ್ರೆಸ್ ಜೊತೆಗೇ ಸಮಾಜವಾದಿಗಳೆಂದು ಗುರುತಿಸಿಕೊಂಡಿದ್ದ ಎಡವಾದಿಗಳು ೧೯೩೯ರಲ್ಲಿ ಕಮ್ಯುನಿಸ್ಟ್ ಪಕ್ಷವನ್ನು ಹುಟ್ಟುಹಾಕಿದರು. ತಿರುವಾಂಕೂರು ಮತ್ತು ಕೊಚ್ಚಿನ್ ರಾಜ್ಯಗಳ ವಿರುದ್ಧ ಕಮ್ಯುನಿಸ್ಟರು ಹೋರಾಟ ಮಾಡಿದರು.**

ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಭಾರತ ಎದುರಿಸಿದ ಸಮಸ್ಯೆಗಳಲ್ಲಿ ಭಾಷಾವಾರು ಪ್ರಾಂತ್ಯಗಳ ರಚನೆ ಬಹುಮುಖ್ಯವಾದದ್ದು. ದಕ್ಷಿಣ ಭಾರತದ ನಾಲ್ಕು ರಾಜ್ಯಗಳಾದ ಆಂಧ್ರಪ್ರದೇಶ, ತಮಿಳುನಾಡು, ಕರ್ನಾಟಕ ಮತ್ತು ಕೇರಳ ಭಾಷೆಯ ಆಧಾರದ ಮೇಲೆ ನಿರ್ಮಾಣಗೊಂಡಂಥವು. ಆದರೆ ಭಾಷೆಯ ಜೊತೆಗೆ ಜಾತಿ, ವರ್ಗ ಮತ್ತು ಭೌಗೋಳಿಕ ಹಿತಾಸಕ್ತಿಗಳೂ ಸೇರಿಕೊಂಡಿದ್ದವು ಎನ್ನುವುದು ಸೂಕ್ಷ್ಮ ಅಧ್ಯಯನದಿಂದ ತಿಳಿದುಬರುವ ವಾಸ್ತವ. ಈ ಎಲ್ಲ ರಾಜ್ಯಗಳು ತಮ್ಮ ಏಕೀಕರಣಕ್ಕಾಗಿ ಬಳಸಿದ ಹಾದಿ ಬೇರೆ ಬೇರೆಯದ್ದು. ಕೇರಳದಲ್ಲಿ ಈ ಸಂಬಂಧದಲ್ಲಿ ನಡೆದ ಹೋರಾಟ ಇತರ ರಾಜ್ಯಗಳ ಹೋರಾಟಗಳಿಗಿಂತ ಭಿನ್ನವಾದದ್ದು. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ರಾಜಕೀಯ ವಿಚಾರವನ್ನು ಮುಂದಿಟ್ಟುಕೊಂಡು ಕೇರಳವನ್ನು ಒಂದುಗೂಡಿಸುವ ಪ್ರಯತ್ನ ಮಾಡಿದರೆ, ಕೇರಳದ ಎಡಪಂಥೀಯರು ಸಾಮಾಜಿಕ ನ್ಯಾಯದ ಹಿನ್ನೆಲೆಯಲ್ಲಿ ಹಾಗೂ ಸುಭದ್ರ ಆರ್ಥಿಕ ತಳಹದಿಯ ಮೇಲೆ ಕೇರಳವನ್ನು ಒಂದುಗೂಡಿಸುವ ಪ್ರಯತ್ನ ಮಾಡಿದರು. ಕಾಂಗ್ರೆಸ್ ಭಾಷಾವಾರು ಪ್ರಾಂತ್ಯಗಳ ರಚನೆಯ ಕುರಿತು ದ್ವಂದ್ವ ನಿಲುವನ್ನು ಹೊಂದಿತ್ತು. ಆದರೆ ಎಡಪಂಥೀಯರು ಈ ಸಂಬಂಧವಾಗಿ ಸ್ಪಷ್ಟ ನಿಲುವನ್ನು ಹೊಂದಿದ್ದರು. ಈ ವಿಚಾರಗಳನ್ನು ಪ್ರಸ್ತುತ ಲೇಖನದಲ್ಲಿ ಚರ್ಚಿಸುವ ಪ್ರಯತ್ನವನ್ನು ಮಾಡಲಾಗಿದೆ.

ಕೇರಳದಲ್ಲಿ ಏಕೀಕರಣಕ್ಕಾಗಿ ನಡೆದ ಚಳವಳಿಯನ್ನು 'ಐಕ್ಯ ಕೇರಳ ಚಳವಳಿ' ಎಂಬುದಾಗಿ ಕರೆಯಲಾಗಿದೆ. ಮಲಯಾಳಂ ಭಾಷೆ ಮಾತನಾಡುವ ಪ್ರದೇಶಗಳನ್ನು ಒಂದುಗೂಡಿಸುವ ಪ್ರಯತ್ನಗಳು ಇಪ್ಪತ್ತನೆಯ ಶತಮಾನದ ಆರಂಭದಿಂದಲೇ ನಡೆದಿರುವುದನ್ನು ಕಾಣಬಹುದಾಗಿದೆ. ಪ್ರತ್ಯೇಕ ಕೇರಳ ರಾಜ್ಯ ನಿರ್ಮಾಣ ಸಂದರ್ಭದಲ್ಲಿ ತಿರುವಾಂಕೂರು-ಕೊಚ್ಚಿನ್ ಮತ್ತು ಮಲಬಾರ್ ಪ್ರದೇಶಗಳ ಸಮಸ್ಯೆಗಳೇ ಪ್ರಮುಖವಾಗಿದ್ದವು. ಇವೆಲ್ಲವನ್ನು ಒಟ್ಟು ಸೇರಿಸಿ ಪ್ರತ್ಯೇಕ ಕೇರಳ ರಾಜ್ಯ ನಿರ್ಮಾಣ ಮಾಡುವ ಐಕ್ಯ ಕೇರಳವಾದಿಗಳ ಹೋರಾಟ ದಕ್ಷಿಣ ಭಾರತದ ಇತರ ರಾಜ್ಯಗಳ ಏಕೀಕರಣ ಹೋರಾಟದಂತೆ ಅತ್ಯಂತ ಕುತೂಹಲಕರವಾದದ್ದಾಗಿದ್ದು, ಹಲವಾರು ತಿರುವುಗಳನ್ನು ಪಡೆದುಕೊಂಡಿರುವಂಥದ್ದು. ಭಾಷಾವಾರು ಪ್ರಾಂತ್ಯಗಳ ರಚನೆಯ ಕುರಿತು ಚರ್ಚೆಗಳು ಕಾಣಿಸಿಕೊಂಡ ಆರಂಭದಲ್ಲೇ ಮಲಯಾಳಿಗಳು ಎಚ್ಚೆತ್ತುಕೊಂಡಿದ್ದರು. ಬೃಹತ್ ಭಾರತದಲ್ಲಿ ನಾವೆಲ್ಲಿ ನಿರ್ಲಕ್ಷ್ಯಕ್ಕೆ ಒಳಗಾಗುತ್ತೇವೆಯೋ ಎನ್ನುವ ಆತಂಕ ಸ್ವಾತಂತ್ರ್ಯ ಬಂದ ಆರಂಭದಲ್ಲಿ ಮಲಯಾಳಿಗಳಿಗಿತ್ತು. ಹಾಗಾಗಿ ಪ್ರತ್ಯೇಕ ಕೇರಳ ರಾಜ್ಯದ ನಿರ್ಮಾಣ ಆದಷ್ಟು ಬೇಗ ಆಗಬೇಕೆನ್ನುವ ತವಕ, ಮಲಯಾಳಂ ಭಾಷೆಗೆ ಎಲ್ಲ ರೀತಿಯ ಸಾಮರ್ಥ್ಯವನ್ನು ತುಂಬುವ ಪ್ರಯತ್ನ ಹಾಗೂ ಕೇರಳವನ್ನು ಭಾರತದ ಇತರ ರಾಜ್ಯಗಳಂತೆ ಅಭಿವೃದ್ಧಿಯತ್ತ ಕೊಂಡೊಯ್ಯುವುದು, ಎಲ್ಲವೂ ಮಲಯಾಳಿ ಜನತೆಯ ಪ್ರಮುಖ ವಿಚಾರವಾಗಿತ್ತು.

ಡಾ॥ ಕೆ. ಮೋಹನ್‌ಕೃಷ್ಣ ರೈ



ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ೧೮೮೫ರಲ್ಲಿ ಹುಟ್ಟಿಕೊಂಡ ಬಳಿಕ, ಅದು ಭಾರತದ ಪ್ರತಿಯೊಂದು ಪ್ರಾಂತ್ಯದಲ್ಲೂ ಅತ್ಯಂತ ಪ್ರಭಾವಶಾಲಿಯಾಗಿ ಬೆಳೆಯುವ ಹಾಗೂ ಆ ಮೂಲಕ ರಾಷ್ಟ್ರೀಯತೆಯನ್ನು ಪ್ರಚಾರ ಮಾಡುವ ಪ್ರಯತ್ನವನ್ನು ಮಾಡಿತು. ೧೯೦೪ರಲ್ಲಿ ಕೇರಳದ ಕೋಜ್ಹಿಕೋಡ್‌ನಲ್ಲಿ ಕಾಂಗ್ರೆಸ್‌ನ ಅಧಿವೇಶನವೊಂದು ನಡೆಯಿತು. ೧೯೦೮ರಲ್ಲಿ ಮಲಬಾರ್‌ನಲ್ಲಿ ಜಿಲ್ಲಾ ಕಾಂಗ್ರೆಸ್ ಸಮಿತಿ ಅಸ್ತಿತ್ವಕ್ಕೆ ಬಂದಿತು. ಅಲ್ಲಿಂದ ಕೇರಳದ ನಾನಾ ಪ್ರದೇಶಗಳಲ್ಲಿ ರಾಜಕೀಯ ಚಟುವಟಿಕೆಗಳು ಕಾಣಿಸಿಕೊಳ್ಳಲಾರಂಭಿಸಿದವು. ೧೯೧೬ ಮತ್ತು ೧೯೧೭ರಲ್ಲಿ ಮಲಬಾರ್ ಜಿಲ್ಲಾ ಕಾಂಗ್ರೆಸ್ ಸಮಿತಿ ಸಭೆಗಳು ನಡೆದವು. ತಿರುವಾಂಕೂರು ಮತ್ತು ಕೊಚ್ಚಿನ್‌ಗಳಲ್ಲೂ ರಾಜಕೀಯ ಚಟುವಟಿಕೆಗಳು ಕಾಣಿಸಿಕೊಳ್ಳಲಾರಂಭಿಸಿದವು. ತಿರುವನಂತಪುರ ಮತ್ತು ಎರ್ನಾಕುಳಂಗಳಲ್ಲೂ ಕಾಂಗ್ರೆಸ್ ಸಮಿತಿಗಳು ಅಸ್ತಿತ್ವಕ್ಕೆ ಬಂದವು. ಬ್ರಿಟಿಷ್ ಆಳ್ವಿಕೆಯನ್ನು ಕೊನೆಗೊಳಿಸುವುದು ಹಾಗೂ ರಾಜಕೀಯ ಕೈದಿಗಳನ್ನು ಬಿಡುಗಡೆಗೊಳಿಸುವುದು ಈ ರಾಜಕೀಯ ಚಟುವಟಿಕೆಗಳ ಮೂಲ ಉದ್ದೇಶವಾಗಿತ್ತು. ಅದೇ ಸಂದರ್ಭದಲ್ಲಿ ಮಲಯಾಳಂ ಭಾಷೆಯ ಆಧಾರದ ಮೇಲೆ ಕೇರಳ ಪ್ರಾಂತ್ಯ ರಚನೆಯ ಕುರಿತಾದ ಅಭಿಪ್ರಾಯಗಳೂ ಬರತೊಡಗಿದವು.

ನಾಗಪುರದಲ್ಲಿ ೧೯೨೦ರಲ್ಲಿ ನಡೆದ ಕಾಂಗ್ರೆಸ್ ಅಧಿವೇಶನ ಭಾಷಾವಾರು ಪ್ರಾಂತ ರಚನೆಗೆ ಒಪ್ಪಿತು. ಕಾಂಗ್ರೆಸ್ ಸಂಸ್ಥೆಯು ತನ್ನ ಕಾರ್ಯನಿರ್ವಹಣೆಗಾಗಿ ಭಾರತವನ್ನು ಭಾಷಾವಾರು ಆಧಾರದ ಮೇಲೆ ೨೧ ಭಾಗಗಳನ್ನಾಗಿ ವಿಂಗಡಿಸಿತು. ಅದರಲ್ಲಿ ಕೇರಳ ಪ್ರಾಂತ್ಯ ಕಾಂಗ್ರೆಸ್ ಸಮಿತಿಯೂ ಒಂದು. ಮಲಯಾಳಂ ಭಾಷೆಯನ್ನಾಡುವ ಪ್ರದೇಶಗಳನ್ನು ಕೇರಳ ಎನ್ನುವ ಒಂದು ಘಟಕದಡಿಯಲ್ಲಿ ತಂದು ಪ್ರಾಂತ್ಯವನ್ನು ರಚಿಸಲಾಯಿತು. ಸೈಮನ್ ಕಮಿಷನ್ ಭಾರತಕ್ಕೆ ಬಂದಾಗ 'ಪ್ರಾಂತ್ಯಗಳನ್ನು ಭಾಷೆಗಳ ಆಧಾರದಲ್ಲಿ ವಿಂಗಡಣೆ ಮಾಡಬೇಕಾದ ಸಮಯ ಬಂದಿದೆ' ಎಂಬುದಾಗಿ ಕಾಂಗ್ರೆಸ್ ಘೋಷಿಸಿತು. ಇವೆಲ್ಲವೂ ಐಕ್ಯ ಕೇರಳ ಚಳವಳಿಗಳಿಗೆ ಸ್ಫೂರ್ತಿ ನೀಡಿದವು. ಕೇರಳದಲ್ಲಿ ಅಸ್ತಿತ್ವಕ್ಕೆ ಬಂದ ಕೇರಳ ಪ್ರಾಂತ್ಯ ಕಾಂಗ್ರೆಸ್ ಸಮಿತಿಯು ಬಲವಾದ ಒಂದು ಉದ್ದೇಶವನ್ನು ಹೊಂದಿತ್ತು. ಅದೇನೆಂದರೆ ಕೇರಳದ ಮೂರು ಪ್ರದೇಶಗಳಲ್ಲಿನ ರಾಜಕೀಯ ಚಟುವಟಿಕೆಗಳನ್ನು ಒಂದೆಡೆಗೆ ತರುವ ಪ್ರಯತ್ನ. ಆ ಮೂರು ಪ್ರದೇಶಗಳೆಂದರೆ ಮಲಬಾರ್, ಕೊಚ್ಚಿನ್ ಮತ್ತು ತಿರುವಾಂಕೂರು. ಈ ಮೂರೂ ಪ್ರದೇಶಗಳ ಕಾಂಗ್ರೆಸ್ ಪ್ರತಿನಿಧಿಗಳು ೧೯೨೧ರ ಏಪ್ರಿಲ್‌ನಲ್ಲಿ ಒಟ್ಟಾಪ್ಪಾಲಂನಲ್ಲಿ ನಡೆದ ಅಖಿಲ ಕೇರಳ ರಾಜಕೀಯ ಸಮ್ಮೇಳನದಲ್ಲಿ ಭಾಗವಹಿಸಿದರು. ಇದು ಐಕ್ಯ ಕೇರಳ ಚಳವಳಿಯ ಆರಂಭಿಕ ಹೆಜ್ಜೆ. ಅದು ನನಸಾಗಿದ್ದು ೩೫ ವರ್ಷಗಳ ಬಳಿಕ.

ರಾಜಕೀಯವಾಗಿ ಕೇರಳದ ವಿವಿಧ ಪ್ರದೇಶಗಳನ್ನು ಒಂದುಗೂಡಿಸುವ ಪ್ರಯತ್ನಗಳು ನಡೆಯುತ್ತಿದ್ದ ಸಂದರ್ಭದಲ್ಲಿಯೇ, ಸಾಮಾಜಿಕವಾಗಿ ಕೇರಳವು ಹಲವಾರು ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿತ್ತು. ಅದು ಜಾತಿ, ಧರ್ಮ ಮತ್ತು ಸಮುದಾಯ ಕೇಂದ್ರಿತ ಸಮಸ್ಯೆಗಳಾಗಿದ್ದವು. ಬ್ರಿಟಿಷರ ವಿಭಜಿಸಿ ಆಳುವ ನೀತಿಗೆ ಕೇರಳವು ಒಂದು



ಪ್ರಮುಖ ವೇದಿಕೆಯಾಯಿತು. ಯಾವುದೇ ಸಣ್ಣಪುಟ್ಟ ಘಟನೆಗಳೂ ಮತೀಯ ರೂಪವನ್ನು ಪಡೆದುಕೊಳ್ಳಲು ಆರಂಭಿಸಿದವು. ಹಿಂದೂ-ಮುಸ್ಲಿಂ ಎನ್ನುವ ಕಂದರ ವನ್ನು ಬ್ರಿಟಿಷ್ ಸರಕಾರ ನಿರ್ಮಿಸಿತು. ಇದಕ್ಕೆ ೧೯೨೧ರ ಮಾಪಿಳ್ಳೆ ಹೋರಾಟ ಉತ್ತಮ ಉದಾಹರಣೆಯಾಗಿದೆ. ಇದು ಮಲಬಾರ್ ಜಿಲ್ಲೆಯಲ್ಲಿ ಮಾಪಿಳ್ಳೆ ಗೇಣಿದಾರರು (ಮುಸ್ಲಿಮರು) ಜಮೀನ್ದಾರರ ವಿರುದ್ಧ ನಡೆಸಿದ ಹೋರಾಟ. ಗೇಣಿಯ ವಿಚಾರವೇ ಮುಖ್ಯವಾಗಿದ್ದ ಈ ಹೋರಾಟ, ತನ್ನದಲ್ಲದ ವಿಚಾರದಲ್ಲಿ ಹಿಂಸಾತ್ಮಕ ರೂಪ ಪಡೆದು ಮತೀಯ ಹೋರಾಟವಾಗಿ ಪರಿವರ್ತನೆಗೊಂಡಿತು.

ಕೇರಳದ ಜನತೆಯನ್ನು ಒಂದುಗೂಡಿಸುವುದು ಅಲ್ಲಿನ ನಾಯಕರುಗಳಿಗೆ ಸವಾಲಿನ ಕೆಲಸವಾಗಿತ್ತು. ಕೇರಳದಲ್ಲಿ ವರ್ಣಾಧಾರಿತ ಸಮಾಜದ ಕಟ್ಟುಪಾಡುಗಳು ಕಟ್ಟುನಿಟ್ಟಾಗಿ ಪಾಲನೆಯಾಗುತ್ತಿದ್ದವು. ಸಾಮಾಜಿಕ ಶ್ರೇಣಿಯಲ್ಲಿ ನಂಬೂದಿರಿ ಬ್ರಾಹ್ಮಣರು ಅತಿ ಶ್ರೇಷ್ಠ ರೆನಿಸಿಕೊಂಡಿದ್ದರು. ಈಳವರು, ಪುಲಯ, ಪರಯ, ಕುರವ ಮುಂತಾದವರು ಸಮಾಜದ ಕೆಳಸ್ತರದವರಾಗಿದ್ದು, ಇವರಿಗೆ ದೇವಾಲಯ ಪ್ರವೇಶ ನಿಷಿದ್ಧವಾಗಿತ್ತು. ಇದು ಕಾಂಗ್ರೆಸ್‌ನ ಚಟುವಟಿಕೆಗಳಿಗೆ ದೊಡ್ಡ ತಡೆಯಾಗಿತ್ತು. ಈ ಜಾತಿ ಅಸಮಾನತೆಯನ್ನು ಹೋಗಲಾಡಿಸಲು ಅದು ವೈಕಂ ಮತ್ತು ಗುರುವಾಯೂರುಗಳಲ್ಲಿ ಸತ್ಯಾಗ್ರಹ ನಡೆಸಿತು. ಈ ಎರಡು ಸ್ಥಳಗಳಲ್ಲಿದ್ದ ದೇವಾಲಯಗಳಿಗೆ ಕ್ರಮವಾಗಿ ೧೯೨೪ ಹಾಗೂ ೧೯೩೧ರಲ್ಲಿ ಅಸ್ಪೃಶ್ಯರಿಗೆ ದೇವಾಲಯ ಪ್ರವೇಶ ಕಲ್ಪಿಸಲಾಯಿತು. ಗಾಂಧೀಜಿಯವರ ಹರಿಜನೋದ್ಧಾರ ಕಾರ್ಯಕ್ರಮಗಳು ಕೇರಳ ದಲ್ಲಿ ಹೆಚ್ಚು ಪ್ರಚಾರಕ್ಕೆ ಬಂದವು. ಸಮಾಜದ ಕೆಳಸ್ತರದ ಜನರ ದೇವಾಲಯ ಪ್ರವೇಶ ಕಾರ್ಯಕ್ರಮದ ನೇತೃತ್ವವನ್ನು ಅಂದು ಕಾಂಗ್ರೆಸ್ಸಿಗರಾಗಿದ್ದ ಮತ್ತು ಮುಂದೆ ಕಮ್ಯುನಿಸ್ಟರಾದ ಪಿ. ಕೃಷ್ಣ ಪಿಳ್ಳೆ, ಯು. ಗೋಪಾಲ ಮೆನನ್, ಎ. ಕೆ. ಗೋಪಾಲನ್ ಮುಂತಾದವರು ವಹಿಸಿದರು. ಒಡೆದುಹೋದ ಮನಸ್ಸುಗಳನ್ನು ಒಂದುಗೂಡಿಸುವುದು ಅಂದಿನ ತುರ್ತಾಗಿತ್ತು. ನಾರಾಯಣ ಗುರುಗಳ ಪ್ರಯತ್ನ ಈ ನಿಟ್ಟಿನಲ್ಲಿ ಪ್ರಮುಖವಾದದ್ದು. ಅವರು ಜಾತಿ ವ್ಯವಸ್ಥೆಯ ವಿರುದ್ಧ ಹೋರಾಡಿ, ಈ ಭೂಮಿ ಎಲ್ಲರಿಗೂ ಸಂಬಂಧಿಸಿದ್ದು, ಎಲ್ಲರಿಗೂ ಸಮಾನ ಹಕ್ಕಿದೆ ಎನ್ನುವ ಸಿದ್ಧಾಂತವನ್ನು ಪ್ರತಿಪಾದಿಸಿದರು.

ಈಳವರು, ಕ್ರಿಶ್ಚಿಯನ್ನರು ಮತ್ತು ಮುಸ್ಲಿಮರು ಶಾಸಕಾಂಗ ಸಭೆಯಲ್ಲಿ ತಮಗೆ ನಾಯರ್ ಗಳಿಗಿಂತ ಹೆಚ್ಚಿನ ಸ್ಥಾನವನ್ನು ನೀಡಬೇಕೆಂಬ ಬೇಡಿಕೆಯನ್ನು ಸರಕಾರಕ್ಕೆ ಸಲ್ಲಿಸಿದರು. ಆದರೆ ಈ ಬೇಡಿಕೆ ಈಡೇರಲಿಲ್ಲ. ರಾಜಕೀಯ ಪಕ್ಷಗಳು ಈ ಬೇಡಿಕೆಯನ್ನು ಮುಂದಿಟ್ಟುಕೊಂಡು ಹೋರಾಟ ಮಾಡಿದವು. ಕಾಂಗ್ರೆಸ್‌ನೊಳಗಿನ ಸಮಾಜವಾದಿಗಳು (ಮುಂದೆ ಇವರೇ ಕೇರಳದ ಕಮ್ಯುನಿಸ್ಟ್ ಪಕ್ಷದ ಮುಖಂಡರಾದರು) ಸ್ಥಳೀಯ ಸಮಸ್ಯೆಗಳನ್ನು ಮುಂದಿಟ್ಟು ಕೊಂಡು ರಾಷ್ಟ್ರೀಯ ಹೋರಾಟ ನಡೆಸಿದರು. ಇದು ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ತಿರುವಾಂಕೂರು ಮತ್ತು ಕೊಚ್ಚಿನ್‌ಗಳಲ್ಲಿ ತನ್ನ ಪ್ರಭಾವವನ್ನು ಸ್ವಲ್ಪಮಟ್ಟಿಗೆ ಕಳೆದುಕೊಳ್ಳುವುದಕ್ಕೆ ಕಾರಣವಾಯಿತು. ೧೯೩೮ರ ಹರಿಪುರ ಅಧಿವೇಶನದ ಬಳಿಕ ಕಾಂಗ್ರೆಸ್ ದೇಶೀಯ ಸಂಸ್ಥಾನಗಳ ವ್ಯವಹಾರದಲ್ಲಿ ಮಧ್ಯಪ್ರವೇಶ ಮಾಡುವುದರಿಂದ ದೂರ ಉಳಿಯುವ ನಿರ್ಧಾರ ತೆಗೆದುಕೊಂಡಿತು. ಜವಾಬ್ದಾರಿ ಸರಕಾರವನ್ನು ಅಸ್ತಿತ್ವಕ್ಕೆ ತರುವ ಕೆಲಸ ಆಯಾ ಸಂಸ್ಥಾನದ ಜನರದ್ದು ಎನ್ನುವ ನಿಲುವಿಗೆ ಕಾಂಗ್ರೆಸ್ ಬಂತು. ಇದರಿಂದಾಗಿ ೧೯೩೮ ರಲ್ಲಿ ತಿರುವಾಂಕೂರು ರಾಜ್ಯ ಕಾಂಗ್ರೆಸ್ ಹಾಗೂ ಕೊಚ್ಚಿನ್ ರಾಜ್ಯ ಕಾಂಗ್ರೆಸ್ ಅಸ್ತಿತ್ವಕ್ಕೆ ಬಂದವು.

ಕೇರಳದಲ್ಲಿ ಎಡಪಂಥೀಯರು ಸ್ವಾತಂತ್ರ್ಯಹೋರಾಟ ಹಾಗೂ ಏಕೀಕರಣ ಚಳವಳಿ ಇವುಗಳೆರಡರಲ್ಲೂ ನಿರ್ಣಾಯಕ ಪಾತ್ರ ವಹಿಸಿದರು. ಮಲಯಾಳಂ ಭಾಷೆ ಮಾತನಾಡುವ ಪ್ರದೇಶಗಳನ್ನು ಒಂದುಗೂಡಿಸುವ ಕೆಲಸ ಮಾಡಿದವರಲ್ಲಿ ಕಮ್ಯುನಿಸ್ಟರು ಪ್ರಮುಖರು ಎನ್ನುವುದು ಎಡವಾದಿ ಚಳವಳಿಗಾರರ ಸ್ಪಷ್ಟ ನಿಲುವು. ಅವರು ಬ್ರಿಟಿಷರನ್ನು ಹಾಗೂ ದೇಶೀಯ ಸಂಸ್ಥಾನಿಕರನ್ನು ಒಂದೇ ರೀತಿ ವಿರೋಧಿಸಿದರು. ಕಾಂಗ್ರೆಸ್ಸಿಗರಂತೆ ಇವರು ದ್ವಂದ್ವ ನಿಲುವನ್ನು ಹೊಂದಿರಲಿಲ್ಲ. ಅದೇರೀತಿ ಕೇರಳದ ಏಕೀಕರಣಕ್ಕೆ ವೈಭವದ ಚರಿತ್ರೆ ಯನ್ನಾಗಲಿ, ಪ್ರಭುತ್ವದ ಸಂಕೇತಗಳನ್ನಾಗಲಿ ಬಳಸಿಕೊಳ್ಳಲಿಲ್ಲ. ಆರಂಭದಲ್ಲಿ ಕಾಂಗ್ರೆಸ್ ಜೊತೆಗೇ ಸಮಾಜವಾದಿಗಳೆಂದು ಗುರುತಿಸಿಕೊಂಡಿದ್ದ ಎಡವಾದಿಗಳು ೧೯೩೯ರಲ್ಲಿ ಕಮ್ಯುನಿಸ್ಟ್ ಪಕ್ಷವನ್ನು ಹುಟ್ಟುಹಾಕಿದರು. ತಿರುವಾಂಕೂರು ಮತ್ತು ಕೊಚ್ಚಿನ್ ರಾಜ್ಯಗಳ ವಿರುದ್ಧ ಕಮ್ಯುನಿಸ್ಟರು ಹೋರಾಟ ಮಾಡಿದರು. ರೈತರು ಮತ್ತು ಕಾರ್ಮಿಕರನ್ನು ಎಡಪಂಥೀಯರು ಸಂಘಟಿಸುವ ಕ್ರಮವನ್ನು ಕಾಂಗ್ರೆಸ್‌ನವರು ಪ್ರಬಲವಾಗಿ ವಿರೋಧಿಸಿದರು. ಕೇರಳವನ್ನು ಶ್ರಮಿಕವರ್ಗದ ಮೂಲಕ ಕಾಣುವ ಹಾಗೂ ಆ ವರ್ಗದ ಹಿತಾಸಕ್ತಿಯನ್ನು ಕಾಪಾಡುವಂಥ ನೂತನ ಕೇರಳ ರಾಜ್ಯ ನಿರ್ಮಾಣ ಮಾಡುವ ಕನಸನ್ನು ಎಡಪಂಥೀಯರು ಹೊಂದಿದ್ದರು. ಇದಕ್ಕೆ ಉತ್ತಮ ಉದಾಹರಣೆಯೆಂದರೆ, ಅಂದಿನ ತಿರುವಾಂಕೂರು ಸಂಸ್ಥಾನದಲ್ಲಿ ಸ್ವಾತಂತ್ರ್ಯಪೂರ್ವ ೧೯೪೬ರಲ್ಲಿ ನಡೆದ ಪುನ್ನಪ್ರ-ವಯಲಾರ್ ಹೋರಾಟ. ಈ ಹೋರಾಟ ಕಾರ್ಮಿಕರ ಶೋಷಣೆಯ ವಿರುದ್ಧ, ಅಸ್ಪೃಶ್ಯತೆಯ ವಿರುದ್ಧ ಹಾಗೂ ಸಾಮಾಜಿಕ ನ್ಯಾಯದ ಪರವಾಗಿತ್ತು. ತಿರುವಾಂಕೂರು ಸಂಸ್ಥಾನದ ದಿವಾನ ಸಿ. ಪಿ. ರಾಮಸ್ವಾಮಿ ಅಯ್ಯರ್ ಅವರು ಎಡಪಂಥೀಯರಾದ ಕೃಷ್ಣ ಪಿಳ್ಳೆ, ಕೆ. ಸಿ. ಜಾರ್ಜ್, ಸುಗತನ್ ಮುಂತಾದವರ ಸಾಮಾಜಿಕ ನ್ಯಾಯದ ಹೋರಾಟಗಳನ್ನು ವಿರೋಧಿಸುತ್ತಿದ್ದರು. ಅವರು ೧೯೪೬ರಲ್ಲಿ ತಿರುವಾಂಕೂರನ್ನು ಭಾರತದಿಂದ ಪ್ರತ್ಯೇಕಿಸಿ, ಸ್ವತಂತ್ರ ದೇಶವನ್ನಾಗಿ ಮಾಡಿ ಅಮೆರಿಕಾ ಮಾದರಿಯ ಆಡಳಿತ ಜಾರಿಗೊಳಿಸುವ ನಿರ್ಧಾರ ಪ್ರಕಟಿಸಿದರು. ಆ ಸಂದರ್ಭದಲ್ಲಿ ಎಲ್ಲರ ಸಹಾಯದೊಂದಿಗೆ ಪುನ್ನಪ್ರ ಮತ್ತು ವಯಲಾರ್ ಪ್ರದೇಶದ ಕಾರ್ಮಿಕರು ದಿವಾನ ರಾಮಸ್ವಾಮಿ ಅಯ್ಯರ್ ವಿರುದ್ಧ ಉಗ್ರ ಪ್ರತಿಭಟನೆ ನಡೆಸಿದರು. ಹೋರಾಟ ಹಿಂಸಾತ್ಮಕ ರೂಪ ಪಡೆಯಿತು. ಕೊನೆಗೂ ದಿವಾನ ರಾಮಸ್ವಾಮಿ ಅಯ್ಯರ್ ರಾಜ್ಯ ಬಿಟ್ಟು ಪಲಾಯನ ಮಾಡಬೇಕಾಯಿತು. ೧೯೪೭ ಆಗಸ್ಟ್ ೧೫ರ ಮುನ್ನವೆ ತಿರುವಾಂಕೂರ್ ಭಾರತದಲ್ಲಿ ವಿಲೀನಗೊಂಡಿತು. ೧೯೪೮ರ ಅಕ್ಟೋಬರ್‌ನಲ್ಲಿ ಅಲ್ಲಿ ಜವಾಬ್ದಾರಿ ಸರಕಾರ ಸ್ಥಾಪನೆಗೊಂಡಿತು. ಎಡಪಂಥೀಯರ ನೆರವಿನಿಂದ ಕಾರ್ಮಿಕರು ನಡೆಸಿದ ಈ ಹೋರಾಟ ಮುಂದೆ ಏಕೀಕೃತ ಕೇರಳದ ನಿರ್ಮಾಣಕ್ಕೆ ದಾರಿಯನ್ನು ಸುಗಮ ಗೊಳಿಸಿತು. ದೇಶೀಯ ಸಂಸ್ಥಾನಗಳ ಆಳ್ವಿಕೆಯನ್ನು ಕೊನೆಗೊಳಿಸಬೇಕೆನ್ನುವ ಎಡಪಂಥೀಯರ ಹೋರಾಟಕ್ಕೆ ಸಂದ ಜಯ ಇದಾಗಿತ್ತು. ದುಡಿಯುವ ವರ್ಗಗಳ ಅಭಿವೃದ್ಧಿ ಹಾಗೂ ಸಾಮಾಜಿಕ ನ್ಯಾಯ ಇವೆರಡೂ ಸಾಧ್ಯವಾಗುವುದು ಪ್ರಭುತ್ವ ಕೊನೆ ಗೊಂಡಾಗ ಎನ್ನುವುದು ಎಡಪಂಥೀಯರ ಸ್ಪಷ್ಟ ನಿಲುವಾಗಿತ್ತು. ಈ ಕಾರಣಕ್ಕಾಗಿಯೇ ಅವರು ಬ್ರಿಟಿಷ್ ಸರಕಾರವನ್ನು ಹಾಗೂ ದೇಶೀಯ ಸಂಸ್ಥಾನಗಳನ್ನು ಸಮಾನವಾಗಿ ವಿರೋಧಿಸಿದರು. ಕೇರಳ ಪ್ರದೇಶ ಕಾಂಗ್ರೆಸ್ ಸಮಿತಿ ಹಾಗೂ ಕಮ್ಯುನಿಸ್ಟ್ ಪಕ್ಷ ಇವೆರಡೂ ಭಿನ್ನ ನೆಲೆಗಳಲ್ಲಿ ತಮ್ಮ ಹೋರಾಟವನ್ನು ಮುಂದುವರಿಸಿಕೊಂಡುಹೋದವು.

ಮಲಯಾಳಂ ಮಾತನಾಡುವ ಜನರು ಇರುವ ಪ್ರದೇಶಗಳನ್ನು ಒಂದುಗೂಡಿಸುವ ಪ್ರಯತ್ನ ರಾಜಕೀಯ ನೆಲೆಯಲ್ಲಿ ಒಂದು ರೀತಿಯಲ್ಲಿ ನಡೆಯುತ್ತಿದ್ದರೆ, ಅದಕ್ಕೆ ಪೂರಕವಾಗಿ ಇಲ್ಲವೆ ಸ್ವತಂತ್ರವಾಗಿ ಐಕ್ಯ ಕೇರಳ ಹೋರಾಟ ಕೇರಳದಾದ್ಯಂತ ನಡೆಯುತ್ತಿತ್ತು. ಅನೇಕ ಕವಿಗಳು, ಬರಹಗಾರರು ತಮ್ಮ ಬರಹಗಳ ಮೂಲಕ ಜನರನ್ನು ಜಾಗೃತಗೊಳಿಸುವ ಪ್ರಯತ್ನ ಮಾಡಿದರು. ಭಾಷೆಯ ಆಧಾರದ ಮೇಲೆ ಮಲಯಾಳಿಗಳನ್ನು ಒಂದುಗೂಡಿಸುವುದು, ಭೌಗೋಳಿಕವಾಗಿ ಐಕ್ಯ ಕೇರಳವನ್ನು ರಚಿಸುವುದು, ರಾಜಕೀಯವಾಗಿ ಹರಿದು ಹಂಚಿಹೋಗಿರುವ ಅಂದರೆ, ತಿರುವಾಂಕೂರು, ಕೊಚ್ಚಿನ್ ಹಾಗೂ ಬ್ರಿಟಿಷ್ ಮಲಬಾರ್ ಪ್ರದೇಶಗಳನ್ನು ಒಂದುಗೂಡಿಸಿ ಒಂದು ಆಡಳಿತ ವ್ಯವಸ್ಥೆಯೊಳಗೆ ತರುವುದು, ಈ ಮುಂತಾದ ಪ್ರಯತ್ನಗಳು ನಿರಂತರವಾಗಿ ನಡೆದವು. ದಾಕ್ಷಾಯಣಿ ವೇಲಾಯುಧನ್ ಎಂಬ ಐಕ್ಯ ಕೇರಳ ಚಳವಳಿಯ ಪ್ರಮುಖ ಹೋರಾಟಗಾರ್ತಿ ಕೇರಳ ಮೊದಲು ಒಂದು ಆಡಳಿತ ವ್ಯಾಪ್ತಿಯೊಳಗೆ ಬರಬೇಕೆನ್ನುವ ಅಭಿಪ್ರಾಯ ಹೊಂದಿದ್ದರು. ತಿರುವಾಂಕೂರಿನ ದಕ್ಷಿಣ ಭಾಗದಲ್ಲಿ ತಮಿಳು ಭಾಷೆಯನ್ನಾಡುವ ಜನರು ಹೆಚ್ಚಿನ ಸಂಖ್ಯೆಯಲ್ಲಿದ್ದರು. ಇದು ಐಕ್ಯ ಕೇರಳವಾದಿಗಳ ಭಾಷಿಕ ನೆಲೆಯಲ್ಲಿ ಕೇರಳವನ್ನು ನಿರ್ಮಿಸುವ ಪ್ರಯತ್ನಕ್ಕೆ ತಡೆಯಾಗಿ ಪರಿಣಮಿಸಿತು. ಅದೇ ರೀತಿ ತಿರುವಾಂಕೂರು ರಾಜ್ಯ, ಕೊಚ್ಚಿನ್ ರಾಜ್ಯ ಮತ್ತು ಬ್ರಿಟಿಷ್ ಮಲಬಾರ್‌ನಲ್ಲಿದ್ದ ಮಲಯಾಳಿ ಜನರನ್ನು ಒಂದುಗೂಡಿಸುವುದು ಅಷ್ಟೊಂದು ಸುಲಭದ ಕೆಲಸವಾಗಿರಲಿಲ್ಲ. ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆ ಹಾಗೂ ಹಿಂದೂ-ಮುಸ್ಲಿಂ ಎನ್ನುವ ಕೋಮು ಭಾವನೆಗಳು ಈ ಪ್ರಯತ್ನಕ್ಕೆ ಅಡ್ಡಿಯಾಗಿದ್ದವು. ಹೀಗಾಗಿ ರಾಷ್ಟ್ರೀಯತೆ ಎನ್ನುವ ಕಲ್ಪನೆಯೇ ಅಪಾಯಕಾರಿಯಾಗಿ ಕಾಣಿಸಿಕೊಳ್ಳಲಾರಂಭಿಸಿತು. ಎಡಪಂಥೀಯರು ಇದನ್ನು ಬಹಿರಂಗವಾಗಿ ಪ್ರಚಾರ ಮಾಡತೊಡಗಿದರು. 'ಐಕ್ಯ ಕೇರಳ' ಪರಿಕಲ್ಪನೆಯನ್ನು ಜಾತಿ, ಧರ್ಮ ಮತ್ತು ಪುರಾಣಗಳ ಹಿನ್ನೆಲೆಯಿಂದ ವ್ಯಾಖ್ಯಾನಿಸುವುದನ್ನೂ ಎಡಪಂಥೀಯರು ವಿರೋಧಿಸಿದರು. ಕೇರಳಿಯನ್ನರು ಎನ್ನುವ ಸಮುದಾಯ ಕಲ್ಪನೆಯನ್ನು ಮೂಡಿಸುವ, ಅಭಿವೃದ್ಧಿಯನ್ನು ಗುರಿಯನ್ನಾಗಿಸಿದ ಹೋರಾಟಕ್ಕೆ ಎಡಪಂಥೀಯರು ಚಾಲನೆ ನೀಡಿದರು.

೧೯೪೭ರಲ್ಲಿ ಮಲಬಾರಿನ ತ್ರಿಚ್ಚೂರಿನಲ್ಲಿ 'ಐಕ್ಯಕೇರಳ ಕಲೋತ್ಸವಮ್' ಎನ್ನುವ ಸಮಾರಂಭ ನಡೆಯಿತು. ಈ ಸಮಾರಂಭದ ಅಧ್ಯಕ್ಷತೆಯನ್ನು ಐಕ್ಯ ಕೇರಳವಾದಿಯಾದ ಕೆ. ಕೇಳಪ್ಪನ್ ಅವರು ವಹಿಸಿದರು. ಸಮಾರಂಭದ ಉದ್ಘಾಟನೆಯನ್ನು ಕೊಚ್ಚಿನ್ ರಾಜ್ಯದ ಮಹಾರಾಜರು ಮಾಡಿದರು. ಉದ್ಘಾಟನಾ ಭಾಷಣ ಮಾಡುತ್ತಾ ಮಹಾರಾಜರು ಜವಾಬ್ದಾರಿ ಸರಕಾರದ ಕಡೆಗೆ ಒಲವು ತೋರಿಸಿದರು. ಐಕ್ಯ ಕೇರಳ ಸಮಿತಿಯ ಹೋರಾಟಕ್ಕೆ ಕೊಚ್ಚಿ ಸಂಸ್ಥಾನವು ಸಹಕಾರ ನೀಡುವುದೆಂಬ ಆಶ್ವಾಸನೆಯನ್ನು ನೀಡಿದರು. ಮಲಯಾಳಿ ಪ್ರದೇಶಗಳು ಒಂದುಗೂಡುವುದಾದರೆ ಕೊಚ್ಚಿ ಸಂಸ್ಥಾನವು ಅವುಗಳಲ್ಲಿ ಒಂದಾಗುವುದಕ್ಕೆ ಹಿಂಜರಿಯದು ಎಂಬುದಾಗಿ ತಿಳಿಸಿದರು. ಅಧ್ಯಕ್ಷ ಭಾಷಣ ಮಾಡಿದ ಕೆ. ಕೇಳಪ್ಪನ್ ಅವರು ಗೋಕರ್ಣ ದಿಂದ ಕನ್ಯಾಕುಮಾರಿಯವರೆಗಿನ ನಾಡು ಕೇರಳಕ್ಕೆ ಸೇರಿದ್ದು ಎಂಬುದಾಗಿ ಸಾರಿದರು. ಅವರ ಭಾಷಣದ ಸಾರಾಂಶ ಹೀಗಿದೆ: 'ತೆಂಕಣ ಕಡಲೇ ಗಡಿಯಾದ ಕನ್ಯಾಕುಮಾರಿಯಿಂದ ಗೋಕರ್ಣ ಪರ್ಯಂತದ ಈ ಪಡು ಕರಾವಳಿಯ ನಾಡಿಗೆ ಕೇರಳ ಎಂಬುದು ಕೇರಳ ಮಹಾತ್ಮೆ ಎಂಬ ಪುರಾಣದಲ್ಲಿಯೇ ಹೇಳಲಾದ ಹೆಸರು. ಪೂರ್ವದಲ್ಲಿ ಪರ್ವತಶ್ರೇಣಿ, ಪಶ್ಚಿಮದಲ್ಲಿ ಸಾಗರವೇ ಗಡಿಗಳನ್ನಾಗಿ ಉಳ್ಳ ಈ ನಾಡು ಏಕರೀತಿಯ ಆಚಾರ-ವ್ಯವಹಾರ ಗಳ ಜನಸಮೂಹವನ್ನು ಹೊಂದಿದೆ.' ಕೇಳಪ್ಪನ್ ಅವರು ಕೇರಳವನ್ನು ಪರಶುರಾಮ ಕ್ಷೇತ್ರ ಎಂಬುದಾಗಿ ಕರೆದು, ಪರಶುರಾಮ ಸೃಷ್ಟಿ ಪುರಾಣಕತೆಯನ್ನು ಐಕ್ಯ ಕೇರಳ ಚಳವಳಿಯೊಂದಿಗೆ ಜೋಡಿಸುವ ಪ್ರಯತ್ನ ಮಾಡಿದರು. ಅವರ ಈ ಪ್ರಯತ್ನಕ್ಕೆ ಕರ್ನಾಟಕ ಏಕೀಕರಣ ಹೋರಾಟಗಾರರು ಪ್ರಬಲವಾದ ವಿರೋಧವನ್ನು ವ್ಯಕ್ತಪಡಿಸಿದರು. ತಮಿಳುನಾಡಿನಲ್ಲೂ ಇದೇ ರೀತಿಯ ವಿರೋಧ ವ್ಯಕ್ತವಾಯಿತು.



ಕೇರಳದ ಎಡಪಂಥೀಯರು ಕೇಳಪ್ಪನ್ ಅವರ ಹಾಗೂ ಕೊಚ್ಚಿನ್ ಮಹಾರಾಜರ ಹೇಳಿಕೆಗಳನ್ನು ಬಲವಾಗಿ ವಿರೋಧಿಸಿದರು. ಅವರಲ್ಲಿ ಇ.ಎಂ.ಎಸ್. ನಂಬೂದಿರಿಪಾಡ್, ಕೃಷ್ಣ ಪಿಳ್ಳೆ, ಆರ್. ಸುಗತನ್ ಮುಂತಾದವರು ಪ್ರಮುಖರು. ಕೃಷ್ಣ ಪಿಳ್ಳೆ ಅವರು ಪರಶುರಾಮ ಸೃಷ್ಟಿ ಪುರಾಣವನ್ನು ಐಕ್ಯ ಕೇರಳ ಸಮ್ಮೇಳನದಲ್ಲಿ ಉಲ್ಲೇಖಿಸಿದ್ದನ್ನು ಹಾಗೂ ಆ ಮೂಲಕ ಕೇರಳದ ಗಡಿಗಳನ್ನು ಸೂಚಿಸಿರುವುದನ್ನು ಟೀಕಿಸಿದರು. ಪರಶುರಾಮ ಸೃಷ್ಟಿ ಪುರಾಣವು ಯಾವ ಸಮುದಾಯವನ್ನು ಪ್ರತಿನಿಧಿಸುತ್ತದೆ ಹಾಗೂ ಅದರಲ್ಲಿ ಕ್ರಿಶ್ಚಿಯನ್ನರು ಮತ್ತು ಮುಸ್ಲಿಮರಿಗೆ ಜಾಗವಿದೆಯೇ ಎನ್ನುವ ಪ್ರಶ್ನೆಯನ್ನು ಕೃಷ್ಣ ಪಿಳ್ಳೆ ಹಾಗೂ ಇ.ಎಂ.ಎಸ್. ನಂಬೂದಿರಿಪಾಡ್ ಮುಂದಿಟ್ಟರು. ಕೇರಳಿಯಾರ್ ಅಥವಾ ಕೇರಳಿಯನ್ನರನ್ನು ಒಂದುಗೂಡಿಸಲು ಈ ರೀತಿಯ ಪುರಾಣಗಳಿಂದ ಸಾಧ್ಯವಿಲ್ಲ; ಅದು ಕೇವಲ ಮೇಲ್ವರ್ಗದ ಅಥವಾ ಮೇಲ್ಜಾತಿಯವರನ್ನು ಇನ್ನೂ ಉನ್ನತಮಟ್ಟಕ್ಕೆ ಕೊಂಡೊಯ್ಯಬಹುದಷ್ಟೆ ಎಂಬುದಾಗಿ ಎಡಪಂಥೀಯರು ಎಚ್ಚರಿಸಿದರು. ಕೇರಳದಲ್ಲಿ ಎಲ್ಲ ಸಮುದಾಯಗಳನ್ನು ಒಂದುಗೂಡಿಸಲು ಹಾಗೂ ಅಭಿವೃದ್ಧಿಯತ್ತ ಕೊಂಡೊಯ್ಯಲು ಒಂದು ಸಮುದಾಯ ಚಳವಳಿಯ ಅನಿವಾರ್ಯತೆ ಇದೆ ಎಂಬುದಾಗಿ ಎಡಪಂಥೀಯರು ಮನಗಂಡರು.

ಇ.ಎಂ.ಎಸ್. ನಂಬೂದಿರಿಪಾಡ್ ಅವರು ಕೇರಳದ ಎಡಪಂಥೀಯರಲ್ಲಿ ಪ್ರಮುಖರು. ಅವರು ಕೇರಳ ಪ್ರದೇಶ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಯಾಗಿದ್ದರು. ನಂತರ ಭಾರತದ ಕಮ್ಯುನಿಸ್ಟ್ ಚಳವಳಿಯ ಅತ್ಯಂತ ಮಹತ್ವದ ನಾಯಕರಾಗಿ ಬೆಳೆದರು. ಅವರು ಐಕ್ಯಕೇರಳವಾದಿಗಳ ಪರಶುರಾಮ ಸೃಷ್ಟಿ ಪುರಾಣದ ಬಳಕೆ, ಮಧ್ಯಕಾಲೀನ ಕೇರಳದ ಪೆರುಮಾಳ್ ಅರಸರ ವೈಭವಯುತ ಚಿತ್ರಣ ಮುಂತಾದವುಗಳನ್ನು ವಿರೋಧಿಸಿದರು. ಕೇರಳದ ಶ್ರೀಮಂತಿಕೆಯ ಸಂಸ್ಕೃತಿಯನ್ನು ಪುರಾಣ ಹಾಗೂ ಚರಿತ್ರೆಯ ಮೂಲಕ ಪ್ರಚಾರ ಪಡಿಸುವುದನ್ನು ಅವರು ವಿರೋಧಿಸಿದರು. ಕೊಚ್ಚಿನ್ ಮಹಾರಾಜರ ಸಹಾಯವನ್ನು ಪಡೆದುಕೊಂಡಿರುವುದನ್ನು ವಿರೋಧಿಸಿದರು. ಅವರ ಪ್ರಕಾರ ಕೇರಳದ ಐಕ್ಯ ಕೇರಳ ಚಳವಳಿ ಮಹಾರಾಜರ ಕೃಪಾಕಟಾಕ್ಷದಲ್ಲಿ ನಡೆಯುತ್ತಿತ್ತು ಹಾಗೂ ಊಳಿಗಮಾನ್ಯ ಹಿತಾಸಕ್ತಿಗಳು ಇದರಿಂದಾಗಿ ಗಟ್ಟಿಗೊಳ್ಳುತ್ತಿದ್ದವು. ಹಾಗಾಗಿ ಅವರು ಇನ್ನಿತರ ಸಮಾನ ಮನಸ್ಕ ಎಡಪಂಥೀಯರೊಂದಿಗೆ ಚರ್ಚಿಸಿ ಕೇರಳಿಯನ್ನರ ಐಕ್ಯತೆಗೆ ಹಾಗೂ ಅಭಿವೃದ್ಧಿಗೆ ವೇದಿಕೆಯೊಂದನ್ನು ನಿರ್ಮಿಸಿಕೊಂಡರು. ರೈತರು, ಕಾರ್ಮಿಕರು ಹಾಗೂ ಇನ್ನಿತರ ಬಡವ ಹಾಗೂ ನಿರುದ್ಯೋಗಿ ಜನತೆಯನ್ನು ಅಭಿವೃದ್ಧಿಯತ್ತ ಕೊಂಡೊಯ್ಯುವ, ಜಾತಿ, ಧರ್ಮ, ಊಳಿಗಮಾನ್ಯತೆಯ ಹಿಡಿತದಿಂದ ಮಲಯಾಳಿಗಳನ್ನು ಬಿಡಿಸುವುದೇ ಈ ವೇದಿಕೆಯ ಉದ್ದೇಶವಾಗಿತ್ತು. ಆ ಮೂಲಕ ಐಕ್ಯ ಕೇರಳದ ನಿರ್ಮಾಣ ಸಾಧ್ಯ ಎಂಬುದಾಗಿ ಇ.ಎಂ.ಎಸ್. ನಂಬೂದಿರಿಪಾಡ್ ನಂಬಿದ್ದರು. ಸಮಾನತೆ, ಸ್ವಾತಂತ್ರ್ಯ, ಅಭಿವೃದ್ಧಿಯಿಂದ ಕೂಡಿದ ಹೊಸ ಕೇರಳವನ್ನು ನಿರ್ಮಿಸುವುದು ಒಂದು ಪರ್ಯಾಯ ವೇದಿಕೆಯಾಗಿ ಕೇರಳದಲ್ಲಿ ಕಾಣಿಸಿಕೊಂಡಿತು. ಇದನ್ನು 'ಮಾವೇಲಿನಾಡು' ಎಂಬುದಾಗಿ ಕರೆಯಲಾಯಿತು.

ಐಕ್ಯ ಕೇರಳಕ್ಕಾಗಿನ ಹೋರಾಟದ ಸುತ್ತ ಈ ರೀತಿಯ ಹಲವಾರು ಚರ್ಚೆಗಳು ಕಾಣಿಸಿ ಕೊಂಡವು. ಬಲಪಂಥೀಯರು, ಎಡಪಂಥೀಯರು, ಕೇರಳ ಪ್ರದೇಶ ಕಾಂಗ್ರೆಸ್ ಸಮಿತಿ, ಸಮಾಜವಾದಿ ಬಣ ಹಾಗೂ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಇವೆಲ್ಲವೂ ಕೇರಳವನ್ನು ಭಾಷೆಯ ಆಧಾರದ ಮೇಲೆ ಒಂದುಗೂಡಿಸುವ ಪ್ರಯತ್ನ ಮಾಡಿದರೂ, ಬಳಸಿದ ಹಾದಿ ಬೇರೆ ಬೇರೆಯದ್ದು. ಐಕ್ಯ ಕೇರಳ ಸಮ್ಮೇಳನಗಳು ಅನೇಕ ಬಾರಿ ನಡೆದವು. ೧೯೪೯ರಲ್ಲಿ ಪಾಲ್ಘಾಟ್‌ನಲ್ಲಿ ಹಾಗೂ ೧೯೫೪ರಲ್ಲಿ ಕೋಜ್ಜಿಕೋಡ್‌ನಲ್ಲಿ ಐಕ್ಯ ಕೇರಳ ಸಮ್ಮೇಳನಗಳು ನಡೆದವು. ಈ ಸಮ್ಮೇಳನಗಳಲ್ಲಿ ಏಕೀಕೃತ ಕೇರಳವನ್ನು ರಚಿಸುವುದರ ಕುರಿತು ಚರ್ಚಿಸ ಲಾಯಿತು. ೧೯೫೪ರ ಸಮ್ಮೇಳನದಲ್ಲಿ ಮಲಬಾರ್ ಮತ್ತು ತಿರುವಾಂಕೂರು ಕೊಚ್ಚಿನ್‌ಗಳ ನ್ನೊಳಗೊಂಡ ಕೇರಳ ರಾಜ್ಯ ನಿರ್ಮಾಣ ಮಾಡಿ, ಅದರಲ್ಲಿ ಭಾಷಾ ಏಕತೆ, ಆರ್ಥಿಕಾಭಿವೃದ್ಧಿ ಹಾಗೂ ಉತ್ತಮ ಸರಕಾರ ಇರುವುದರ ಬಗೆಗೂ ಚರ್ಚಿಸಲಾಯಿತು. ಮಲಬಾರ್, ತಿರುವಾಂಕೂರು ಮತ್ತು ಕೊಚ್ಚಿನ್‌ಗಳೊಂದಿಗೆ ನೀಲಗಿರಿ ಪ್ರದೇಶದ ಗೂಡಲೂರು ಮತ್ತು ಉದಕಮಂಡಲ ಜಿಲ್ಲೆಗಳನ್ನೂ ಸೇರಿಸುವಂತೆ ಒತ್ತಾಯಿಸಲಾಯಿತು. ಆ ಸಂದರ್ಭ ದಲ್ಲಿಯೇ ದಕ್ಷಿಣ ಭಾರತದ ಎಲ್ಲ ಭಾಷಿಕರಿಗೂ ಸಂಬಂಧಿಸಿದ ದಕ್ಷಿಣದ ರಾಜ್ಯ ಅಥವಾ ಪಶ್ಚಿಮ ಕರಾವಳಿ ರಾಜ್ಯ ನಿರ್ಮಾಣದ ಚರ್ಚೆಗಳೂ ನಡೆಯುತ್ತಿದ್ದವು. ಇ.ಎಂ.ಎಸ್. ನಂಬೂದಿರಿಪಾಡ್ ಅವರು ಈ ಪ್ರಯತ್ನಗಳಿಂದ ಮಲಯಾಳಿ ಭಾಷಿಕರಿಗೆ ನ್ಯಾಯ ಸಿಗಲು ಸಾಧ್ಯವಿಲ್ಲ, ಮಲಯಾಳಿಗಳು ಇನ್ನೊಬ್ಬರ ಅಧೀನದಲ್ಲಿಯೇ ಇರಬೇಕಾಗಿ ಬಂದೀತು ಎಂಬುದಾಗಿ ತಿಳಿಸಿದರು.

ಭಾರತಕ್ಕೆ ಸ್ವಾತಂತ್ರ್ಯ ಬಂದ ಮೇಲೆ ಏಕೀಕೃತ ಕೇರಳಕ್ಕಾಗಿ ಚಳವಳಿಗಳು ಬಿರುಸಿನಿಂದ ನಡೆದವು. ಭಾಷಾಧಾರಿತ ರಾಜ್ಯಗಳ ನಿರ್ಮಾಣ ಕುರಿತು ಚರ್ಚೆಗಳು ಭಾರತ ದಾದ್ಯಂತ ಆರಂಭಗೊಂಡು, ಅನೇಕ ಆಯೋಗಗಳು ರಚನೆ ಗೊಂಡವು. ಆದರೆ ನೆಹರೂ ನೇತೃತ್ವದ ಕೇಂದ್ರ ಸರಕಾರ ಭಾಷೆಗಳ ಆಧಾರದ ಮೇಲೆ ರಾಜ್ಯಗಳನ್ನು ರಚಿಸುವ ಕೆಲಸಕ್ಕೆ ದ್ವಿತೀಯ ಆದ್ಯತೆಯನ್ನು ನೀಡಿ, ದೇಶದ ಏಕತೆ ಮತ್ತು ಸುಭದ್ರತೆಗೆ ಮೊದಲ ಆದ್ಯತೆ ನೀಡಿತು. ಇದು ರಾಜ್ಯಗಳಲ್ಲಿ ಕಾಂಗ್ರೆಸ್ ವಿರೋಧಿ ನಿಲುವುಗಳ ಹುಟ್ಟಿಗೂ ಕಾರಣವಾಯಿತು. ಕೇರಳದಲ್ಲಿ ಏಕೀಕರಣ ಹೋರಾಟಕ್ಕೆ ಹಾದಿಯನ್ನು ಸುಗಮಗೊಳಿಸಿದ ಇನ್ನೊಂದು ಘಟನೆಯೆಂದರೆ ಕೊಚ್ಚಿನ್ ಮತ್ತು ತಿರುವಾಂಕೂರು ರಾಜ್ಯಗಳು (ಜುಲೈ ೧, ೧೯೪೯ರಂದು) ತಿರುವಾಂಕೂರು-ಕೊಚ್ಚಿನ್ ರಾಜ್ಯವಾಗಿ ಒಬ್ಬ ರಾಜ ಪ್ರಮುಖನ ನೇತೃತ್ವದಲ್ಲಿ ಒಂದಾಗಿದ್ದು. ೨೯-೧೨-೧೯೫೩ರಲ್ಲಿ ರಾಜ್ಯ ಪುನರ್ವಿಂಗಡಣಾ ಆಯೋಗವನ್ನು ಕೇಂದ್ರ ಸರಕಾರವು ರಚಿಸಿದ ಮೇಲೆ ಭಾರತದ ಎಲ್ಲ ಭಾಷಿಕರ ಕನಸು ನನಸಾಗುವ ದಿನ ಹತ್ತಿರವಾಯಿತು. ಈ ಸಮಿತಿಯಲ್ಲಿ ಫಜಲ್ ಆಲಿ, ಹೃದಯನಾಥ ಕುಂಜ್ರೂ ಮತ್ತು ಕೆ. ಎಂ. ಪಣಿಕ್ಕರ್ ಇವರುಗಳಿದ್ದರು. ಈ ಆಯೋಗವು ಮಲಬಾರ್ ಜಿಲ್ಲೆ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಭಾಗವಾದ ಕಾಸರಗೋಡನ್ನು ತಿರುವಾಂಕೂರ್-ಕೊಚ್ಚಿನ್ ರಾಜ್ಯದೊಳಗೆ ಸೇರಿಸುವ ಹಾಗೂ ತಮಿಳು ಭಾಷಿಕರಿರುವ ಹಳೆಯ ತಿರುವಾಂಕೂರು ರಾಜ್ಯದ ದಕ್ಷಿಣ ಪ್ರದೇಶವನ್ನು ತಿರುವಾಂಕೂರು-ಕೊಚ್ಚಿನ್‌ನಿಂದ ಬೇರ್ಪಡಿಸಿ ಮದ್ರಾಸ್ ರಾಜ್ಯಕ್ಕೆ ಸೇರಿಸುವ ನಿರ್ಧಾರ ತೆಗೆದುಕೊಂಡಿತು. ಆಯೋಗದ ಈ ಕ್ರಮಕ್ಕೆ ಕರ್ನಾಟಕದಿಂದ ಸಾಕಷ್ಟು ವಿರೋಧಗಳು ಎದುರಾದವು. ಕರ್ನಾಟಕದ ಅವಿಭಾಜ್ಯ ಅಂಗವಾದ ಕಾಸರಗೋಡನ್ನು ಕೇರಳಕ್ಕೆ ಸೇರಿಸಿದ ಆಯೋಗದ ಕ್ರಮವನ್ನು ಕರ್ನಾಟಕ ವಿರೋಧಿಸಿತಾದರೂ, ಕಾನೂನಿಗೆ ತಲೆಬಾಗಬೇಕಾಯಿತು. ನವೆಂಬರ್ ೧, ೧೯೫೬ರಂದು ನೂತನ ಕೇರಳ ರಾಜ್ಯ ಅಸ್ತಿತ್ವಕ್ಕೆ ಬಂದಿತು. ಐಕ್ಯ ಕೇರಳದ ಮೊದಲ ಸರಕಾರ ಇ.ಎಂ.ಎಸ್. ನಂಬೂದಿರಿಪಾಡ್ ಅವರ ನೇತೃತ್ವದಲ್ಲಿ ೧೯೫೭ರಲ್ಲಿ ಅಧಿಕಾರಕ್ಕೆ ಬಂತು. ಇದು ಭಾರತದಲ್ಲಿ ಚುನಾವಣೆಯ ಮೂಲಕ ಅಧಿಕಾರಕ್ಕೆ ಬಂದ ಮೊದಲ ಕಮ್ಯುನಿಸ್ಟ್ ಸರಕಾರವಾಗಿದೆ.

**ಡಾ|| ಕೆ. ಮೋಹನ್‌ಕೃಷ್ಣ ರೈ**
ಉಪನ್ಯಾಸಕ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

# ಮಾರ್ಕಸ್ ಅರೀಲಿಯಸ್‌ನ ಚಿಂತನೆಗಳು

ಎಲ್. ವಿ. ಶಾಂತಕುಮಾರಿ

**ಮಾ**ರ್ಕಸ್ ಅರೀಲಿಯಸ್, ಕ್ರಿಸ್ತಶಕ ೧೨೧ರಲ್ಲಿ ಜನಿಸಿ ೧೬೧ರಲ್ಲಿ ರೋಮ್ ಸಾಮ್ರಾಜ್ಯದ ಚಕ್ರವರ್ತಿಯಾಗಿ ಸಿಂಹಾಸನವನ್ನೇರಿ ಅತ್ಯಂತ ಪ್ರಸಿದ್ಧನಾದ ಯೋಧ ಮತ್ತು ಶ್ರೇಷ್ಠ ಚಿಂತಕ. ಕ್ರಿಶ್ಚಿಯನ್ ಧರ್ಮವಿನ್ನೂ ಜನಪ್ರಿಯವಾಗದಿದ್ದ ಕಾಲದಲ್ಲಿ, ರೋಮಿನಲ್ಲಿನ ಪ್ರಕ್ಷುಬ್ಧ ರಾಜಕೀಯ ಪರಿಸ್ಥಿತಿಯನ್ನೂ, ಆಡಳಿತಾತ್ಮಕ ಮತ್ತು ಗೃಹಕೃತ್ಯದ ಸಮಸ್ಯೆಗಳನ್ನೂ ಎದುರಿಸುತ್ತಾ, ಸಾಮ್ರಾಜ್ಯದ ಎದುರಾಗಿ ಬಂಡೇಳುತ್ತಿದ್ದ ದಂಗೆಕೋರರ ವಿರುದ್ಧ ತನ್ನ ಸೈನ್ಯವನ್ನು ಮುನ್ನಡೆಸುತ್ತಾ, ಯುದ್ಧಶಿಬಿರಗಳಲ್ಲಿ ಕುಳಿತು ಈ ಚಕ್ರವರ್ತಿ ರಚಿಸಿರುವ ಕೃತಿ 'ಮಾರ್ಕಸ್ ಅರೀಲಿಯಸ್‌ನ ಚಿಂತನೆಗಳು', ಪ್ರಸ್ತುತಪಡಿಸುವ ವಿಚಾರಗಳು, ತತ್ವಗಳು ಅತ್ಯಂತ ಪುರಾತನವಾದರೂ ನಿತ್ಯನೂತನವೆನ್ನಿಸಿ, ಎಲ್ಲ ದೇಶ ಎಲ್ಲ ಕಾಲಕ್ಕೂ ಸಲ್ಲುತ್ತವೆ. ಬಹುಶಃ ಯುದ್ಧ ಶಿಬಿರಗಳಲ್ಲಿದ್ದಾಗ ಬರೆದಿರುವುದರಿಂದ ಈ ಗ್ರಂಥದ ಸ್ವರೂಪ ಖಾಸಗಿ ಡೈರಿಯಲ್ಲಿನ ಟಿಪ್ಪಣಿಗಳ ಮಾದರಿಯಲ್ಲಿದೆ.

ರೋಮ್‌ನ ಚಕ್ರವರ್ತಿ ಆಂಟೋನಿಯಸ್ ಪಯಸ್, ಮಾರ್ಕಸ್ ಅರೀಲಿಯಸ್‌ನನ್ನು ದತ್ತು ತೆಗೆದುಕೊಂಡು, ಒಬ್ಬ ಚಕ್ರವರ್ತಿಗೆ ಆವಶ್ಯಕವಾದಂತಹ ಅತ್ಯಂತ ಶ್ರೇಷ್ಠ ಮಟ್ಟದ ಶಿಕ್ಷಣ ನೀಡುತ್ತಾನೆ. ಕ್ರಿಸ್ತಶಕ ೧೬೧ರಲ್ಲಿ ಮಾರ್ಕಸ್ ಚಕ್ರವರ್ತಿಯಾದಾಗ ರೋಮ್ ಸಾಮ್ರಾಜ್ಯ ಪ್ರವಾಹ, ಬರ, ಭೂಕಂಪಗಳು ಮುಂತಾದ ಪ್ರಕೃತಿ ವಿಕೋಪಗಳೇ ಅಲ್ಲದೆ ದಂಗೆಗಳು, ಯುದ್ಧಗಳು, ಸಾಂಕ್ರಾಮಿಕ ರೋಗಗಳು ಇವುಗಳಿಂದಾಗಿ ನೆಲಕಚ್ಚಿತ್ತು. ಆಗಾಗ್ಗೆ ದಂಗೆಯೇಳುತ್ತಿದ್ದ ಪಾರ್ಥಿಯನ್ನರಲ್ಲದೆ, ಜರ್ಮನರು ಮತ್ತು ದೂರದ ಬ್ರಿಟನ್‌ರೂ ದಂಗೆ ಎದ್ದಿದ್ದರು. ಇಂತಹ ಕ್ಲಿಷ್ಟ ಸಂದರ್ಭದಲ್ಲಿ ಚಕ್ರವರ್ತಿಯಾಗಿದ್ದರೂ ಸಹ, ಪ್ರಜೆಗಳ ಭಯ, ಆತಂಕಗಳನ್ನು ನಿವಾರಿಸುವ ಸಲುವಾಗಿ, ತನ್ನ ಸೈನಿಕರೊಡನೆ ಯುದ್ಧಭೂಮಿಗೆ ತೆರಳಿ, ಯುದ್ಧಗಳಲ್ಲಿ ಭಾಗವಹಿಸುತ್ತಾ, ಸೈನಿಕರನ್ನು ಹುರಿದುಂಬಿಸುತ್ತಾ, ಯುದ್ಧ ಶಿಬಿರಗಳಲ್ಲಿ ವಾಸಿಸುತ್ತಿರುವಾಗಲೇ 'ಮಾರ್ಕಸ್ ಅರೀಲಿಯಸ್‌ನ ಚಿಂತನೆಗಳು' ಎಂಬ ಕೃತಿಯಲ್ಲಿನ ಲೋಕಾನುಭವ ಮತ್ತು ದಾರ್ಶನಿಕ ವಿಚಾರಗಳಿಂದ ಸಂಪುಷ್ಟವಾಗಿರುವ ಗ್ರಂಥವನ್ನು ರಚಿಸಿರುವುದು ಈ ಚಕ್ರವರ್ತಿಯ ಮಾನಸಿಕ ದೃಢತೆ, ದೈಹಿಕ ದಾರ್ಢ್ಯ ಮತ್ತು ಚಿಂತನಶೀಲ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದೆ. ಸೈನಿಕರನ್ನು ಹುರಿದುಂಬಿಸುತ್ತಾ, ಜಯಾಪಜಯಗಳ ಬಗ್ಗೆ ಸಮಚಿತ್ತದಿಂದಿದ್ದು ಯುದ್ಧದಲ್ಲಿ ಹೋರಾಡುತ್ತಿದ್ದ ಮಾರ್ಕಸ್ ಅರೀಲಿಯಸ್ ಗೀತೆಯಲ್ಲಿ ವಿವರಿಸುವ ಸ್ಥಿತಪ್ರಜ್ಞನ ಲಕ್ಷಣವನ್ನು ನೆನಪಿಸುತ್ತಾನೆ.

ವಿದ್ವಾಂಸರೂ, ಗುಣಾಢ್ಯರೂ ಹಾಗೂ ನ್ಯಾಯಪರರೂ ಆದ ತಂದೆ, ತಾತ ಮತ್ತು ಗುರುಗಳನ್ನು ಪಡೆದ ಅದೃಷ್ಟವಂತ ಮಾರ್ಕಸ್ ಅರೀಲಿಯಸ್ ಹೆಂಡತಿ, ಮಕ್ಕಳ ವಿಷಯದಲ್ಲಿ ಮಹಾ ದುರದೃಷ್ಟವಂತ. ಹೆಂಡತಿ ಫಾಸ್ಟಿನಾಳ ಚಾರಿತ್ರ್ಯದ ಬಗೆಗೆ ಒಡಕು ಸುದ್ದಿಗಳು ಅರಮನೆಯಲ್ಲಿ ಹಬ್ಬಿದ್ದವು ಎನ್ನುತ್ತಾರೆ. ಮಗ ಕಮೋಡಸ್, ತನ್ನ ತಂದೆಯ ಯಾವ ಸದ್ಗುಣಗಳೂ ಇರದ ಘಾತುಕನಾಗಿದ್ದ. ಆದರೂ ಮಾರ್ಕಸ್ ಅವರ ಬಗೆಗೆ ಎಂದೂ ಅಸಹ್ಯಪಟ್ಟುಕೊಳ್ಳಲಿಲ್ಲ ಮತ್ತು ದ್ವೇಷಿಸಲೂ ಇಲ್ಲ ಎಂಬ ಅಭಿಪ್ರಾಯವಿದೆ.

ಹನ್ನೆರಡು ಪುಸ್ತಕಗಳಾಗಿ ರೂಪುಗೊಂಡಿರುವ 'ಮಾರ್ಕಸ್‌ನ ಚಿಂತನೆಗಳು' ಖಾಸಗಿ ಡೈರಿಯ ವಿನ್ಯಾಸದಲ್ಲಿದ್ದು, ಮನುಷ್ಯ-ದೈವ-ವಿಶ್ವ, ಮನುಷ್ಯನ ಸಾಮಾಜಿಕ ನಡವಳಿಕೆ, ಹುಟ್ಟು, ಸಾವು, ಸಾವಿನ ಭಯ ಹಾಗೂ ಆ ಭಯವನ್ನು ಜಯಿಸುವ ಬಗೆ, ಇವುಗಳ ಬಗೆಗೆ ಚರ್ಚೆ ಮತ್ತು ಜಿಜ್ಞಾಸೆಗಳನ್ನು ಮುಖ್ಯ ಆಶಯವನ್ನಾಗಿ ಹೊಂದಿದೆ. ಚಕ್ರವರ್ತಿಯ ಚಿಂತನೆಗಳು ಅನೇಕ ಬಾರಿ ಸ್ಟಾಯಿಕ್ ದರ್ಶನದ ಆಲೋಚನೆಗಳನ್ನು ಪ್ರತಿಫಲಿಸಿದರೂ, ಅವು ಅವನ ಲೋಕಾನುಭವ, ಮಾನವೀಯತೆ, ವೈಚಾರಿಕತೆ ಮತ್ತು ಉದಾರ ದೃಷ್ಟಿಕೋನವನ್ನು ನಿಚ್ಚಳವಾಗಿ ಪ್ರತಿಬಿಂಬಿಸುತ್ತವೆ. ಮನುಷ್ಯ ಈ ವಿಶ್ವದ ಒಂದು ಭಾಗವಾಗಿ ಇರುವುದರಿಂದ ಅವನು ಪ್ರಕೃತಿಯೊಡನೆ ಹೊಂದಿಕೊಂಡು, ಪ್ರಾಕೃತಿಕ ನಿಯಮಗಳಿಗೆ ಬದ್ಧನಾಗಿ ಬದುಕಬೇಕು ಮತ್ತು ಪ್ರಕೃತಿಯೊಂದಿಗೆ ಸಂಪೂರ್ಣ ಸಾಮರಸ್ಯದೊಂದಿಗೆ ವ್ಯವಹರಿಸಬೇಕೆಂಬ ಸ್ಟಾಯಿಕ್ ತತ್ವದ ಛಾಯೆ ಮಾರ್ಕಸ್ ಅರೀಲಿಯಸ್‌ನ ವಿಚಾರಗಳಲ್ಲಿ ಕಂಡುಬರುತ್ತದೆ. ಅವನ ಚಿಂತನೆಯ ಪ್ರಮುಖ ಆಲೋಚನೆ ಹೀಗಿದೆ : ''ಮನುಷ್ಯನ ವ್ಯಕ್ತಿತ್ವದ ಅತ್ಯಂತ ಮುಖ್ಯ ಅಂಶವೆಂದರೆ, ಅವನ ವಿವೇಚನೆ ಮತ್ತು ತಾರ್ಕಿಕತೆ. ಈ ವಿಶ್ವದ ಮುಖ್ಯ ತತ್ವವೂ ವಿವೇಚನೆ ಮತ್ತು ತಾರ್ಕಿಕತೆಗಳಾಗಿವೆ. ಮನುಷ್ಯನಿಗೆ ಸಂಭವಿಸಬಹುದಾದುದೆಲ್ಲವೂ, ಎಲ್ಲ ವಸ್ತುಗಳ ವ್ಯವಸ್ಥೆಗೂ ಅತ್ಯುತ್ತಮವಾದಂತಹುದೆ ಆಗಿರುತ್ತದೆಯಾಗಿ, ತಾನು ಈ ತರ್ಕಬದ್ಧ ಸಾರ್ವತ್ರಿಕ ನಿಯಮದ ಕೇವಲ ಒಂದು ಭಾಗ ಎಂಬ ಅರಿವಿನಿಂದ ಸಮಾಧಾನ ಪಡೆಯಬೇಕು.'' ಮನುಷ್ಯ ವಿವೇಚನೆಯಿಂದ ಮಾರ್ಗದರ್ಶನ ಪಡೆಯಬೇಕಲ್ಲದೆ, ದೈಹಿಕ ಭಾವೋದ್ವೇಗಗಳಿಂದಲ್ಲ ಹಾಗೂ ಅವನು ತನ್ನೊಳಗಿನ ಬೌದ್ಧಿಕ ಮತ್ತು ಆಧ್ಯಾತ್ಮಿಕ ಅಂಶಗಳಿಂದ ಮುನ್ನಡೆಸಲ್ಪಡಬೇಕು ಎಂಬುದು ಮಾರ್ಕಸ್ ಅರೀಲಿಯಸ್‌ನ ಅಭಿಪ್ರಾಯ.

''ಜೀವನ ಕೇವಲ ಸಿದ್ಧಾಂತವಲ್ಲ, ಅದು ಕ್ರಿಯೆ. ಜೀವನದಲ್ಲಿ ಅತ್ಯಂತ ಮುಖ್ಯವಾದದ್ದು ಕಾರ್ಯಕ್ಷಮತೆ, ಅನುಭವ ಮತ್ತು ದೈನಂದಿಕ ನಡೆವಳಿಕೆಗಳು'' ಎನ್ನುವುದು ಮಾರ್ಕಸ್ ಅರೀಲಿಯಸ್‌ನ ನಂಬಿಕೆ. ಇದರಿಂದಾಗಿ ಅವನು ಕೇವಲ ತತ್ವಗಳನ್ನು ಸಿದ್ಧಾಂತಗಳನ್ನು ಬೋಧಿಸುವುದಿಲ್ಲ. ಅವುಗಳನ್ನು ತನ್ನ ಜೀವನದಲ್ಲಿ ಅನುಸರಿಸುತ್ತಾನೆ, ಅಭ್ಯಸಿಸುತ್ತಾನೆ. ''ವ್ಯಕ್ತಿ ಕೆಲವು ವಿಶೇಷ ಮತ್ತು ಮಹತ್ವದ ಸಂದರ್ಭಗಳಲ್ಲಿ ಉದಾತ್ತನಾಗಿ ವರ್ತಿಸಬಹುದು. ಆದರೆ ಜೀವನದ ಹಲವು ಸಾಮಾನ್ಯ ಸಂದರ್ಭಗಳಲ್ಲಿ ಚಿಕ್ಕ ವಿಷಯಗಳಲ್ಲಿ ಉದಾತ್ತವಾಗಿ ನಡೆದುಕೊಳ್ಳಲು ಅಪಾರ ತಾಳ್ಮೆ, ಸಹನೆ, ತೀಕ್ಷ್ಣವಾದ ನೈತಿಕ ಪ್ರಜ್ಞೆಯ ಅವಶ್ಯಕತೆಯಿರುತ್ತದೆ'' ಎನ್ನುವ ಮಾರ್ಕಸ್‌ನ ನುಡಿಗಳಲ್ಲಿ ಮನೋವೈಜ್ಞಾನಿಕ ಒಳನೋಟಗಳು, ಮಾನವೀಯ ಕಾಳಜಿ, ಸಾಮಾಜಿಕ ಜಾಗೃತಿಗಳು ಕಂಡುಬರುತ್ತವೆ. ಸಮಾಜಶಾಸ್ತ್ರ, ಮನೋವಿಜ್ಞಾನಗಳು ಇನ್ನೂ ಬೆಳವಣಿಗೆಯನ್ನು ಕಾಣದಿದ್ದ ಎರಡು ಸಾವಿರ



**ಹನ್ನೆರಡು ಪುಸ್ತಕಗಳಾಗಿ ರೂಪುಗೊಂಡಿರುವ 'ಮಾರ್ಕಸ್‌ನ ಚಿಂತನೆಗಳು' ಖಾಸಗಿ ಡೈರಿಯ ವಿನ್ಯಾಸದಲ್ಲಿದ್ದು, ಮನುಷ್ಯ-ದೈವ-ವಿಶ್ವ, ಮನುಷ್ಯನ ಸಾಮಾಜಿಕ ನಡವಳಿಕೆ, ಹುಟ್ಟು, ಸಾವು, ಸಾವಿನ ಭಯ ಹಾಗೂ ಆ ಭಯವನ್ನು ಜಯಿಸುವ ಬಗೆ, ಇವುಗಳ ಬಗೆಗೆ ಚರ್ಚೆ ಮತ್ತು ಜಿಜ್ಞಾಸೆಗಳನ್ನು ಮುಖ್ಯ ಆಶಯವನ್ನಾಗಿ ಹೊಂದಿದೆ. ಚಕ್ರವರ್ತಿಯ ಚಿಂತನೆಗಳು ಅನೇಕ ಬಾರಿ ಸ್ಟಾಯಿಕ್ ದರ್ಶನದ ಆಲೋಚನೆಗಳನ್ನು ಪ್ರತಿಫಲಿಸಿದರೂ, ಅವು ಅವನ ಲೋಕಾನುಭವ, ಮಾನವೀಯತೆ, ವೈಚಾರಿಕತೆ ಮತ್ತು ಉದಾರ ದೃಷ್ಟಿಕೋನವನ್ನು ನಿಚ್ಚಳವಾಗಿ ಪ್ರತಿಬಿಂಬಿಸುತ್ತವೆ.**

ವರ್ಷದ ಹಿಂದೆ ಬದುಕಿದ್ದ ಈ ಚಕ್ರವರ್ತಿಗೆ ಈ ವಿಷಯಗಳ ಬಗೆಗಿದ್ದ ಅರಿವು ಅಚ್ಚರಿ ಮೂಡಿಸುತ್ತದೆ. ವ್ಯಕ್ತಿ ಮತ್ತು ಸಮಾಜದ ನಡುವಿನ ಸಂಬಂಧದ ಬಗೆಗೆ ಅವನು ಹೀಗೆ ಬರೆಯುತ್ತಾನೆ: ''ವ್ಯಕ್ತಿ ಸಮಾಜಜೀವಿಯಾಗಿರಬೇಕೆಂದು ಉದ್ದೇಶಿಸಲಾಗಿದೆ. ತನಗಿಂತಲೂ ಹಿರಿಯದಾಗಿರುವ ಸಮಾಜದ ಒಂದು ಘಟಕ ಅವನು. ತನ್ನ ನೆರೆಯವರ ಕ್ಷೇಮದಿಂದ ಸಂಪೂರ್ಣ ಬೇರೆಯಾಗಿ ಕೇವಲ ತನ್ನದೇ ಸುಖವನ್ನವನು ಅರಸಲಾರ. ತಾನು ಸೇರಿರುವಂತಹ ಸಾಮಾಜಿಕ ಸಂವಿಧಾನದಿಂದ ಉದ್ಭವಿಸುವ ಹಕ್ಕುಗಳನ್ನು ಬಿಟ್ಟು ವ್ಯಕ್ತಿಗೆ ಯಾವುದೇ ಖಾಸಗಿ, ವೈಯಕ್ತಿಕ ಹಕ್ಕುಗಳು ಇರುವುದಿಲ್ಲ. ಸಮುದಾಯ ಜೀವನದಿಂದ ಬೇರೆಯಾಗಿ ತನ್ನದೇ ಏಕಾಂತದಲ್ಲಿ ಅಥವಾ ಪ್ರತ್ಯೇಕತೆಯಲ್ಲಿರಲು ಪ್ರಯತ್ನಿಸಬಾರದು...'' ಈ ವಿಚಾರಧಾರೆಯಲ್ಲಿ ವೈಯಕ್ತಿಕ ಹಕ್ಕುಗಳ ಮೇಲಿನ ಹತೋಟಿ ಸ್ವಲ್ಪ ಹೆಚ್ಚೆ ಎನಿಸಿದರೂ, ಸಾಮಾಜಿಕ ವ್ಯವಸ್ಥೆಯಲ್ಲಿ ವೈಯಕ್ತಿಕತೆ ತೀರಾ ಹೆಚ್ಚಾದಾಗ ಉಂಟಾಗುವ ಗೊಂದಲ, ಅರಾಜಕತೆಗಳನ್ನು ತಡೆಯಲು ಇಂತಹದೊಂದು ಸಂಹಿತೆಯ ಅವಶ್ಯಕತೆಯಿದೆ ಎಂದೆನಿಸದಿರದು. ವ್ಯಷ್ಟಿ ಮತ್ತು ಸಮಷ್ಟಿಯ ನಡುವಿನ ನಿರಂತರ ಸಂಘರ್ಷಕ್ಕೆ ಮಾರ್ಕಸ್ ಅರೀಲಿಯಸ್ ತನ್ನದೇ ಆದ ಪರಿಹಾರವೊಂದನ್ನು ತನ್ನ ವಿಚಾರಗಳಲ್ಲಿ ಸೂಚಿಸಿದ್ದಾನೆ. ''ನಾವು ಪರಸ್ಪರರ ಹೊಣೆಗಳನ್ನು (ಭಾರಗಳನ್ನು) ಹೊರುವುದನ್ನು ಕಲಿಯಬೇಕು'' ಎನ್ನುವುದು ಅವನ ಆಶಯ.

ವಂಚನೆ, ಮೋಸ, ಆತ್ಮವಂಚನೆ ಮತ್ತು ಇತರರ ಅಭಿಪ್ರಾಯಗಳಿಂದ ಮೋಸ ಹೋಗುವುದು, ಇವುಗಳಿಂದ ಮುಕ್ತರಾಗಿರುವುದು ವಿವೇಚನೆಯಷ್ಟೇ ಮುಖ್ಯವೆಂದು ಮಾರ್ಕಸ್ ಅರೀಲಿಯಸ್ ಅಭಿಪ್ರಾಯಪಡುತ್ತಾನೆ. ಇಂದ್ರಿಯಗಳು ಮತ್ತು ಇತರರ ಅಸ್ಪಷ್ಟ ಅಭಿಪ್ರಾಯಗಳು ನಮ್ಮನ್ನು ಯಾವಾಗಲೂ ವಂಚಿಸುತ್ತವೆ. ಎಲ್ಲರೂ ಪ್ರಮುಖ ವಸ್ತುಗಳೆಂದು ಪರಿಗಣಿಸುವಂತಹ ಸಾಮಾನ್ಯ ಮೌಲ್ಯಮಾಪನದಿಂದ ನಾವೆಂದೂ ದಾರಿ ತಪ್ಪಬಾರದೆಂಬುದನ್ನು ಪ್ರಾಕೃತಿಕ ಉದಾಹರಣೆಗಳಿಂದ ಹೀಗೆ ವಿಶದಪಡಿಸುತ್ತಾನೆ. ಕೇವಲ ನಮ್ಮ ಇಂದ್ರಿಯಗಳನ್ನೇ ನಾವು ನಂಬುವುದಾದರೆ ಸೂರ್ಯ ಪ್ರತಿ ಮುಂಜಾನೆ ಉದಯಿಸಿ ಪ್ರತಿಸಂಜೆ ಮುಳುಗುತ್ತಾನೆಂದು ಆಲೋಚಿಸಬೇಕಾಗುತ್ತದೆ. ಭೂಮಿ ಸೂರ್ಯನ ಸುತ್ತ ತಿರುಗುತ್ತದೆ ಎನ್ನುವ ಬದಲು ಸೂರ್ಯ ಭೂಮಿಯ ಸುತ್ತ ತಿರುಗುತ್ತಾನೆ ಎಂದೂ ನಂಬಬೇಕಾಗುತ್ತದೆ. ಬುದ್ಧಿಶಕ್ತಿ, ಆಲೋಚನೆ ಮತ್ತು ವಿಜ್ಞಾನಗಳಿಂದ ಇಂತಹ ತಪ್ಪು ತಿಳಿವಳಿಕೆಗಳು ದೂರವಾಗುತ್ತವೆಂದು ಮಾರ್ಕಸ್ ಅರೀಲಿಯಸ್ ನಂಬುತ್ತಾನೆ.

ಅಗಾಧ ಹಾಗೂ ಆಳವಾದ ಪಾಂಡಿತ್ಯ, ಅನುಭವಗಳಿದ್ದೂ ಮಾರ್ಕಸ್ ಅತ್ಯಂತ ವಿನಮ್ರ. ಅವನ ಈ ವಿನಯಶೀಲತೆ ನ್ಯೂಟನ್‌ನ ವಿನಮ್ರತೆಯನ್ನು ನೆನಪು ಮಾಡುತ್ತದೆ. ಮಾರ್ಕಸ್, ಮನುಷ್ಯನ ಅರಿವಿನ ಪರಿಮಿತಿಯ ಬಗೆಗೆ ಹೀಗೆ ಬರೆಯುತ್ತಾನೆ: ''ಎಲ್ಲೆಡೆಯೂ ನಮ್ಮ ಜ್ಞಾನವು ನಮ್ಮ ಅಜ್ಞಾನದಿಂದಾಗಿ ಪರಿಮಿತವಾಗಿದೆ. ವಸ್ತುಗಳ ಚರಮ ಸಂವಿಧಾನದ ಬಗೆಗೆ ನಮಗೇನೂ ಅರಿವಿಲ್ಲ. ಆಕಸ್ಮಿಕವಾಗಿಯಾಗಲೀ, ಅವ್ಯವಸ್ಥಿತವಾಗಿಯಾಗಲೀ,




ನವಕರ್ನಾಟಕ ಪ್ರಕಾಶನದ ಪುಸ್ತಕ ಪ್ರದರ್ಶನ ೫.೧.೨೦೦೭ರಂದು ಮೈಸೂರಿನಲ್ಲಿ ಪ್ರಾರಂಭವಾಯಿತು. ಪ್ರೊ॥ ಬಿ. ಎನ್. ಶ್ರೀರಾಮ್ ಪ್ರದರ್ಶನ ಉದ್ಘಾಟಿಸಿದರು. ಅದೇ ಸಂದರ್ಭದಲ್ಲಿ ಹತ್ತು ಕೃತಿಗಳ ಅನಾವರಣವನ್ನು ಡಾ॥ ಪ್ರಧಾನ್ ಗುರುದತ್ತ ನೆರವೇರಿಸಿದರು.
ಚಿತ್ರದಲ್ಲಿ (ಎಡದಿಂದ ಬಲಕ್ಕೆ) : ಹರವು ಎಸ್. ಲೋಕೇಶ್, ಪ್ರೊ॥ ಬಿ. ಎನ್. ಶ್ರೀರಾಮ್, ಡಾ॥ ಪ್ರಧಾನ್ ಗುರುದತ್ತ, ಶ್ರೀ ಉದಯ್ ಜಾದೂಗಾರ್ ಮತ್ತು ಎನ್. ಕೆ. ಸತ್ಯನಾರಾಯಣ.

ಸೃಷ್ಟಿಯಾಗಿರದಂತಹ (ಉದ್ಭವವಾಗಿರದಂತಹ) ವಿಶ್ವದಲ್ಲಿ ನಾವಿರುವೆವು ಎಂಬುದನ್ನು, ಈ ವಿಶ್ವ ಒಂದು ನಿಯೋಜಿತ ಗತಿಯಲ್ಲಿ ಚಲಿಸುತ್ತದೆಂಬುದನ್ನು ಮತ್ತು ನಾವು ಚತುರ ಹಾಗೂ ವಿವೇಕಿ ದೈವದ ಕೈಗಳಲ್ಲಿರುವುವೆಂಬುದನ್ನು ಅರಿತರೆ ಸಾಕು. ಸಮರ್ಪಕವಾದ ತರಬೇತಿಯಿಂದ ನಾವು ನಮ್ಮ ಆತ್ಮಗಳ ಒಡೆತನ ಸಾಧಿಸಬಹುದು...''

''ಈ ಪ್ರಪಂಚವನ್ನು ಯಾವುದೋ ಒಂದು ನಿರ್ದಿಷ್ಟ ಕ್ಷಣದಲ್ಲಿ ದೇವರು ಸೃಷ್ಟಿಸಿದನೇ? ಅಥವಾ ಈ ಪ್ರಪಂಚ ಅನಾದಿಕಾಲದಿಂದಲೂ ಅಸ್ತಿತ್ವದಲ್ಲಿದೆಯೇ?'' ಎಂಬ ಪ್ರಶ್ನೆಗಳು ನಿರುಪಯೋಗಿ ಪ್ರಶ್ನೆಗಳೆನ್ನುತ್ತಾನೆ ಮಾರ್ಕಸ್ ಅರೀಲಿಯಸ್. ''ದೇವರನ್ನು ನಾವು ನೋಡದೆಯೇ ಇರುವಾಗ ಅವರುಗಳು ಇರುವರೆಂಬುದನ್ನು ನಾವು ತಿಳಿಯುವುದು ಹೇಗೆ'' ಎನ್ನುವ ಪ್ರಶ್ನೆಯನ್ನು ಮಾರ್ಕಸ್ ಹೀಗೆ ಉತ್ತರಿಸುತ್ತಾನೆ; ''ದೈವದ ದೂರದೃಷ್ಟಿಯ ಅಸ್ತಿತ್ವವನ್ನು ಈ ವಿಶ್ವವು ಪ್ರಾಕೃತಿಕ ನಿಯಮಗಳಲ್ಲಿ ಪ್ರಕಟಪಡಿಸುತ್ತದೆ. ನಮ್ಮ ಆತ್ಮಗಳನ್ನು ನಾವು ಕಾಣದಿದ್ದರೂ ಪ್ರತಿಯೊಬ್ಬ ವಿವೇಚನಾಶೀಲನೂ, ತನ್ನೆಲ್ಲ ವ್ಯವಹಾರಗಳನ್ನು ವಿವೇಕದಿಂದ ನಿರ್ದೇಶಿಸುವ ಅಂತಶ್ಚೇತನವೊಂದು ತನ್ನೊಳಗೆ ಇದೆಯೆಂಬುದನ್ನು ನಂಬುತ್ತಾನೆ. ಅಂತರಂಗದಲ್ಲಿದೆಯೆನ್ನುವ ಈ ವಸ್ತುವನ್ನು ನಾವು ನೋಡುವುದಿಲ್ಲ. ಆದರೂ ಅದರ ಅಸ್ತಿತ್ವದಲ್ಲಿ ನಂಬಿಕೆ ಇಡುತ್ತೇವೆ... ಎಲ್ಲೆಲ್ಲಿಯೂ ದೇವರುಗಳಿದ್ದಾರೆ. ಬದುಕಿರುವಾಗ ನಾವು ಅವರಿಂದ ಸುತ್ತುವರೆಯಲ್ಪಟ್ಟಿರುತ್ತೇವೆ... ನಾವು ಮರಣ ಹೊಂದಿದಾಗಲೂ ದೇವರುಗಳಿರುತ್ತಾರೆ...''

ಸಾವಿನ ಬಗೆಗೆ ಮಾರ್ಕಸ್ ಅರೀಲಿಯಸ್‌ನ ವಿಚಾರಗಳು ಲೋಕಾನುಭವ ಮತ್ತು ಎಲ್ಲ ದರ್ಶನಗಳ ಸಾರ ಎನಿಸುತ್ತದೆ. ಸಾವು ಹುಟ್ಟಿಗಿಂತಲೂ ಅಗಾಧವಾದುದಾಗಲೀ, ಭಯಾನಕವಾದುದಾಗಲೀ ಅಲ್ಲವೆಂದು ತಿಳಿಸುತ್ತಾ, ಹುಟ್ಟು-ಜೀವನ-ಸಾವು ಇವುಗಳ ಹಂತಗಳನ್ನು ಮಾರ್ಕಸ್ ಅರೀಲಿಯಸ್ ಅತ್ಯಂತ ಸರಳವಾಗಿ ವಿವರಿಸುತ್ತಾನೆ. ''ನಾವು ಏನೂ ಆಗಿರುವುದಿಲ್ಲ– ಮತ್ತೆ ಏನೋ ಆಗುತ್ತೇವೆ– ಈ ಏನೋ ಆಗಿರುವುದರಿಂದ ಮುಕ್ತರಾಗುತ್ತೇವೆ– ಮತ್ತೆ ಏನೋ ಆಗುತ್ತೇವೆ– ಮತ್ತೆ ಏನೂ ಆಗಿರುವುದಿಲ್ಲ'' ವಿಶ್ವದಲ್ಲಿ ಎಲ್ಲೆಡೆಯೂ ಪ್ರಾಕೃತಿಕ ವಸ್ತುಗಳ ಚದುರುವಿಕೆ, ವಸ್ತುಗಳು ಹೊಸದಾಗಿ ಏಕತ್ರಗೊಳ್ಳುವಿಕೆಯಂತಹ ಬದಲಾವಣೆಗಳು ನಡೆಯುತ್ತಲೇ ಇರುತ್ತವೆಂದು ತಿಳಿಸಿ ಮಾರ್ಕಸ್ ಸಾವಿನ ಬಗೆಗೆ ಮತ್ತಷ್ಟು ವಿವರಿಸುತ್ತಾನೆ. ಚಕ್ರವರ್ತಿಯೂ, ಮಹಾಯೋಧನೂ ಆಗಿದ್ದ ಮಾರ್ಕಸ್ ಅರೀಲಿಯಸ್‌ಗೆ ಅರಮನೆಯ ಒಳಗೂ ಹೊರಗೂ ಶತ್ರುಗಳು ಇದ್ದಿರಲೇಬೇಕು. ಹಾಗಾಗಿ ಸಾವು ಈ ಚಕ್ರವರ್ತಿಯ ತಲೆಯ ಮೇಲಿನ ಡೆಮಾಕ್ಲಸ್‌ನ ಕತ್ತಿಯಾಗಿತ್ತು. ಹಾಗಾಗಿ ಸಾವು, ಸಾವಿನ ಭಯ, ಆ ಭಯವನ್ನು ಗೆಲ್ಲುವ ವಿಧಾನಗಳು ಅವನ 'ಚಿಂತನೆ'ಗಳ ಬಹುಭಾಗವನ್ನಾಕ್ರಮಿಸಿಕೊಂಡಿವೆ. ಸಾವಿಗೆ ಹೆದರಬೇಕಿಲ್ಲ, ಏಕೆಂದರೆ, ಸಾವು ಪ್ರಕೃತಿಯ ಒಂದು ವ್ಯವಸ್ಥಿತ ಕಾರ್ಯ ಮಾತ್ರ ಹಾಗೂ ಸಾವು ಪ್ರಕೃತಿಯ ಉದ್ದೇಶಕ್ಕೆ ನೆರವಾಗುವಂತಹ ಕ್ರಿಯೆ ಕೂಡ. ಯಾರಾದರೂ ಪ್ರಕೃತಿಗೆ ಹೆದರುವವನಾದರೆ ಅವನಿನ್ನೂ ಕೇವಲ ಮಗು. ಸಾವು ಸನ್ನಿಹಿತವಾಗಿದೆಯೆಂಬ ಅರಿವು, ಮನುಷ್ಯರು ತಮ್ಮ ಆಲೋಚನೆಗಳನ್ನು, ಕಾರ್ಯಗಳನ್ನು, ಸಮರ್ಪಕಗೊಳಿಸಿಕೊಳ್ಳಲು – ವ್ಯವಸ್ಥಿತಗೊಳಿಸಿಕೊಳ್ಳಲು – ಉತ್ತೇಜಿಸಬೇಕು. ಸಾವಿನ ನಂತರ ದೇವರ ಬಳಿ ಹೋಗುವೆವೆಂದರೆ, ಮನುಷ್ಯರಿಂದ ದೂರಹೋಗುವುದು ಭಯಪಡುವ ವಿಷಯವೇ ಅಲ್ಲ. ದೈವ ನಿನಗೆ ಎಂದೂ ಕೇಡು ಬಗೆಯುವುದಿಲ್ಲ. ಮಾರ್ಕಸ್ ಅರೀಲಿಯಸ್‌ನ ಈ ವಿಚಾರಗಳಲ್ಲಿ ಲೋಕಾನುಭವ, ಸ್ಟಾಯಿಕ್ ಹಾಗೂ ಬೇರೆ ಬೇರೆ ತಾತ್ವಿಕ ಚಿಂತನೆಗಳ ಛಾಯೆಯನ್ನು ಕಾಣಬಹುದಾಗಿದೆ.

ಸಾಮಾಜಿಕ ನಡವಳಿಕೆ, ಕಾಲದ ಬಗೆಗಿನ ಪರಿಕಲ್ಪನೆ, ಅಪರಾಧಗಳ ಬಗೆಗಿನ ವಿಶ್ಲೇಷಣೆಗಳ ಬಗೆಗೆ ಮಾರ್ಕಸ್ ಅರೀಲಿಯಸ್‌ನ ಅಭಿಪ್ರಾಯಗಳು ಅತ್ಯಂತ ಆಧುನಿಕವೂ ಉದಾರವೂ ಆಗಿದ್ದು, ಎರಡು ಸಾವಿರ ವರ್ಷಗಳ ಹಿಂದಿನ ಚಕ್ರವರ್ತಿಯೊಬ್ಬ ಬರೆದದ್ದೆಂದು ನಂಬಲೇ ಆಗುವುದಿಲ್ಲ. ''ನಮ್ಮ ನೆರೆಯವರ ಮನಸ್ಸಿನೊಳಗೆ ಹಣಿಕಿ ಹಾಕುವುದನ್ನು'' ಮಾರ್ಕಸ್ ವಿರೋಧಿಸುತ್ತಾನೆ. ''ತನ್ನ ಮನದಾಳದೊಳಗಿರುವ ಚೈತನ್ಯವನ್ನು ಪ್ರಾಮಾಣಿಕವಾಗಿ ಗೌರವಿಸಿದರೆ ಸಾಕು... ತನ್ನ ಒಳಗಿನ ಚೈತನ್ಯವನ್ನು ಗೌರವಿಸುವುದೆಂದರೆ ಅದನ್ನು ಭಾವೋದ್ವೇಗ, ವಿಚಾರಹೀನತೆ, ಅತೃಪ್ತಿಗಳಿಂದ (ದೈವ ಹಾಗೂ ಮನುಷ್ಯರಿಂದ ಉಂಟಾಗುವ ಅತೃಪ್ತಿಗಳಿಂದ) ರಕ್ಷಿಸಿ ಶುದ್ಧವಾಗಿಟ್ಟುಕೊಳ್ಳಬೇಕು'' ಎಂಬುದು ಅವನ ಅಭಿಪ್ರಾಯ. ದೇವರಿಂದ ಉಂಟಾಗುವ ಎಲ್ಲವೂ ತಮ್ಮ ಉತ್ಕೃಷ್ಟತೆಯಿಂದಾಗಿ ಗೌರವಕ್ಕೆ ಪಾತ್ರವಾಗುತ್ತವೆ. ಮನುಷ್ಯರಿಂದ ಬರುವ ಎಲ್ಲವೂ ಬಾಂಧವ್ಯದ ದೃಷ್ಟಿಯಿಂದಾಗಿ ನಮಗೆ ಪ್ರಿಯವಾಗಬೇಕು. ಕೆಲವೊಮ್ಮೆ ಒಳಿತು ಕೆಡುಕುಗಳ ಬಗೆಗೆ ಮಾನವನಿಗಿರುವ ಅಜ್ಞಾನದಿಂದಾಗಿ ಅವರ ಬಗೆಗೆ ನಮ್ಮಲ್ಲಿ ಕರುಣೆ

ಮತ್ತು ಅನುಕಂಪಗಳುಂಟಾಗುತ್ತವೆ. ಮಾರ್ಕಸ್ ಅರೀಲಿಯಸ್‌ನ ಈ ಅಭಿಪ್ರಾಯಗಳಲ್ಲಿ ಎಲ್ಲವನ್ನೂ ಇತ್ಯಾತ್ಮಕವಾಗಿ ಒಪ್ಪಿಕೊಳ್ಳುವಂತಹ ಜೀವನ್ಮುಖೀ ಮನೋಧರ್ಮ ಕಂಡುಬರುತ್ತದೆ.

ಎರಡನೆಯ ಶತಮಾನದ ಈ ಚಕ್ರವರ್ತಿಯ ಕಾಲದ ಬಗೆಗಿನ ಪರಿಕಲ್ಪನೆಗಳು ಇಪ್ಪತ್ತನೆಯ ಶತಮಾನದ ಕವಿಗಳ, ಚಿಂತಕರ ಆಲೋಚನೆಗಳೊಂದಿಗೆ ಹೊಂದಿಕೆಯಾಗುವುದು ಕಂಡಾಗ ಆಶ್ಚರ್ಯವಾಗುತ್ತದೆ. ವರ್ತಮಾನದ ಪ್ರಾಮುಖ್ಯತೆಯನ್ನು ಮತ್ತು ಕಾಲದ ಹರಿವನ್ನು ಸಮರ್ಪಕವಾಗಿ ಅರ್ಥ ಮಾಡಿಕೊಳ್ಳುವುದರ ಬಗ್ಗೆ ಮಾರ್ಕಸ್ ಅರೀಲಿಯಸ್ ಒತ್ತುಕೊಡುತ್ತಾನೆ: ''ನೀನು ಮೂರು ಸಾವಿರ ವರ್ಷಗಳು ಅಥವಾ ಹತ್ತು ಸಾವಿರ ವರ್ಷಗಳಷ್ಟು ಬದುಕಬಹುದು. ಆದರೆ ನೆನಪಿಡು, ಯಾವ ವ್ಯಕ್ತಿಯೂ, ಈಗ ತಾನು ಬದುಕಿರುವಾಗಿನ ಜೀವನವನ್ನು ಮಾತ್ರವಲ್ಲದೆ ಬೇರೆ ಯಾವುದೇ ಕಾಲದ ಜೀವನವನ್ನು ಕಳೆದುಕೊಳ್ಳಲಾರ... ಯಾವುದೇ ವ್ಯಕ್ತಿಯು ತನ್ನ ಗತಕಾಲವನ್ನಾಗಲೀ, ಭವಿಷ್ಯಕಾಲವನ್ನಾಗಲೀ ಕಳೆದುಕೊಳ್ಳಲಾರ. ಮನುಷ್ಯನ ಬಳಿ ಇರದೇ ಇರುವುದನ್ನು ಕಳೆದುಕೊಳ್ಳುವುದಾದರೂ ಹೇಗೆ? ಅತ್ಯಂತ ದೀರ್ಘಾಯುಷಿಯೂ ಅತ್ಯಂತ ಅಲ್ಪಾಯುಷಿಯೂ ಕೇವಲ ಒಂದೇ... ಏಕೆಂದರೆ ಇಬ್ಬರೂ ಕಳೆದುಕೊಳ್ಳುವುದು ವರ್ತಮಾನವನ್ನು ಮಾತ್ರ...'' ಹೀಗೆ ವರ್ತಮಾನವೊಂದೇ ಸತ್ಯ ಎಂಬುದನ್ನು ವಿಶದಪಡಿಸುತ್ತಾನೆ. ಈ ಮಾತುಗಳನ್ನು ಓದುವಾಗ ಎಲಿಯಟ್‌ನ ಈ ಸಾಲುಗಳು ನೆನಪಾಗುತ್ತವೆ :

"Time past and time future
What might have been and what has been
Point to one end which is always present"
(ಭೂತಕಾಲ ಮತ್ತು ಭವಿಷ್ಯಕಾಲ
ಏನಾಗಬಹುದಿತ್ತು ಮತ್ತು ಏನಾಗಿಹುದು
ಎಲ್ಲವೂ ಒಂದೆ ಗುರಿ ಸೂಚಿಸುವುದು
ಅದು ಎಂದೂ ವರ್ತಮಾನವಾಗಿಹುದು.)

ಸಹಬಾಳ್ವೆಗೆ ಅತ್ಯಗತ್ಯವಾದ ತಾಳ್ಮೆ, ಸಹಿಷ್ಣುತೆಗಳನ್ನು ರೂಢಿಸಿಕೊಳ್ಳಬೇಕಾಗಿರುವುದರ ಬಗೆಗೆ ಚಕ್ರವರ್ತಿ ಮಾರ್ಕಸ್ ಹೀಗೆ ಹೇಳುತ್ತಾನೆ: ''ಕಂಕುಳ ಸಂದಿಯಿಂದ ದುರ್ನಾತ ಬರುತ್ತಿರುವವರನನ್ನು ಕಂಡು ನೀನು ಕ್ರುದ್ಧನಾಗುವೆಯಾ? ಬಾಯಿಂದ ದುರ್ಗಂಧ ಬೀರುತ್ತಿರುವವನನ್ನು ಕಂಡು ಕೋಪಗೊಳ್ಳುವೆಯಾ? ನಿನ್ನ ಕೋಪ ನಿನಗೆ ಮಾಡುವ ಉಪಕಾರವಾದರೂ ಏನು? ಅವನ ಕಂಕುಳಿರುವುದೇ ಹಾಗೆ, ಅವನ ಬಾಯಿರುವುದೇ ಹಾಗೆ. ಹಾಗಿರುವಾಗ ಅಂಥ ವಾಸನೆಗಳು ಹೊರಬರಲೇಬೇಕು. ಹಾಗಾಗಿ, ನಮ್ಮ ವಿವೇಚನಾ ಶಕ್ತಿಯಿಂದ ಅಂಥ ಮನುಷ್ಯರ ವಿವೇಚನಾ ಶಕ್ತಿಯನ್ನು ಜಾಗ್ರತಗೊಳಿಸಿ, ಅವನ ತಪ್ಪನ್ನು, ಅಜ್ಞಾನವನ್ನು ತೋರಿಸಿಕೊಟ್ಟು ಅವನನ್ನು ಗುಣಪಡಿಸಬೇಕೇ ವಿನಾ ಕೋಪಗೊಳ್ಳಬೇಕಾಗಿಲ್ಲ.'' ಇಂಥದೊಂದು ಮಾರ್ಗ ಈಗ ಪ್ರಚಲಿತವಿರುವ ವೈಜ್ಞಾನಿಕ, ಮನೋವೈಜ್ಞಾನಿಕ ಸಲಹೆಗಳನ್ನು ಹೋಲುತ್ತದೆ. ನಿತ್ಯಜೀವನದಲ್ಲಿ ನಮ್ಮ ಸುತ್ತಮುತ್ತಣ ಸಮಾಜದೊಡನೆ ವ್ಯವಹರಿಸುವಾಗ ತಾಳಬೇಕಾದ ನಿಲುವನ್ನು ಮಾರ್ಕಸ್ ಅರೀಲಿಯಸ್ ಹೀಗೆ ವಿವರಿಸುತ್ತಾನೆ : ''ಈ ಪ್ರಪಂಚ ನಮ್ಮನ್ನು ಪ್ರೀತಿಸಲಿ ಎಂದಾಗಲೀ, ಗೌರವಿಸಲಿ ಎಂದಾಗಲೀ ನಾವು ನಿರೀಕ್ಷಿಸಲಾಗುವುದಿಲ್ಲ. ಜನಗಳು ಒಳ್ಳೆಯವರಿರುವರೆಂದಾಗಲೀ, ವಿವೇಕಿಗಳಾಗಿರುವರೆಂದಾಗಲೀ ಕೂಡ ನಾವು ನಿರೀಕ್ಷಿಸಲಾಗುವುದಿಲ್ಲ. ಆದ್ದರಿಂದ ಪ್ರತಿದಿನವೂ ನಿಮಗೆ ನೀವೇ ಈ ಮಾತುಗಳನ್ನು ಹೇಳಿಕೊಂಡು ನಿಮ್ಮ ಮುಂಜಾನೆಯನ್ನು ಆರಂಭಿಸಿ, ನಾನಿಂದು ಕೃತಘ್ನ, ದುರಹಂಕಾರಿ, ವಂಚಕ, ಅಸೂಯಪರ, ಅಧಿಕ ಪ್ರಸಂಗಿ ಮತ್ತು ಸಂಘಜೀವಿಯಲ್ಲದ ವ್ಯಕ್ತಿಗಳೊಡನೆ ಭೇಟಿಯಾಗಬೇಕಾಗುತ್ತದೆ. ಒಳಿತು ಕೆಡುಕುಗಳ ಬಗೆಗೆ ಅವರಿಗಿರುವ ಅಜ್ಞಾನದಿಂದಾಗಿ ಅವರ ವರ್ತನೆ ಹೀಗಿರುತ್ತದೆ. ಆದರೆ, ಸುಂದರವಾದ ಒಳಿತಿನ ಸ್ವಭಾವವನ್ನು ಕಂಡಿರುವ, ಕೆಡುಕಿನ ಕುರೂಪವನ್ನು ಅರಿತಿರುವ, ಅಪರಾಧ ಮಾಡುವವನ ಮನೋಧರ್ಮವನ್ನು ಅರಿತಿರುವ ನಾನು, ಇವರೆಲ್ಲರೂ ರಕ್ತ ಸಂಬಂಧದಿಂದ ನನ್ನ ಬಂಧುಗಳಲ್ಲದಿದ್ದರೂ, ನಾವೆಲ್ಲರೂ ಒಂದೇ ದೈವದ ಅಂಶಗಳಾಗಿರುವವರು ಎಂಬ ಸತ್ಯವನ್ನು ಅರಿತವನು. ಹಾಗಾಗಿ ನಾನು ಅವರುಗಳಿಂದ ತೊಂದರೆಗೊಳಗಾಗುವುದು ಸಾಧ್ಯವೇ ಇಲ್ಲ. ನಾವೆಲ್ಲ ಒಂದೇ ದೈವದ ಅಂಶಗಳಾಗಿರುವುದರಿಂದ ಎಲ್ಲರೂ ಬಂಧುಗಳಾಗಿದ್ದೇವೆ. ನನ್ನ ಬಂಧುಗಳೊಡನೆ ಕೋಪಗೊಳ್ಳುವುದಾಗಲೀ, ಅವರನ್ನು ದ್ವೇಷಿಸುವುದಾಗಲೀ ನನಗೆ ಸಾಧ್ಯವಿಲ್ಲ. ನಾವೆಲ್ಲರೂ ಕಾಲುಗಳಂತೆ, ಕೈಗಳಂತೆ, ಕಣ್ಣು ರೆಪ್ಪೆಗಳಂತೆ, ಮೇಲಿನ ಮತ್ತು ಕೆಳಗಿನ ಹಲ್ಲಿನ ಸಾಲುಗಳಂತೆ, ಪರಸ್ಪರ ಸಹಕಾರ, ಸೌಹಾರ್ದದಿಂದಿರಲು ಸೃಷ್ಟಿಸಲ್ಪಟ್ಟವರು. ಹಾಗಾಗಿ ಪರಸ್ಪರ ವಿರುದ್ಧ ವರ್ತಿಸುವುದು, ಪ್ರಕೃತಿ ನಿಯಮಕ್ಕೆ ವಿರುದ್ಧವಾದದ್ದು...'' 'ಚಿಂತನೆಗಳು' ಗ್ರಂಥದ ಎರಡನೆಯ ಭಾಗದಿಂದ ಉದ್ಧರಿಸಿರುವ ಈ ಭಾಗ ಚಕ್ರವರ್ತಿಯ ಅಪಾರ ಜ್ಞಾನ, ಲೋಕಾನುಭವ, ಮಾನವೀಯತೆಗಳ ಬಗೆಗೆ ಬೆಳಕು ಚೆಲ್ಲುತ್ತದೆ.

ಅಪರಾಧಗಳ ಉದ್ದೇಶಗಳ ಬಗೆಗೆ ವಿಶ್ಲೇಷಿಸುವ ಮಾರ್ಕಸ್ ಅರೀಲಿಯಸ್, ಥಿಯೋಫ್ರೇಸ್ಟಸ್ ಎಂಬ ಜ್ಞಾನಿಯ ಮಾತುಗಳನ್ನು ಉದ್ಧರಿಸಿ ಉದ್ದೇಶಪೂರ್ವಕ ಅಪರಾಧ ಮತ್ತು ಅನುದ್ದೇಶಪೂರ್ವಕ ಅಪರಾಧ ಎಂದು ಅಪರಾಧಗಳನ್ನು ವಿಭಜಿಸುತ್ತಾನೆ. ಅವನ ಅಭಿಪ್ರಾಯದಂತೆ, ಕೋಪದ ಭರದಲ್ಲಿ ಮಾಡಿದ ಅಪರಾಧಗಳಿಗಿಂತಲೂ, ಆಸೆ ಮತ್ತು ಬಯಕೆಗಳಿಂದ ಮಾಡಿದ ಅಪರಾಧಗಳು ಹೆಚ್ಚು ನಿಂದಾರ್ಹ. ಏಕೆಂದರೆ, ಕೋಪದಿಂದ ಉದ್ವಿಗ್ನನಾದವನು ಅಪ್ರಜ್ಞಾಪೂರ್ವಕವಾಗಿ ನಿರ್ದಿಷ್ಟ ಯಾತನೆಯಿಂದ ವಿವೇಚನೆಯನ್ನು ಕಳೆದುಕೊಳ್ಳುತ್ತಾನೆ. ಆದರೆ ಬಯಕೆ, ಆಸೆಗಳಿಂದ ಪ್ರೇರಿತನಾಗಿ ಅಪರಾಧ ಮಾಡುವವನು ಮಿತಿಮೀರಿದ ಲಾಲಸೆಯಿಂದ ತೀರಾ ಹೇಡಿಯಂತಿರುತ್ತಾನೆ. ಇಂತಹ ಹೇಳಿಕೆಗಳು ಯಾವುದೇ ಆಧುನಿಕ ಅಪರಾಧ ಶಾಸ್ತ್ರಜ್ಞನದಾಗಲೀ, ಆಧುನಿಕ ಅಪರಾಧ ಮನೋವಿಜ್ಞಾನಿಗಳದಾಗಲೀ ಆಗಿರದೆ, ಪ್ರತೀಕಾರ, ಮುಯ್ಯಿ, ಶಿಕ್ಷೆ, ರಾಜಕೀಯ ಮತ್ತು ಧಾರ್ಮಿಕ ಕಾರಣಗಳಿಗಾಗಿ ಚಿತ್ರಹಿಂಸೆ, ಮರಣದಂಡನೆಗಳು ತಾಂಡವವಾಡುತ್ತಿದ್ದ ಎರಡನೆಯ ಶತಮಾನದ ರೋಮನ್ ಚಕ್ರವರ್ತಿಯೊಬ್ಬನ ಮಾತುಗಳೆಂದು ನೆನೆದಾಗ ಮನಸ್ಸು ಆಶ್ಚರ್ಯಚಕಿತಗೊಳ್ಳುತ್ತದೆ.

ತನ್ನ ತಂದೆ, ತಾತ, ಗುರುಗಳು ಮತ್ತು ತನ್ನ ತಾಯಿಯ ಪ್ರಭಾವವನ್ನು ವಿಸ್ತಾರವಾಗಿ ಬರೆಯುತ್ತಾ ಮಾರ್ಕಸ್ ಅರೀಲಿಯಸ್ ತನ್ನ ತಂದೆ ಈ ಮಗನಿಂದ ಎಲ್ಲ ರೀತಿಯ ಅಹಂಕಾರಗಳನ್ನು ಹೋಗಲಾಡಿಸಿ, ಒಬ್ಬ ಚಕ್ರವರ್ತಿ ಯಾವುದೇ ರಕ್ಷಣಾ ಸಿಬ್ಬಂದಿ ಇಲ್ಲದೆ, ಕಿಂಕಾಪು ರೇಷ್ಮೆ ಉಡುಪುಗಳಿಲ್ಲದೆ, ಹಗಲು ದೀವಟಿಗೆಗಳ ವೈಭವವಿಲ್ಲದೆ ಸಾಮಾನ್ಯ ಮನುಷ್ಯನಂತೆ ಬದುಕಬಹುದೆಂಬುದನ್ನು ಮನಗಾಣಿಸಿದ್ದರು ಎಂದು ನೆನೆಯುತ್ತಾನೆ.

ಆದರೂ, ಈ ಉದಾರವಾದಿ ಚಕ್ರವರ್ತಿಯು ಕ್ರಿಶ್ಚಿಯನ್ ಪ್ರಚಾರಕರ ಚಿತ್ರಹಿಂಸೆಗೆ ಒಪ್ಪಿಗೆ ನೀಡಿದನೆಂಬ ಅಪಾದನೆಯಿದೆ. ಇದಕ್ಕೆ ಕಾರಣವನ್ನೂ ಅವನೇ ನೀಡಿದ್ದಾನೆ. ಚಕ್ರವರ್ತಿಯನ್ನೊಳಗೊಂಡು ಅಂದಿನ ರೋಮನ್ ಪ್ರಜೆಗಳು ಅಂದಿನ ರೋಮ್‌ನಲ್ಲಿ ಪ್ರಚಲಿತವಿದ್ದ ಧರ್ಮವನ್ನು (Paganism) ಒಪ್ಪಿಕೊಂಡಿದ್ದರು. ಕ್ರಿಶ್ಚಿಯನ್ ಮತ ಪ್ರಚಾರಕರು ರೋಮ್ ಅಧಿಕೃತವಾಗಿ ಮನ್ನಿಸಿದ್ದ ಧರ್ಮವನ್ನು ಟೀಕಿಸಿ, ರೋಮ್‌ನವರು ನಂಬಿದ್ದ ದೈವಗಳನ್ನು ನಿಂದಿಸಿ ಅಲ್ಲಗಳೆದಾಗ, ಪ್ರಜೆಗಳು ಸಹಜವಾಗಿಯೇ ಕ್ರುದ್ಧರಾಗಿ ಅಧಿಕಾರಿಗಳನ್ನು ಈ ಮತಪ್ರಚಾರಕರಿಗೆ ಶಿಕ್ಷೆ ನೀಡುವಂತೆ ಒತ್ತಾಯಿಸುತ್ತಿದ್ದರು. ಅಧಿಕಾರಿಗಳು ಚಕ್ರವರ್ತಿಗೆ ಮನವಿ ಮಾಡುತ್ತಿದ್ದರು. ಸಾಮ್ರಾಜ್ಯದ ಶಾಂತಿ ಭದ್ರತೆಗಳ ರಕ್ಷಣೆಗಾಗಿ ಚಕ್ರವರ್ತಿ ತನ್ನ ಅನುಮತಿಯನ್ನು ಕೊಡಬೇಕಾಗುತ್ತಿತ್ತು. ರೋಮ್ ಜನರಿಗೆ ಕ್ರಿಶ್ಚಿಯನ್ ಧರ್ಮದ ದೃಷ್ಟಿಕೋನ ಅರ್ಥವಾಗುತ್ತಿರಲಿಲ್ಲ– ಕ್ರಿಶ್ಚಿಯನ್ನರಿಗೆ ರೋಮನ್ನರ ಧರ್ಮವನ್ನರಿಯುವ ತಾಳ್ಮೆ ಇರಲಿಲ್ಲ. ಹೀಗಾಗಿ, ಎಲ್ಲ ಕಡೆ ನಡೆಯುವಂತೆ ಅಲ್ಲಿಯೂ ಒಂದೆರಡು ಹಿಂಸೆ, ಸಾವು ನಡೆದ ದಾಖಲೆಯಿದೆ. ಮಾರ್ಕಸ್ ಅರೀಲಿಯಸ್‌ನ ಹಲವು ಸೂಕ್ತಿಗಳನ್ನು ನೋಡುವಾಗ, ಅವನನ್ನು ಒಂದು ಮತಕ್ಕೆ ಸೇರಿದವನೆನ್ನುವುದು ತೀರಾ ತಪ್ಪಾಗುತ್ತದೆ. ಏಕೆಂದರೆ, ಅವನ ಸೂಕ್ತಿಗಳು ಹಿಂದೂಧರ್ಮ, ಕ್ರಿಶ್ಚಿಯನ್ ಧರ್ಮ, ಅತೀಂದ್ರಿಯವಾದ ಮುಂತಾದ ಎಲ್ಲ ಸಿದ್ಧಾಂತಗಳ ಸಾರವನ್ನೊಳಗೊಂಡಿವೆ.

''ಅಂತರಂಗವನ್ನು ವೀಕ್ಷಿಸು, ಯಾವುದೇ ವಸ್ತುವಿನ ವಿಶೇಷ ಗುಣವಾಗಲೀ, ಮೌಲ್ಯವಾಗಲೀ ನಿನ್ನಿಂದ ಕಡೆಗಾಣಿಸಲ್ಪಡದಿರಲಿ'', ''ನೀನೊಬ್ಬ ಸೀಸರ್ ಆಗದಂತೆ ಎಚ್ಚರಿಕೆಯಿಂದಿರು'', ''ಜೀವನದ ಕಲೆ ಕುಸ್ತಿಪಟುವಿನ ಕಲೆ'', ''ಪಶ್ಚಾತ್ತಾಪವೆಂಬುದು ಉಪಯುಕ್ತವಾದದ್ದನ್ನು ಅಲಕ್ಷಿಸಿದ್ದಕ್ಕಾಗಿ ಮಾಡಿಕೊಳ್ಳುವ ಆತ್ಮನಿಂದನೆ.'' ಇವು ಒಂದೆರಡು ಉದಾಹರಣೆಗಳು ಮಾತ್ರ! ಈ ಪುರಾತನ ಚಕ್ರವರ್ತಿಯ ಚಿಂತನೆಗಳು ಇಂದಿನ ಸಮಾಜಕ್ಕೆ ದಾರಿದೀಪವಾಗಬಲ್ಲವು.

*(ಜಾರ್ಜ್ ಲಾಂಗ್ ಅನುವಾದಿಸಿರುವ ''ಮೆಡಿಟೇಷನ್ಸ್ ಆಫ್ ಮಾರ್ಕಸ್ ಅರೀಲಿಯಸ್'' ಗ್ರಂಥಕ್ಕೆ ಋಣಿ)*

ಎಲ್. ವಿ. ಶಾಂತಕುಮಾರಿ
ನಂ. ೧೫೮, ೪ನೇ ಮುಖ್ಯ ರಸ್ತೆ, ೫ನೇ ಅಡ್ಡರಸ್ತೆ, ಪಿ.ಪಿ. ಲೇಔಟ್, ಬನಶಂಕರಿ ೩ನೇ ಹಂತ
ಬೆಂಗಳೂರು - ೫೬೦ ೦೮೫

# ವಚನವೊಂದರ ನವನವೋನ್ಮೇಶ ಅರ್ಥ




ತಾಳಮಾನ ಸರಿಸವನರಿಯೆ
ಓಜೆ ಬಜಾವಣೆಯ ಲೆಕ್ಕವನರಿಯೆ
ಅಮೃತಗಣ ದೇವಗಣವನರಿಯೆ
ಕೂಡಲಸಂಗಮದೇವಾ ನಿನಗೆ
ಕೇಡಿಲ್ಲವಾಗಿ
ಆನು ಒಲಿದಂತೆ ಹಾಡುವೆ

– ಬಸವಣ್ಣ

ಬಸವಣ್ಣನವರ ವಿಚಾರಗಳಲ್ಲಿ ಹೊಸತನವಿದೆ, ತಾಜಾತನವಿದೆ ; ಅದೇ ತಾನೆ ಅರಳಿದ ಹೂವಿನ ಕಾಂತಿಯಿದೆ. ಅವರ ಆಲೋಚನೆಗಳಲ್ಲಿ, ಸೈದ್ಧಾಂತಿಕ ಪ್ರಜ್ಞೆಗಳಲ್ಲಿ, ಆಶಯ-ಆಕೃತಿಗಳ ಅನಾವರಣದಲ್ಲಿ ಹೀಗೆ ಎಲ್ಲೆಂದರಲ್ಲಿ ದೇಸಿ ಸ್ಪರ್ಶವಿದೆ, ದೇಸಿತನವಿದೆ. 'ಆನು ಒಲಿದಂತೆ ಹಾಡುವೆ' ಎಂಬುದೊಂದು ಅಂಥ ದೇಸಿ ಚಿಂತನೆಯ ಕುಲುಮೆಯಲ್ಲಿ ಮೈದಾಳಿದ ಕ್ರಾಂತಿಕಾರಿ ಆಲೋಚನೆಯಾಗಿದೆ.

ಬಸವಣ್ಣ ತನ್ನ ಕಾವ್ಯದ ನೆಲೆಯ ಕುರಿತಾಗಿ ಮಾತಾಡುತ್ತಾ ತಾಳಮಾನ (ತಾಳ), ರಾಗಗಳ ಆರೋಹಣ, ಅವರೋಹಣಗಳ ಕ್ರಮ (ಓಜೆ), ಬಜಾವಣೆಯ ನಾದಲಯಗಳ ಆಲಾಪ (ಬಜಾವಣೆ) ಮುಂತಾದವುಗಳ (ಮೃದಂಗ, ಡಮರುಗ, ತಂತಿವಾದ್ಯ, ಚರ್ಮವಾದ್ಯ ಮುಂತಾದವು) ಅರಿವನ್ನು ನಿರಾಕರಿಸುತ್ತಾರೆ.

ತಾಳಗಳ ಮಾಧುರ್ಯ, ರಾಗಗಳ ಏರು-ಇಳುವು, ವಾದ್ಯಗಳ ನಾದಲಯಗಳ ಲೆಕ್ಕ ಮತ್ತು ಇವು ಉಂಟುಮಾಡುವ ಇಂಪು, ಕಂಪು, ಮಾಧುರ್ಯ ಇತ್ಯಾದಿಯನ್ನು ಅರಿಯದ ಮುಗ್ಧರೇನಲ್ಲ ಬಸವಣ್ಣನವರು. ಈ ವಚನದಲ್ಲಿ ಉಕ್ತವಾಗಿರುವ 'ಅರಿಯೆ' ಎಂಬುದನ್ನು ಈಗಿರುವ ಲೌಕಿಕವಾದ ಅರ್ಥದಲ್ಲಿ ಅರ್ಥೈಸಬೇಕಾಗಿಲ್ಲ. ಇಲ್ಲಿ ಅದು ಉಚಿತವೂ ಅಲ್ಲ, ವಿವೇಕವೂ ಅಲ್ಲ ಹಾಗಾದರೆ 'ಅರಿಯೆ' ಎಂಬುದು ಏನನ್ನು ಧ್ವನಿಸುತ್ತದೆ ಇಲ್ಲಿ ?

ಕವಿ ಯಾವತ್ತೂ ವ್ಯಾಕರಣ ಬದ್ಧನಲ್ಲ; ವ್ಯಾಕರಣದಿಂದ ನಿರ್ಬಂಧಿತನೂ ಅಲ್ಲ. ಅವನು ಸರ್ವತಂತ್ರ ಸ್ವತಂತ್ರ ; ಸ್ವಚ್ಛಂದ ಮನಸ್ಸುಳ್ಳ ಅವನು ಯಾವತ್ತೂ ಲಘಿಮಾ ಕೌಶಲ್ಯಕ್ಕೆ ತುಡಿಯುವವನು. ಲಘಿಮಾಕುಶಲನಾದ ಕವಿಯ ಆಲೋಚನೆಗಳು ಏನಿದ್ದರೂ ವ್ಯಾಕರಣಕ್ಕೆ ವಸ್ತುವಾಗಬಲ್ಲವು ; ಆಹಾರವಾಗಬಲ್ಲವು ಅಷ್ಟೇ. ಅದಕ್ಕೆಂದೇ ಕವಿಯ ಪದೋಕ್ತಿಗಳನ್ನು ಉವಾಚಗಳನ್ನು ವ್ಯಾಕರಣದ ಜಾಳೀಸಿನಿಂದಲೇ ಅರ್ಥೈಸಬೇಕಾಗಿಲ್ಲ. ಅದನ್ನು ಸಂದರ್ಭದ ನಿಕಷದಲ್ಲಿಟ್ಟು ಅನಾವರಣಗೊಳಿಸಬೇಕು ; ಸನ್ನಿವೇಶದ ಅಭಿನಿವೇಶದಲ್ಲಿಟ್ಟು ಪುಟವಿಡಬೇಕು. ಹಾಗಾದರೆ ಆ ಅರ್ಥೈಕೆ ಏನಿದ್ದಿರಬಹುದು, ಎಂತಿದ್ದಿರಬಹುದು ?

ಈ ವಚನದಲ್ಲಿ ಉಕ್ತವಾಗಿರುವ ತಾಳಮಾನದ ಸರಸ, ಓಜೆ ಬಜಾವಣೆಯ ಲೆಕ್ಕ, ಪದಗಳ ಅರ್ಥವಿನ್ಯಾಸ, ಅರ್ಥಸ್ವಾರಸ್ಯ ಕುತೂಹಲಕಾರಿಯಾಗಿದೆ. ಈ ನುಡಿಯಲ್ಲಿ ಉಕ್ತವಾಗಿರುವ 'ಅರಿಯೆ' ಎಂಬುದನ್ನು ಬಿಡಿಸಿದರೆ 'ಅರಿ+ಎ' ಎಂದಾಗುತ್ತದೆ. 'ಎ' ಎಂಬುದು ನಿಷೇಧಾರ್ಥಕ ಪ್ರತ್ಯಯ ಮತ್ತು 'ಇಲ್ಲ' ಎಂಬ ನಿಷೇಧಾರ್ಥಕ ಕ್ರಿಯಾಪದದ ಕೆಲಸವನ್ನು ಮಾಡುತ್ತದೆ. ಅಂದರೆ ಆ ಅರಿವನ್ನು ಇಲ್ಲವಾಗಿಸುವ ಒಂದು (ಶೂನ್ಯ) ಸ್ಥಿತಿಯನ್ನು ಈ ಪದ ಪ್ರಚುರಪಡಿಸುತ್ತದೆ. ಆ 'ಇಲ್ಲದ ಸ್ಥಿತಿ' ಎಂಬುದು ಬೇರೇನಾಗಿರದೆ ತಾಳಮಾನ ಸರಿಸ-ಆರೋಹಣ ಅವರೋಹಣ-ನಾದಲಯಗಳ ಸಾಂಗತ್ಯವಿಲ್ಲದ ಒಂದು ಶೂನ್ಯ ಸ್ಥಿತಿಯನ್ನು ವ್ಯಂಜಿಸುತ್ತದೆ. ಅಂದರೆ ಅವುಗಳ ಕುರಿತಾದ ಅರಿವನ್ನು ಅಲಕ್ಷಿಸಿದ್ದಾನೆ ಬಸವಣ್ಣ. ಎಂತು ಅವಗುಣಗಳು ಅಳಿದು ಶೂನ್ಯವಾಗುವಂತೆ ಕಾವ್ಯ ಗುಣಗಳು ಅಳಿದು (ಸಾಹಿತ್ಯ, ಸಂಗೀತ ಇತ್ಯಾದಿ) ಪರಂಪರಾಗತ ಕಾವ್ಯತತ್ವಗಳು ಶೂನ್ಯವಾಗುವುದು. ಹಾಗಾದರೆ ಬಸವಣ್ಣನವರೇಕೆ ಸಾಹಿತ್ಯ-ಸಂಗೀತಗಳ ಸಾಹಚರ್ಯ-ಸಾಂಗತ್ಯವನ್ನು ನಿರಾಕರಿಸುತ್ತಾರೆ ? ಈ ಪ್ರಶ್ನೆ ಚಾರಿತ್ರಿಕ ಸೂಕ್ಷ್ಮತೆಗಳನ್ನು ಸನ್ನಿವೇಶದ ತುರ್ತುಗಳನ್ನು ಅಧ್ಯಯನಿಸಲು ಪ್ರಚೋದಿಸುತ್ತದೆ. ಯಾಕೆಂದರೆ ಯಾವುದೇ ಆಲೋಚನೆ/ಚಿಂತನೆಗಳ ಪುರಸ್ಕಾರ, ತಿರಸ್ಕಾರಗಳ ಹಿಂದೆ ಸಂದರ್ಭದ ಸ್ಪರ್ಶವಿರುತ್ತದೆ, ಕಾಲದ ಒತ್ತಡವಿರುತ್ತದೆ, ಚಾರಿತ್ರಿಕ ಸವಾಲು-ಸಮಸ್ಯೆಗಳಿರುತ್ತವೆ. ಇಲ್ಲಿ ಇದ್ದುದು ಇದೇ.

ಸಾಹಿತ್ಯ ಮತ್ತು ಸಂಗೀತ ಭಾರತೀಯ ಪರಂಪರೆಯಲ್ಲಿ ಜೊತೆ ಜೊತೆಯಲ್ಲಿಯೇ ಸಾಗಿಬಂದಿವೆ. ಪರಸ್ಪರ ಸಾಹಚರ್ಯದಿಂದ ಸಂಗತಗೊಂಡು ಸಂಚಲಿಸಿವೆ. ಅಂತೆಯೇ ಸಾಹಿತ್ಯ ಮತ್ತು ಸಂಗೀತ ಅರ್ಧನಾರೀಶ್ವರರಂತೆ, ಗಂಡಭೇರುಂಡದಂತೆ ಒಂದರೊಳಗೊಂದು ಬೆರೆತು ಸಮ್ಮಿಳಿತಗೊಂಡು ಸಾಗಿವೆ. ಆದ್ದರಿಂದಲೇ ಸಾಹಿತ್ಯದ ಹೊರತು ಸಂಗೀತವನ್ನು, ಸಂಗೀತದ ಹೊರತು ಸಾಹಿತ್ಯವನ್ನು ಕಲ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ ಸಾಹಿತ್ಯಚರಿತ್ರೆಯಲ್ಲಿ.

ಭಾರತೀಯ ಕಾವ್ಯ ಪರಂಪರೆಯಲ್ಲಿ ಕಾವ್ಯದ ಸೌಂದರ್ಯಕ್ಕೆ ವಿಶೇಷ ಮನ್ನಣೆಯಿದೆ. ಅಂತೆಯೇ ಕಾವ್ಯವನ್ನು ಸಹೃದಯ ಸೊಗಸುವ ರೀತಿಯಲ್ಲಿ ಕೋದುಗೊಳಿಸಿದ್ದಾನೆ ಕವಿ. ಆ ಕಾರಣಕ್ಕೇನೇ ಭಾರತೀಯ ಕಾವ್ಯತತ್ವದಲ್ಲಿ ಅಲಂಕಾರ, ರಸ, ಧ್ವನಿ, ವಕ್ರೋಕ್ತಿ, ರೀತಿ, ಗುಣ, ಕವಿಸಮಯ, ದೋಷ, ಔಚಿತ್ಯ ಮುಂತಾದ ಕಾವ್ಯಸಿದ್ಧಾಂತಗಳು ವ್ಯಾಪಕವಾಗಿ ಚರ್ಚೆಗೆ ಈಡಾಗುತ್ತಾ ಕಾವ್ಯಸೌಂದರ್ಯಕ್ಕೆಂದೇ ಮೈದಾಳಿದ ಪ್ರಸ್ಥಾನಗಳಾಗಿವೆ. ಕಾವ್ಯಸೌಂದರ್ಯದ ಆಶಯವೂ ಮನೋಆನಂದವೇ ಆಗಿದೆ. ಇಂಥ ಪರಂಪರೆಯ ಪ್ರಸ್ಥಾನದಲ್ಲಿ ಮೈದಾಳಿದ ಯಾವುದೇ ಕಾವ್ಯವೂ ಸಂಗೀತದ ಸಾಹಚರ್ಯವನ್ನು ಛಂದಸ್ಸಿನ ಸಾಂಗತ್ಯವನ್ನು ಹೊತ್ತುಕೊಂಡೇ ರೂಹು ತಳೆಯುತ್ತದೆ. ಏಕೆಂದರೆ ಎರಡರ ಉದ್ದೇಶವೂ ಸೌಂದರ್ಯೋಪಾಸನೆಯೇ ಆಗಿದೆ. ತಾಳ, ರಾಗ, ನಾದ, ಲಯ ಮುಂತಾದವುಗಳು ಮಾಧುರ್ಯಾದಿ ಗುಣಗಳಿಂದ ಕಿವಿಗೆ ಸೊಗಯಿಸುತ್ತವೆ; ಹೃದಯ ಆಹ್ಲಾದಕ್ಕೆ ಆಹ್ವಾನ ನೀಡುತ್ತವೆ. ಕಿವಿಗೆ ಸೊಗಯಿಸುವುದು ಎಂದರೂ ಸೌಂದರ್ಯವೆಂದೇ ಅರ್ಥ.

ಇನ್ನು ಅಮೃತಗಣ ದೇವಗಣಗಳ ಹೆಗ್ಗಳಿಕೆ ಯಾದರೂ ಏನು ? ಕಣ್ಣಿಗೆ ಮುದ ನೀಡುವುದೇ ಆಗಿದೆ. ಬ್ರಹ್ಮ, ವಿಷ್ಣು, ರುದ್ರಗಣಗಳಿಂದ ಕಾವ್ಯ ಸೊಗಯಿಸುತ್ತದೆ. ಕವಿಯ ವರ್ಣೋಕ್ತಿ ವಿಶೇಷಗಳಿಂದ ಪ್ರಾಸ, ಲಯ, ಯತಿ ಉಂಟಾಗುತ್ತವೆ. ನೋಡಲೂ ಸೊಗಸು, ಕೇಳಲೂ ಸೊಗಸು. ಹೀಗೆ ದೃಶ್ಯ-ಶ್ರವ್ಯ ಮಾರ್ಗಗಳೆರೆಡರಲ್ಲೂ ಸೌಂದರ್ಯೋಪಾಸನೆಯನ್ನು ಜೀವದ್ರವ್ಯವಾಗಿಸಿಕೊಂಡಿದ್ದ ಕಾವ್ಯಪರಂಪರೆಯನ್ನು ಬಸವಣ್ಣನವರೇಕೆ ನಿರಾಕರಿಸಿಬಿಟ್ಟರು ? ಆ ಮೂಲಕ ಕಾಲದ ಉಪಹತಿಯಿಂದೇಕೆ ಬಿಡುಗಡೆಗೊಳ್ಳಲು ಬಯಸಿದರು ?

'ಓಜೆ ಬಜಾವಣೆಯ ಲೆಕ್ಕವನರಿಯೆ, ಅಮೃತಗಣ ದೇವಗಣವನರಿಯೆ' ಎಂಬ ಮಾತಿನ ಮೂಲಕ ಬಸವಣ್ಣ ತಾಳದ ಕ್ರಮಗಳನ್ನು ; ಬ್ರಹ್ಮ-ವಿಷ್ಣು-ರುದ್ರ ಗಣಗಳಂತಹ ಅಂಶಗಣಗಳನ್ನು ನಿರಾಕರಿಸುತ್ತಾರೆ. ಆ ಮೂಲಕ ನಾದವನ್ನು, ಗೇಯತೆಯನ್ನು, ಸಂಗೀತದ ಸಾಂಗತ್ಯವನ್ನು ಮೀರಿ ನಿಲ್ಲುತ್ತಾರೆ. ಅಂತೆಯೆ ಬಸವಣ್ಣನಲ್ಲಿ ನಾದ, ಗೇಯತೆ ಒಟ್ಟಾರೆ ಸಂಗೀತದ ಸಾಹಚರ್ಯಗಳು ಕಡ್ಡಾಯವೇನಲ್ಲ, ಐಚ್ಛಿಕವಷ್ಟೇ. ಏಕೆಂದರೆ ಯಾವತ್ತೂ ಕಡ್ಡಾಯದ ಉಪಕ್ರಮಗಳು, ಲಕ್ಷ್ಮಣರೇಖೆಗಳು ಸೃಜನಶೀಲತೆಯನ್ನು ಸಾಯಿಸುತ್ತವೆ, ತಾಜಾತನವನ್ನು ತಗ್ಗಿಸುತ್ತವೆ, ಹೊಸತನದ ಕಾಂತಿಯನ್ನು ಕುಗ್ಗಿಸುತ್ತವೆ. ಒಟ್ಟಾರೆಯಾಗಿ ಬಸವಣ್ಣನ ಚಿಂತನಾಕ್ರಮದಿಂದ ಸಾಹಿತ್ಯ/ಕಾವ್ಯದಲ್ಲಿನ ಬಿಗಿಬಂಧ ಸಡಿಲಿತು; ಜೊತೆಗೆ ಪದ್ಯ ನಿರ್ಬಂಧನೆಯ ಉಲ್ಲಂಘನಾ ಉಪಕ್ರಮಗಳು ವಸ್ತುಕದ ವಿರೋಧಕ್ಕೆ ವರ್ಣಕದ ನಾಂದಿಗೆ ನೆಲೆಯಾದವು. ಪರಿಣಾಮವಾಗಿ ಆಡುಭಾಷೆ ವಚನಕಾವ್ಯದ ಜೀವದ್ರವ್ಯವಾಯಿತು.

ಇದಕ್ಕೆ ಬಸವಣ್ಣನವರ ಸಾಮಾಜಿಕ ಕಾಳಜಿ, ಸಾಂಸ್ಕೃತಿಕ ಮುನ್ನೋಟಗಳೇ ಕಾರಣವೆಂಬುದನ್ನು ಬಿಡಿಸಿ ಹೇಳಬೇಕಾದ ಅಗತ್ಯವಿಲ್ಲ. ಅಂತೆಯೇ ''ಯಾವ ಸಾಹಿತ್ಯ ಚಳುವಳಿಯನ್ನೇ ನಾವು ನೋಡಿದರೂ, ಆ ಚಳುವಳಿಯ ಕೇಂದ್ರ ವ್ಯಕ್ತಿಗಳ ಹಂಬಲ ಕಾವ್ಯ ಭಾಷೆಯನ್ನು ಆಡುಮಾತಿನ ಸಮೀಪಕ್ಕೆ ತರಬೇಕೆಂಬ, ಕಾವ್ಯವನ್ನು ಬದುಕಿಗೆ ಹತ್ತಿರವಾಗಿಸಬೇಕೆಂಬ ಪ್ರಯತ್ನದಲ್ಲಿ ವ್ಯಕ್ತವಾಗಿರುತ್ತದೆ'' (ಜಿ.ಎಸ್.ಎಸ್.: ೧೯೬೩ : ಸಮಗ್ರ ಗದ್ಯ : ೧೧೮) ಎಂಬ ಮಾತುಗಳು ಔಚಿತ್ಯಪೂರ್ಣ ಎನಿಸುತ್ತವೆ.

**ಡಾ|| ಬಿ. ಶರಣಪ್ಪ ಸತ್ಯಂಪೇಟೆ**
ಸತ್ಯಂಪೇಟೆ, ಸುರಪುರ, ಕಲಬುರ್ಗಿ

**HOSATHU** Kannada Monthly / February 2007 Rs. 12
Registered CPMG / KA / BGE – 7 / 2006-08. Posted at Bangalore PSO on the 28th of every month
WPP No. 14. Licenced to post without prepayment. RNI Regn. No. KARKAN/1999/614.


# 'ಕರ್ನಾಟಕ 50ರ ಸಂಭ್ರಮ'ಕ್ಕೆ ನವಕರ್ನಾಟಕದ ಕೊಡುಗೆ






















ಕನ್ನಡದ ಚಿಣ್ಣರಿಗೆ ಬಣ್ಣದ ಚಿತ್ರಪಟಗಳು !
ಪುಟಾಣಿಗಳಿಗೆ ನೀಡಲು ಚೆಂದದ ಉಡುಗೊರೆ !!

ಪ್ರತಿಯೊಂದು ಪಟದ ಹಿಂಬದಿಯಲ್ಲಿ ಪುಟಾಣಿಗಳಿಗಾಗಿ
ಸಚಿತ್ರ ಕಥೆ ಹಾಗೂ ಚಿತ್ರ ಮಾಹಿತಿಗಳಿವೆ

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. 5159, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 1. ✆ : 22203580, 30578022, ಫ್ಯಾಕ್ಸ್: 30578023
e-mail : navakarnataka@vsnl.com web : www.navakarnatakabooks.com


































**ಎಲ್ಲ ಚಿತ್ರಪಟಗಳು ಇಂಗ್ಲಿಷಿನಲ್ಲಿಯೂ ಲಭ್ಯವಿವೆ ! ಬೆಲೆ ರೂ. 30 ಮಾತ್ರ**